# ಕಸ್ತೂರಿ

ಕನ್ನಡ ಡೈಜೆಸ್ಟ್




ಸಂಪಾದಕ :

ಜಿ. ವಾಸುದೇವ

ಕಲಿ

ಕೆ. ಬಿ. ಕುಲಕರ್ಣಿ

ಮುಖಪುಟ :

ಪ್ರಕೃತಿ

ಚಿತ್ರ :

ಸೂರ್ಯಕಾಂತ ದುಧೇದಿಯಾ


ಎಪ್ರಿಲ್ ೧೯೮೧ ರಿಂದ

ಪರಿಷ್ಕೃತ ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೦೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೩-೦೦ |
| ೨ ವರ್ಷಕ್ಕೆ | ,, | ೪೫-೦೦ |
| ೩ ವರ್ಷಕ್ಕೆ | ,, | ೬೬-೦೦ |

ಈಗಾಗಲೇ ಚಂದಾದಾರರಾಗಿರುವವರಿಗೆ ಅವರ ಚಂದಾ ಅವಧಿ ಮುಗಿಯುವವರೆಗೂ ಹಳೆಯ ದರದಲ್ಲೇ 'ಕಸ್ತೂರಿ'ಯನ್ನು ಕಳಿಸಲಾಗುತ್ತದೆ. —ವ್ಯವಸ್ಥಾಪಕ


KASTURI April 1981


## ಬೆಳಕಿಂಡಿ

ಸ್ತ್ರೀಯರ ಫ್ಯಾಶನ್ ಎಂದರೆ ಒಂದು ರೀತಿಯ ಅಂಟು ಜಾಡ್ಯವಿದ್ದಂತೆ. ಅವುಗಳನ್ನು ಹರಡುವ ಕ್ರಿಮಿಗಳೆಂದರೆ ವ್ಯಾಪಾರಿಗಳು.

*

ಜೀವನದಲ್ಲಿ ಎರಡು 'ಟ್ರಜಿಡಿ'ಗಳಿರುತ್ತವೆ. ಒಂದು, ಮನದ ಆಶೆಯನ್ನು ಕಳೆದುಕೊಳ್ಳುವುದು; ಎರಡು, ಕಳೆದುಕೊಂಡ ಅದನ್ನು ಮತ್ತೆ ಹುಡುಕಿ ಪಡೆದುಕೊಳ್ಳುವುದು.

*

ಅಧಿಕಾಂಶ ದಂಪತಿ ಎಂದಿಗೂ ಒಬ್ಬರೊಬ್ಬರನ್ನು ಅರ್ಥ ಮಾಡಿಕೊಳ್ಳುವುದೇ ಇಲ್ಲ.

•

ಕೆಲ ಹೆಂಗಸರು ಅದೆಷ್ಟು ಮನೆಯ ಹುಳುಗಳಾಗಿರುತ್ತಾರೆಂದರೆ ಅವರು ಸಮಾಜಕ್ಕೆ ಅನವಶ್ಯವೇ ಆಗಿರುತ್ತಾರೆ.

—ಜಾರ್ಜ್ ಬರ್ನಾರ್ಡ್ ಶಾ

*

ಜ್ವರ ವ್ಯಾಧಿಯ ಲಕ್ಷಣವೇ ಹೊರತು ವ್ಯಾಧಿಯಲ್ಲ. ಮತ್ತೆ ಒಂದು ರೀತಿಯಲ್ಲಿ ಬೇಸರವೂ ಜ್ವರವಿದ್ದ ಹಾಗೆಯೆ.

—ಫ್ರಾನ್ಸಿಸ್ ಪೆರಿನ್

*

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**




**ದೇವರು**

ಮಾರ್ಚ್ 'ಕಸ್ತೂರಿ'ಯಲ್ಲಿಯ ಡಾ. ಎಂ. ಎಸ್. ಕಿರ್ಲೋಸ್ಕರ ಅವರ 'ದೇವರಲ್ಲಿ ನಾವು ನಂಬಿಕೆಯಿಡಬೇಕೆ?' ಎಂಬ ಲೇಖನ ಅರ್ಥ ಗಂಭೀರವಾಗಿದೆ. ನಾನು ಈ ಲೇಖನವನ್ನು ನನ್ನ ೩೨ನೇ ಜನ್ಮ ದಿನದಂದು ಓದಿದೆ. ಈ ೩೨ ವರ್ಷಗಳಲ್ಲಿ ದೇವರಲ್ಲಿ ವಿಶ್ವಾಸ ಇದ್ದವರ ಗತಿ ಹಾಗೂ ವಿಶ್ವಾಸ–ಇಲ್ಲದವರ ಪರಿಸ್ಥಿತಿಗಳನ್ನು ನಾನು ಆಳವಾಗಿ ಪರಿಶೀಲಿಸಿ, 'ದೇವರು' ಕೇವಲ ಅಶಕ್ತರ ಕಲ್ಪನೆ ಎಂಬ ನಿರ್ಣಯಕ್ಕೆ ಬಂದಿದ್ದೇನೆ.

ತಮ್ಮದೇ ಆದ ಉದಾಹರಣೆಗಳಿಂದ ನಾಸ್ತಿಕತ್ವವನ್ನು ಲೇಖಕರು ಓದುಗರಿಗಾಗಿ ಸುಲಭವಾದ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ. ತಮ್ಮ ಆಶೆ ಈಡೇರಿದರೆ ದೇವರಿದ್ದಾನೆ ಹಾಗೂ ಕಷ್ಟದಲ್ಲಿ ನೆರವಾಗುತ್ತಾನೆ; ಆಶೆ ಇಡೇರದಿದ್ದರೆ ದೇವರು ನಮ್ಮಲ್ಲಿ ಕೋಪಿಸಿಕೊಂಡಿದ್ದಾನೆ, ನಮ್ಮನ್ನು ಪರೀಕ್ಷಿಸುತ್ತಾನೆ, ಎನ್ನುವ ಮೂಢ ತರ್ಕವನ್ನು ಲೇಖಕರು ಸಮರ್ಥವಾಗಿ ಖಂಡಿಸಿದ್ದಾರೆ. ಸಂಪೂರ್ಣ ನಾಸ್ತಿಕರಲ್ಲದ ಆದರೆ ಆಸ್ತಿಕತ್ವದಲ್ಲಿ ವಿಶ್ವಾಸ ಇಲ್ಲದ ಓದುಗರಿಗೆ ವಿಚಾರಾತ್ಮಕ ಹಾಗೂ ತರ್ಕಬದ್ಧವಾದ ಲೇಖನ ಒದಗಿಸಿದ ಡಾ. ಕಿರ್ಲೋಸ್ಕರರವರಿಗೆ ನಾನು ತುಂಬಾ ಆಭಾರ.

ಮುಂಬಯಿ–೨ —ಮಂಜುನಾಥ ಹೆಗಡೆ

*

ಡಾ. ಕಿರ್ಲೋಸ್ಕರ ಅವರ "ನಾವು ದೇವರಲ್ಲಿ ನಂಬಿಕೆ ಇಡಬೇಕೆ" ಎಂಬ ಲೇಖನ ಬಹಳ ವಿಚಾರ ಬೋಧಕವಾಗಿತ್ತು. ವಾಸ್ತವವಾಗಿ ಆಸ್ತಿಕರಿಗಿಂತ ನಾಸ್ತಿಕರೇ ಹೆಚ್ಚು ಸುಖಿಗಳು. ನಾವು ಒಂದು ಕಾರ್ಯವನ್ನು ಎಷ್ಟರಮಟ್ಟಿಗೆ ರೂಪಿಸಿಕೊಳ್ಳುತ್ತೇವೆಯೋ ಮತ್ತು ಅದರ ಮೇಲೆ ಎಷ್ಟು ಸಮರ್ಪಕ ಪರಿಶ್ರಮ ನೀಡುತ್ತವೆಯೋ ಅದರ ಯಶಸ್ಸು ಅಷ್ಟರಮಟ್ಟಿಗೆ ಅವಲಂಬಿತವಾಗಿದೆಯೇ ಹೊರತು ಕಣ್ಣಿಗೆ ಕಾಣದ ದೈವಶಕ್ತಿಯು ಪ್ರೇರಣೆಯಲ್ಲ.

ಬೆಂಗಳೂರು —ಶ್ರೀಧರ್

"ದೇವರಲ್ಲಿ ನಾವು ನಂಬಿಕೆ ಇಡಬೇಕೆ" ಎಂಬ ಬಗ್ಗೆ ಡಾ. ಎಂ. ಎಸ್. ಕಿರ್ಲೋಸ್ಕರ ಅವರ ದೃಷ್ಟಿಕೋನ ಸಮಂಜಸವಾಗಿ ತೋರುವುದಿಲ್ಲ. ಹಾಲಿನಲ್ಲಿ ನೀರಿದೆ ಎಂದು ತಿಳಿಯಲು ಬರೇ ಕಣ್ಣಿನಿಂದ ನೋಡಿದರೆ ತಿಳಿಯುವುದಿಲ್ಲ, ಮಾಪನವಿಟ್ಟು ನೋಡಬೇಕು. ಅದೇ ರೀತಿ ಏಕಾಗ್ರತಾ ಭಕ್ತಿಯ ಪ್ರಾರ್ಥನೆಯ ಮಾಪನದಿಂದ ದೇವರ ಬಗ್ಗೆ ನಾವು ತಿಳಿಯಬಹುದು.

ಸಿದ್ದಯ್ಯನಪುರ —ಬಿ. ಮಧು

['ದೇವರಲ್ಲಿ ನಾವು ನಂಬಿಕೆ ಇಡಬೇಕೆ?' ಲೇಖನದಲ್ಲಿ ಕೆಲವು ಅಚ್ಚಿನ ದೋಷಗಳು ಅಪಾರ್ಥಕ್ಕೆ ಎಡೆಮಾಡಿಕೊಡಬಹುದಾದ ರೀತಿಯಲ್ಲಿ ಉಳಿದುಕೊಂಡಿವೆ. ಅವುಗಳಲ್ಲಿ ಬಹು ಮುಖ್ಯವಾದುದು ೧೦೭ನೆಯ ಪುಟದ ಮೊದಲ 'ಕಾಲವ್ಮಿನ ಮೂರನೆಯ ಪ್ಯಾರಾದಲ್ಲಿಯ ಎರಡನೆಯ ವಾಕ್ಯ, "ಒಂದು ಕೋಣೆಯಲ್ಲಿ ನಾನೂ ಒಬ್ಬ ನಾಸ್ತಿಕ ಮಿತ್ರನೂ..." ಎಂದಿದೆ. ಇದರಲ್ಲಿ 'ನಾಸ್ತಿಕ' ಶಬ್ದದ ಬದಲು 'ಆಸ್ತಿಕ' ಎಂದು ತಿದ್ದಿಕೊಂಡು ಓದಿ. —ಸಂ.]

**ಪೇಲವ**

"ಪೇಲವ" ಪದದ ಸರಿಯಾದ ಅರ್ಥವನು ಕೊಡುತ್ತಾ, ಡಿಸೆಂಬರ್ ೮೦ರ ಕಸ್ತೂರಿಯಲ್ಲಿ–ಪೇಲವ ಎಳೆಯ, ಇಂಗ್ಲೀಷಿನ Paleನಿಂದ ಪ್ರಭಾವಿತ ಎಂದು ತಿಳಿಸಿದೆ. ಈ] ಪದವನ್ನು ಅಮರ ಕೋಶದ ವಿಶೇಷ ನಿಘ್ನ ವರ್ಗದಲ್ಲಿ "ಪೇಲವಂ ವಿರಲಂ ತನು" ವಿರಳ ಅಥವಾ ಕೃಶವಾದದು ಎಂದು ಪರ್ಯಾಯ ಪದಗಳಿಂದ ವಿವರಿಸಿದೆ. ಮಾತ್ರವಲ್ಲದೆ ಕುಮಾರಸಂಭವದಲ್ಲಿ ಕಾಲಿದಾಸನು ಪಾರ್ವತಿಯ ತಪಶ್ಚರ್ಯ ವರ್ಣನೆಯಲ್ಲಿ "ಮೃಣಾಲಿಕಾ ಪೇಲವಮೇವ ಮಾದಿಭಿವೃತ್ತೈಃ ಸ್ವಮಂಗಂ ಗ್ಲಪಯಂತ್ಯಹರ್ನಿಶಂ। ತಪಃ॥ ಶರೀರೈಃ ಕಠಿಣೈರುಪಾರ್ಜಿತಂ ತಪಸ್ವಿನಾಂ ದೂರಮಧಶ್ಚಕಾರಸಾ–" ಎಂದು ಬಳಸಿದ್ದಾನೆ. "ಮೃಣಾಲಿಕಾ ಪೇಲವಂ" ಎಂಬುದಕ್ಕೆ "ಪದ್ಮಿನೀ ಕಂದ ಕೋಮಂ" ಎಂದು ಮಲ್ಲಿನಾಥನೂ ವ್ಯಾಖ್ಯಾನಿಸಿದ್ದಾನೆ. ಹೀಗಿರಲು ಈ ಪದ Pale ಎಂಬ ಆಂಗ್ಲಪದ ಕನ್ನಡಕ್ಕೆ ಬಂದರೂ 'ವ' ಎಂಬ ಅತಿ

ರಿಕ್ತ ಅಕ್ಷರ ಬರಲು ಹೇಗೆ ಸಾಧ್ಯ? ಇಂಗ್ಲೀಷಿನಿಂದ ಪ್ರಭಾವಿತ ಹೇಗೆ?

ವಿರಾಜ ಪೇಟೆ —ಐ. ಸಾ. ಶವರ್ಾ

['ಪೇಲವ' ಶಬ್ದವನ್ನು ಕುವೆಂಪು ಮೊದಲಾದವರು ಆಧುನಿಕ ಕನ್ನಡದಲ್ಲಿ ಬಳಸಿದ್ದಾರೆ. ಈ ಪ್ರಯೋಗಗಳಲ್ಲಿ ಕೃಶತ್ವದೊಡನೆ ಬಿಳಿಚಿದ ಎಂಬ ಅರ್ಥಚ್ಛಾಯೆಯೂ ಕಾಣಿಸುತ್ತದೆ. ಇದು pale ನಿಂದ ಪ್ರಭಾವಿತ. —ಸಂ.]

**ಮೋನಾ ಲಿಸಾ**

ಜಗತ್ತಿನ ಅತಿ ಶ್ರೇಷ್ಠ ಕಲಾಕೃತಿ ಎಂದು ಕರೆಯಲ್ಪಡುವ ಡಾ. ವಿನ್ಸಿಯ 'ಮೊನಾ ಲಿಸಾ' ರೂಪದರ್ಶಿನಿ ಲಿಸಾಳ ಬಗ್ಗೆ ಮಾಹಿತಿಯನ್ನೊದಗಿಸಿ ಕೊಟ್ಟುದಕ್ಕೆ ಧನ್ಯವಾದಗಳು. ಆ ರಹಸ್ಯಾತ್ಮಕ ಮುಗುಳು ನಗೆಯ ಹಿಂದೆ ಅದೆಷ್ಟು ನೋವಿತ್ತೊ?

ಪು.ಲ. ದೇಶಪಾಂಡೆಯವರ 'ರಸ್ತೆಗಳು' ಒಂದು ಉತ್ತಮ ಲೇಖನ.

ತುಮಕೂರ —ಹೆಚ್. ವಿ. ಸುಮನ್

ಎನ್. ಪಂಕಜಾರ ಮೊನಾಲಿಸಾ ಭಾವಚಿತ್ರದ ಹಿನ್ನಲೆಯ ಕತೆಯನ್ನು ಮಾರ್ಚ್ ೧೯೮೧ರ ಸಂಚಿಕೆಯಲ್ಲಿ ಹೇಳಿರುತ್ತೀರಾ. ಸಂಗ್ರಾಕೋ ಈ ಕಲಾ ಇತಿಹಾಸಕಾರರ ನಿಲುವು ಅರ್ಥವಾಗದು. ಒಂದೆಡೆ (೧೯೭೬ರ ಆವೃತ್ತಿಯಲ್ಲಿ) 'ಮೊನಾಲಿಸಾ'ದ ರಚನೆಗೆ ನಾಲ್ಕು ವರ್ಷ ಹಿಡಿಯಿತು. ಆ ವೇಳೆಗೆ ಅವಳ ಸುತ್ತುಮುತ್ತ ಸಂಗೀತಗಾರರಿಂದ ವಾದ್ಯ ವಿಶೇಷಗಳನ್ನು ನುಡಿಸಲಾಗುತ್ತು ಎಂದಿದೆ. ಆದರೆ ಪಂಕಜಾರವರು ಹೇಳಿದುದೇ ಬೇರೆ. ನಾಲ್ಕೇ ದಿನಗಳಲ್ಲಿ ಮೊನಾಲಿಸಾ ರಚನೆಯಾಗಿದೆ ಎಂದು ಆಧರಿಸುವ ಗ್ರಂಥ ಯಾವುದೆಂದು ದಯವಿಟ್ಟು ತಿಳಿಸುವಿರಾ ?

ದೊಡ್ಡತೋಟ —ಮೋಹನ ಸೋನ

**ಹಳೆಯ ಲೇಖನಗಳು**

ಕಸ್ತೂರಿಯ ಹಳೆಯ ಪ್ರಕಟಣೆಗಳಿಂದಾಯ್ದು ಕೆಲವು ಮಹತ್ವದ ಲೇಖನಗಳನ್ನು ಪುನಃ ಪ್ರಕಟಿಸುತ್ತಿರುವದು ತುಂಬ ಪ್ರಶಂಸನೀಯ ಕಾರ್ಯ. ಈಗಿನ ಹೊಸ ಜನಾಂಗಕ್ಕೆ ಮತ್ತು ಪ್ರತಿಗಳು ಸಿಗದೆ ಮಹತ್ವದ ಲೇಖನಗಳಿಂದ ವಂಚಿತರಾದ ಹಳೆ ಜನಾಂಗಕ್ಕೆ ನಿಜವಾಗಿಯೂ ಉಪಯುಕ್ತ.

ಹತ್ತು ವರುಷಗಳ ಹಿಂದೆ ಅಂದರೆ ೧೯೭೦ ೭೧ ರ ಸುಮಾರಿಗೆ ಪ್ರಕಟವಾದ ರಾಜಶೇಖರ ಭೂಸನೂರಮಠರವರು, ವಿಶ್ವವನ್ನು ಕುರಿತು ಬರೆದ ವೈಜ್ಞಾನಿಕ ಲೇಖನವನ್ನು ಮತ್ತೆ ಪ್ರಕಟಿಸಬೇಕಾಗಿ ಈ ಓದುಗನ ಕೋರಿಕೆ.

ರಾಯಚೂರ —ಲೀಲಾಧರ ಜೋಶಿ

**ಸೇಬಿನ ಕಳ್ಳ**

ಮಾರ್ಚ್ ಸಂಚಿಕೆಯಲ್ಲಿ ಪ್ರಕಟವಾದ ಟಿ ಎಸ್. ಪದ್ಮನಾಭರಾವ ಬರೆದ 'ಸೇಬಿನ ಕಳ್ಳ' ಮನಸ್ಸಿಗೆ ಆನಂದವನ್ನುಂಟುಮಾಡಿತು. ಇದು ಮೂಲ ಹಿಂದಿ ಕಥೆಯಾದರೂ ಇದನ್ನು ಕನ್ನಡಕ್ಕೆ ಭಾಷಾಂತರಿಸಿ, ಕಸ್ತೂರಿಯ ಮುಖಾಂತರ ಪ್ರಕಟಿಸಿದ್ದಕ್ಕೆ ತುಂಬಾ ಧನ್ಯವಾದಗಳು.

ಲಚ್ಯಾಣ —ಅಶೋಕುಮಾರ ಕಾಸಾರ

**ಹಳಸಲು ಕಥೆ**

ಫೆಬ್ರುವರಿ ತಿಂಗಳ ಕಸ್ತೂರಿಯಲ್ಲಿ ಪ್ರಕಟವಾದ "ಕಾಣದ ಗಾಯ" ಹಂಗೆರಿಯನ್ ಕತೆಯು ಈಗಾಗಲೇ ಒಂದು ದಿನಪತ್ರಿಕೆಯಲ್ಲಿ (೯–೧೦ ತಿಂಗಳ ಹಿಂದೆ) ರವಿವಾರದ ಅಂಕದಲ್ಲಿ "ಮಾಗದ ಹುಣ್ಣು" ಎನ್ನುವ ತಲೆಬರಹದೊಂದಿಗೆ ಪ್ರಕಟವಾಗಿದೆ.

ಕಸ್ತೂರಿಯ ಕಂಪು ಎಲ್ಲ ಕಡೆಗೆ ಹರಡಲಿ. ಆದರೆ ಹಳಸಲು ಲೇಖನಗಳನ್ನು ಪ್ರಕಟಿಸಬೇಡಿ.

ಬೆಳಗಾಂವಿ —ಮುರಲೀಧರ ಮನ್ನೂರಿ

**ದಾಖಲೆಗಳು**

೧೦ ಮಾರ್ಚ್ ೧೯೮೧ ರ ಸಂಚಿಕೆಯಲ್ಲಿ ಬಂದಿರುವ "ದಾಖಲೆಗಳು" ನಿಜವಾಗಿಯೂ ನಂಬಲು ನನಗೆ ಬಹಳ ಕಷ್ಟವಾಯಿತು. ಅದರಲ್ಲೂ ಮೂರನೆಯ ದಾಖಲೆ (ಮ್ಯಾಂಚೆಸ್ಟರಿನ ಜೇಮ್ಸ್ ಲೀಪರ್ ೧೯೭೩ ಸೆ. ೨೯ ರಂದು ಸಿಪ್ಪೆ ಸುಲಿದ ೧೩ ಮೊಟ್ಟೆಗಳನ್ನು ೩.೮ ಸೆಕೆಂಡುಗಳಲ್ಲಿ ಜಗಿದು ತಿಂದ) ನನಗೆ ಇನ್ನೂ ನಂಬಲಾಗುತ್ತಿಲ್ಲ. ಅಂಕಿ–ಅಂಶಗಳು ಮುದ್ರಿಸುವಲ್ಲಿ ತಪ್ಪೇನೂ ಆಗಿಲ್ಲವಷ್ಟೆ?

ಹುಬ್ಬಳ್ಳಿ —ಅರುಣ ಸು. ದಾ.

[ದಾಖಲೆಗಳು ನಿಜ. ಆದರೆ ಮೂರನೆಯದರಲ್ಲಿ ೩೮ ಸೆಕೆಂದುಗಳಾಗಬೇಕಾದ್ದು ೩.೮ ಸೆಕೆಂದು ಆಗಿದೆ. ಮುದ್ರಣ ದೋಷವನ್ನು ದಯವಿಟ್ಟು ಕ್ಷಮಿಸಿ. —ಸಂ]



# ಕಸ್ತೂರಿ

ವರ್ಷ: ೨೫ ಸಂಚಿಕೆ: ೮

ಏಪ್ರಿಲ್ ೧೯೮೧



## ಅವರವರ ದೃಷ್ಟಿ

### ಉಪಾಧ್ಯಾಯ ಅಮರಮುನಿ

ಆಚಾರ್ಯ ಮುಖದಿಂದ ಬಂದುದನ್ನು ಅರಿತು ಸದಾಚಾರ - ಸಚ್ಚಾರಿತ್ರ್ಯಗಳೊಂದಿಗೆ ಜೀವನ ನಿರ್ಮಾಣ ಮತ್ತು ಜೀವನ ವಿಕಾಸಕ್ಕಾಗಿ ವ್ಯಾವಹಾರಿಕ ಮತ್ತು ಆಧ್ಯಾತ್ಮಿಕ ಶಿಕ್ಷಣವನ್ನು ಪಡೆಯುವ ಏಕಮಾತ್ರ ಕೇಂದ್ರಗಳೆನಿಸಿದ್ದ 'ಗುರು ಕುಲ'ಗಳ ಕಾಲದ ಒಂದು ಘಟನೆ.

ಇಬ್ಬರು ರಾಜಕುಮಾರರು–ಒಡಹುಟ್ಟಿದವರು–ಗುರುಕುಲವೊಂದರಲ್ಲಿ ಶಿಕ್ಷಣ ಪಡೆಯುತ್ತಿದ್ದರು. ಒಂದೇ ತಾಯಿಯ ಮಕ್ಕಳಾದರೂ ಒಂದೇ ಸ್ವಭಾವ ಅವರಲ್ಲಿರಲಿಲ್ಲ. ದೃಢತೆ ದೃಷ್ಟಿ ಗಳಲ್ಲಿ ಕೂಡ ಅಜಗಜಾಂತರವಿತ್ತು.

ಒಂದು ದಿನ ಆಚಾರ್ಯರು ಇಬ್ಬರನ್ನೂ ಕರೆದುಕೊಂಡು ವಾಯುವಿಹಾರಕ್ಕೆ ಹೊರಟರು. ಗುರುಶಿಷ್ಯ ಭೇದವನ್ನೂ ಮರೆತು ಮುಕ್ತಮನದಿಂದ ಮಾತನಾಡುತ್ತ ಸಾಗಿದರು. ಸಂಜೆಯ ಸಮಯ. ಪ್ರಕೃತಿಗೆ ಹೊಸ ಕಳೆ ಬಂದಿತ್ತು. ಸಂಜೆಯ ಸೌಂದರ್ಯಕ್ಕೆ ಆಹ್ಲಾದಕರ ಗಾಳಿಯೂ ಜತೆಗೂಡಿತ್ತು.

ಇದ್ದಕ್ಕಿದ್ದಂತೆ ಏನೋ ವಿಚಿತ್ರ ಸದ್ದು ಕೇಳಿ ಬಂದು ಮೂವರು ನಿಂತರು. ಆಚಾರ್ಯರು ಸುತ್ತಲೊಮ್ಮೆ ದೃಷ್ಟಿ ಹರಿಸಿದರು. ಅತ್ತ ತುಸು ದೂರದಲ್ಲಿ ಒಂದು ಮಾವಿನ ತೋಪು ಕಂಡಿತು. ಹಣ್ಣುಗಳನ್ನು ತೊನೆದಾಡಿಸಿಕೊಂಡು ಮರಗಳ ಗುಂಪು ಸ್ತಬ್ಧವಾಗಿತ್ತು. ದೂರದಿಂದ ಕೈಗೆಟಕುವಂತೆಯೇ ಕಂಡವು ಹಣ್ಣುಗಳು. ಆ ಸದ್ದು ಅಲ್ಲಿಂದಲೇ ಬರುತ್ತಿತ್ತು. ಮೂವರೂ ಅತ್ತ ಸಾಗಿದರು.

ಒಬ್ಬ ದನ ಕಾಯುವ ಹುಡುಗ ಹಣ್ಣುಗಳಿಗೆ ಗುರಿಯಿಟ್ಟು ದೊಣ್ಣೆ ಬೀಸುತ್ತಿದ್ದ. ಹಣ್ಣುಗಳೊಂದಿಗೆ ದೊಣ್ಣೆ ಕೆಳಗೆ ಬೀಳುತ್ತಿತ್ತು. ಆತ ಮತ್ತೆ ದೊಣ್ಣೆಯೆತ್ತಿ ಬೀಸುತ್ತಿದ್ದ. ಇದೇ ಆ ವಿಚಿತ್ರ ಸದ್ದಿಗೆ ಕಾರಣ ಎಂದು ಆಚಾರ್ಯ ಶಿಷ್ಯರಿಗೆ ಗೊತ್ತಾಯಿತು. ಆದರೆ ದನ ಕಾಯುವ ಹುಡುಗನಿಗೆ ಮಾತ್ರ ಇವರ ಆಗಮನದ ಅರಿವಿರಲಿಲ್ಲ.

ಆಚಾರ್ಯರು ಈ ದೃಶ್ಯವನ್ನು ನೋಡುತ್ತಿದ್ದ ಶಿಷ್ಯರಲ್ಲಿ ಹಿರಿಯನನ್ನು ಕೇಳಿದರು. 'ಮಗು, ನೀನೇನು ನೋಡುತ್ತಿದ್ದೀ? ಈ ನೋಟ ನಿನ್ನ ಮನದ ಮೇಲಾವ ಪರಿಣಾಮವುಂಟುಮಾಡಿತು?'

'ಗುರುಗಳೇ, ದೊಣ್ಣೆಯಿಂದ ಏಟು ತಿಂದೂ ಏಟು ಕೊಟ್ಟವನಿಗೆ ಸಿಹಿ ಹಣ್ಣು ನೀಡುತ್ತಿರುವ ಆ ಮರದಂತೆ ಮನುಷ್ಯ ಕೂಡ ನೋವುಂಡು ಇತರರಿಗೆ ನಲಿವು ನೀಡಬೇಕು. ದುಃಖ ಸಹಿಸಿ ಸುಖ ಕೊಡಬೇಕು. ತಾನು ಕಷ್ಟದಲ್ಲಿದ್ದರೂ ಇತರರು ಸಂತೋಷದಿಂದಿರಲಿ ಎಂದು ತಿಳಿದುಕೊಳ್ಳುವುದು ಸಜ್ಜನರ ಲಕ್ಷಣ' ಎಂದ ಆತ.

ಆಚಾರರ್ಯರು ಕಿರಿಯನನ್ನೂ ಹಾಗೇ ಕೇಳಿದರು. ಆತ ಹೇಳಿದ, 'ಗುರುಗಳೆ, ಈ ಬಡ ಮರ ಕೂಡ ಏಟು ತಿಂದ ಹೊರತೂ ಹಣ್ಣು ನೀಡುವುದಿಲ್ಲ. ಅಂದ ಮೇಲೆ ಮನುಷ್ಯ ತಾನೆ ಹೇಗೆ ಪೆಟ್ಟು ಬೀಳದೆ ಕೆಲಸ ಮಾಡಿಯಾನು? ಏಟಿಲ್ಲದೆ ಆತನಿಂದ ಕೆಲಸ ತೆಗೆದುಕೊಳ್ಳುವುದು ಎಂದಾದರೂ ಸಾಧ್ಯವೆ? ದಂಡವಿರುವಾತ ಮಾತ್ರ ಇತರರಿಂದ ಕೆಲಸ ಮಾಡಿಸಿಕೊಳ್ಳಬಲ್ಲ, ಗೌರವ ಪಡೆಯಬಲ್ಲ, ಅಧಿಕಾರ ಪಡೆಯಬಲ್ಲ ಮತ್ತು ತನ್ಮೂಲಕ ಸುಖವಾಗಿ ಇರಬಲ್ಲ.'

ಇಬ್ಬರ ಮಾತನ್ನೂ ಆಲಿಸಿದ ಆಚಾರ್ಯರು ತಮಗರಿವಿಲ್ಲದಂತೆಯೇ ಗಾಳಿಯಲ್ಲಿ ಕೈ ಆಡಿಸಿದಾಗ ಅವರ ಕಣ್ಣಿಗೆ ಆ ಐದು ಬೆರಳುಗಳು ಕಂಡವು. ನಸುನಕ್ಕು, ಇವರಿಬ್ಬರ ವಿಚಾರದಲ್ಲಿ ಚಿಂತನೆಯಲ್ಲಿ, ಕಾರ್ಯಪದ್ಧತಿಯಲ್ಲಿ ಐದು ಬೆರಳುಗಳ ಅಂತರ ಕಂಡರು. 'ಅವರವರ ದೃಷ್ಟಿ' ಎಂದುಕೊಂಡು ಶಿಷ್ಯರೊಂದಿಗೆ ಮುಂದೆ ನಡೆದರು.

('ಶ್ರೀ ಅಮರ ಭಾರತಿ'ಯಿಂದ)

---

**ಒರೆಗಲ್ಲಿಗೆ ಉಜ್ಜುವುದು, ತುಂಡು ಮಾಡುವುದು, ಕಾಯಿಸುವುದು ಮತ್ತು ಬಡಿಯುವುದು ಎಂಬ ನಾಲ್ಕು ಬಗೆಗಳಿಂದ ಬಂಗಾರವನ್ನು ಪರೀಕ್ಷಿಸುವಂತೆ, (ದೃಢ) ವ್ರತ, ಶೀಲ, ಕುಲ, ಕಾಯಕ (ದಕ್ಷತೆ) ಗಳೆಂಬ ನಾಲ್ಕು ಇರುವವೋ ಎಂಬುದನ್ನು ನೌಕರನಲ್ಲಿ ಪರೀಕ್ಷಿಸಬೇಕು.**

**— ಸುಭಾಷಿತಗಳು**

---

**ತಿದ್ದುಪಡಿ:** ಮಾರ್ಚ್ 'ಕಸ್ತೂರಿ'ಯಲ್ಲಿ ಬಂದ 'ಪುಸ್ತಕ ವಿಭಾಗ'ವನ್ನು ಸಂಗ್ರಹಿಸಿದವರು ಶ್ರೀ ಧೀರೇಂದ್ರ ಅಬ್ಬಿಗೇರಿ. ಕಣ್ಣು ತಪ್ಪಿನಿಂದ ಅವರ ಹೆಸರು ಉಳಿದುಹೋದುದಕ್ಕೆ ವಿಷಾದಿಸುತ್ತೇವೆ.

—ಸಂ.

## ಸಂಸ್ಕೃತ ವಿದ್ವಾಂಸನೊಬ್ಬನ ದುರಂತ ಕಥೆ

# ಕೊಡವೂರು ಅನಂತರಾಮ ಭಟ್ಟರು

ಮೂಲ :
**ಮಹಾ ಪಂಡಿತ ರಾಹುಲ ಸಾಂಕೃತ್ಯಾಯನ**

ಸಂಗ್ರಹ :
**ಕೆ. ಶ್ರೀನಿವಾಸರಾವ್**

ಶ್ರೀ ಕೊಡವೂರು ಅನಂತರಾಮ ಭಟ್ಟರ ಪ್ರಥಮ ಪರಿಚಯ ನನಗಾದುದು ಕೋಲಂಬೋದಲ್ಲಿ, ೧೯೨೮ರಲ್ಲಿ. ಒಬ್ಬ ವಿದ್ವಾಂಸ ಬೌದ್ಧ ಭಿಕ್ಷು, 'ನಮ್ಮಲ್ಲಿಯೂ ಜಂಬೂ ದ್ವೀಪದ ಪಂಡಿತರಿದ್ದಾರೆ' ಎಂದು ಹೇಳಿದಾಗ ನಾನು ಕುತೂಹಲದಿಂದ ಅವರನ್ನು ಕಾಣಲು ಹೋದೆನು. ಅಲ್ಲಿ ನಾನು ಕಂಡ ೨೦ ವರ್ಷದ ತರುಣ ಪಂಡಿತರೇ ಶ್ರೀ ಅನಂತರಾಮ ಭಟ್ಟರು.

ಶ್ರೀ ಅನಂತರಾಮ ಭಟ್ಟರು ಹುಟ್ಟಿದ್ದು ೭ನೆ ಫೆಬ್ರುವರಿ ೧೯೦೮ರಲ್ಲಿ. ಸಂಸ್ಕೃತವೇ ಮಾತೃಭಾಷೆಯೋ ಎನ್ನುವಂತೆ ಸಂಸ್ಕೃತದಲ್ಲಿ ಮಾತನಾಡುತ್ತಿದ್ದರು. ನಾವಿಬ್ಬರೂ ಆಗಾಗ ಕಲೆಯು ಹತ್ತಿದೆವು.

ಅವರು ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯ ಸಮೀಪದ ಕೊಡವೂರಿನವರು. ಮಾಧ್ವ ಸಂಪ್ರದಾಯದ ವೈಷ್ಣವ ಬ್ರಾಹ್ಮಣರು. ಚಿಕ್ಕಂದಿನಿಂದಲೂ ಸಂಸ್ಕೃತವನ್ನು ಚೆನ್ನಾಗಿ ಅಭ್ಯಾಸ ಮಾಡಿ ಅದರಲ್ಲಿ ಹೆಚ್ಚಿನ ಯೋಗ್ಯತೆಯನ್ನು ಸಂಪಾದಿಸಿದರು. ಕೆಲವು ಕಾಲ ಮೈಸೂರಿನಲ್ಲಿ ಶಿಕ್ಷಣ ಪಡೆದ ಮೇಲೆ, ಸಂಸ್ಕೃತ ಪಂಡಿತರಿಗೆ ಪೇಟೆಯಲ್ಲಿ ಯೋಗ್ಯ ಬೆಲೆಯಿಲ್ಲವೆಂದು ಮನಗಂಡರು. ಅದಕ್ಕಾಗಿ ಇಂಗ್ಲೀಷ್ ಕಲಿತು ಮೆಟ್ರಿಕ್ ಪರೀಕ್ಷೆ ಕೊಟ್ಟು ವಿಫಲರಾದರು. ಸಂಸ್ಕೃತ ವಿದ್ಯಾರ್ಥಿಯಾದುದರಿಂದ ಶಾಲೆಯಲ್ಲಿ ಕಲಿಸುವ ಇತರ ವಿಷಯಗಳಲ್ಲಿ ಅವರು ಪರಿಪೂರ್ಣರಾಗಿರಲಿಲ್ಲ. ಆದರೂ ಭಾರತದ ಡಿಗ್ರಿಗಳಿಗಿಂತಲೂ ಉನ್ನತ ಮಾನ್ಯತೆಯುಳ್ಳ ಲಂಡನ್ ಯುನಿವರ್ಸಿಟಿಯ ಪರೀಕ್ಷೆಗಳು ಸಿಂಹಳದಲ್ಲಿ ಜರುಗುವವೆಂದು ತಿಳಿದು ಬಂದುದರಿಂದ ಅವರು ಸಿಂಹಳಕ್ಕೆ ಆಗಮಿಸಿದರು. ಕೋಲಂಬೋದಲ್ಲಿ



ಅವರಿಗೆ ಎರಡನೇ ಮಹಾಸ್ಥವಿರ ಧರ್ಮಸ್ಕಂಧರ ಪರಿಚಯವಾಯಿತು. ಧರ್ಮಸ್ಕಂಧರ ಸಣ್ಣ ವಿಹಾರವೊಂದಿತ್ತು. ಅದರಲ್ಲಿ ಕೆಲ ಬೌದ್ಧ ಭಿಕ್ಷು ಗಳಿರುತ್ತಿದ್ದರು. ಭಟ್ಟರ ವಿದ್ಯೆಯು ಸಂಪೂರ್ಣ ಉಪಯೋಗ ಆಗುವಂತಿರಲಿಲ್ಲ. ಆದರೆ ಊಟ ವಸತಿಯ ಚಿಂತೆ ಬಗೆಹರಿಯಿತು. ಧರ್ಮ ಸ್ಕಂಧರು ಆಗಿಂದಾಗ್ಗೆ ನಾಲ್ಕು ಪುಟಗಳ ಸಂಸ್ಕೃತ ಪತ್ರಿಕೆಯೊಂದನ್ನು ಹೊರಡಿಸುತ್ತಿದ್ದರು. ಭಟ್ಟರ ಲೇಖನಿ ಅದರ ಕಾರ್ಯದಲ್ಲಿ ಸಹಕರಿಸತೊಡಗಿತು.

೧೯೨೮ರ ಅಂತ್ಯದಲ್ಲಿ ನಾನು ಟಿಬೇಟಿಗೆ ಹೊರಡಬೇಕಾಯಿತು. ಭಟ್ಟರು ವಿದ್ಯಾಲಂಕಾರರ ವಿಹಾರಕ್ಕೆ ಬಂದರೆ, ಆಗಲೇ ಅಲ್ಲಿ ಪ್ರಾರಂಭವಾಗಿದ್ದ ಸಂಸ್ಕೃತ ತರಗತಿಗಳು ಸುಸೂತ್ರವಾಗಿ ನಡೆಯಬಹುದೆಂದು ನನಗನಿಸಿತು. ವಿದ್ಯಾಲಂಕಾರರಲ್ಲಿ ಅವರ ವಸತಿ ಹಾಗೂ ವೇತನದ ಏರ್ಪಾಟಾಯಿತು. ಮೆಟ್ರಿಕ್ ಮತ್ತು ಲಂಡನ್ ಪರೀಕ್ಷೆಗಳ ಗೋಜಿಗೆ ಹೋಗದೆ, ದಾರಿ ಖರ್ಚಿಗೆ ಸ್ವಲ್ಪ ಹಣ ಶೇಖರಿಸಿ ಜರ್ಮನಿಗೆ ತೆರಳಿದರೆ, ಎರಡು ಮೂರು ವರ್ಷಗಳಲ್ಲೇ ಪಿ. ಎಚ್. ಡಿ. ಪದವೀಧರರಾಗಬಹುದು. ಅದರ ಯೋಗ್ಯತೆ ಲಂಡನ್ನಿನ ಬಿ. ಎ. ಪದವಿಗಿಂತಲೂ ಹೆಚ್ಚಿನದೆಂದು ಅವರಿಗೆ ತಿಳಿಹೇಳಿದೆ.

೧೯೩೦ರಲ್ಲಿ ಜೂನ್ ಮೂರನೇ ವಾರದಲ್ಲಿ ನಾನು ಸಿಂಹಳಕ್ಕೆ ಹಿಂತಿರುಗಿದೆನು. ಈ ಮಧ್ಯ ವಿಹಾರದಲ್ಲಿ ಕಲಿಸುವುದರಲ್ಲಿ ಭಟ್ಟರು ಮಗ್ನರಾಗಿದ್ದರು. ಆದರೆ ಅವರು ಆ ವರ್ಷ ಲಂಡನ್ನಿನ ಪರೀಕ್ಷೆ ಕೊಟ್ಟು ವಿಫಲರಾಗಿ ನಾನು ಕೊಟ್ಟಿದ್ದ ಸಲಹೆಯತ್ತ ಹೊರಳಿದ್ದರು.

ಕೊನೆಗೆ, ಸಂಸ್ಕೃತದಲ್ಲಿ 'ಅತ್ಯುತ್ತಮ ವಿದ್ವಾಂಸರಾದ ಭಟ್ಟರವರು ಹೆಚ್ಚಿನ ಅಭ್ಯಾಸಕ್ಕಾಗಿ ಜರ್ಮನಿಗೆ ಬರಬಯಸುತ್ತಾರೆ. ಅವರ ವಿದ್ಯೆಯಿಂದ ಅವರ ಜೀವನ ನಿರ್ವಹಣೆಗಾಗುವಷ್ಟು ಅಲ್ಲಿ ಸಂಪಾದಿಸಲು ಸಾಧ್ಯವೇ?' ಎಂದು ನಾನು ಜರ್ಮನಿಯಲ್ಲಿ ನನ್ನ ಮಿತ್ರರಾಗಿದ್ದ ಮಾರ್ಬುರ್ಗ್ ವಿಶ್ವವಿದ್ಯಾಲಯದ ಪ್ರೊ. ರುಡಾಲ್ಫ್ ಒಟ್ಟೋ ಅವರಿಗೆ ಪತ್ರ ಬರೆದೆ. ಅವರು ವಿಚಾರಿಸಿ ಭಟ್ಟರ ಫಿ ಮಾಫಿ ಮಾಡಿಸುವುದೇ ಅಲ್ಲದೆ, ತಿಂಗಳಿಗೆ ಸುಮಾರು ೭೦–೮೦ ಮಾರ್ಕ್ಸನಷ್ಟು ಸಂಬಳ ದೊರೆಯುವಂತೆ ಮಾಡುವುದಾಗಿ ತುಬಿಂಗನ್ನಿನ ಸಂಸ್ಕೃತ ಅಧ್ಯಾಪಕರು ತಿಳಿಸಿದರೆಂದು ಬರೆದರು. ಆದರೆ ಸಿಂಹಳದಿಂದ ಜರ್ಮನಿಗೆ ಹೋಗಬೇಕಲ್ಲ? ಅವರ ಸೋದರ ಮಾವನವರು (ದಾಕ್ಷಿಣಾತ್ಯ ಪದ್ಧತಿಯಂತೆ ಹೆಂಡತಿಯ ತಂದೆಯೂ ಆಗಿದ್ದರು.) ಸ್ವಲ್ಪ ಹಣ ಸಹಾಯ ಮಾಡುವ ಸಾಮರ್ಥ್ಯವುಳ್ಳವರಾಗಿದ್ದರು. ಆದ್ದರಿಂದ ಭಟ್ಟರು ಸ್ವದೇಶಕ್ಕೆ ತೆರಳಿ ಪಾಸ್ ಪೋರ್ಟ್ ದೊರಕಿಸಿದರು. ಆದರೆ ಕರ್ಮನಿಷ್ಠರಾದ ಮಾವನವರು ಅಳಿಯನನ್ನು ಸಮುದ್ರಾಂತರ ಕಳಿಸಿ, ಜಾತಿಗೆಡಿಸಿ ತಮ್ಮ ಮಗಳನ್ನು ದುರ್ಗತಿಗೀಡು ಮಾಡಬಯಸುವರೇ? ಕೆಲ ತಿಂಗಳ ನಂತರ ಭಟ್ಟರು ಸಿಂಹಳಕ್ಕೆ ಬಂದರು. ಜರ್ಮನಿಯನ್ನು ಸೇರಲು ಸಾಲುವಷ್ಟು ಹಣ ಅವರಲ್ಲಿರಲಿಲ್ಲ. ಇದೇ ಸಂದರ್ಭದಲ್ಲಿ ಸುಮಾರು ನೂರೈವತ್ತು ರೂಪಾಯಿಗಳು ಬಂದಿದ್ದವು. ಅದನ್ನು ಕೊಟ್ಟು ಭಟ್ಟರನ್ನು ಪ್ರೋತ್ಸಾಹಿಸಿದೆ. ಒಂದೆಡೆ ಜರ್ಮನಿಯ ಆಕರ್ಷಣೆ ಇನ್ನೊಂದೆಡೆ ಜಾತಿ ಬಹಿಷ್ಕಾರದ ಭಯ. ಅವರು ಅವರೆಗೆ ವಿದೇಶಕ್ಕೆ ಹೋಗಿರಲಿಲ್ಲ. ಸಂಸ್ಕೃತ ವಿದ್ಯಾರ್ಥಿಯಾದ್ದರಿಂದ ಹೆಚ್ಚಿನ ಅಂಶ ಕೂಪಮಂಡೂಕದಂತಿದ್ದರು. ಅಲ್ಲದೆ ಲಕ್ಷ್ಮಿಯ ಸಂಪೂರ್ಣ ಬೆಂಬಲವಿಲ್ಲದೆ ಪರದೇಶಕ್ಕೆ ಹೋಗುವುದು ಅಪಾಯಕರವೂ ಆಗಿತ್ತು. 'ಮನುಷ್ಯನು

ಸಮುದ್ರದಲ್ಲೇ ಮುಳುಗಿದರೂ ಸಾವಿರದಲ್ಲಿ ೯೯೯ ಜನರನ್ನು ಯಾರಾದರೂ, ಎಲ್ಲಿಂದಾದರೂ ಬಂದು ರಕ್ಷಿಸುವರು. ಹೀಗಿರುವಾಗ ಸಹಾಯ ದೊರಕದೇ 'ಮುಳುಗಿ ಹೋದ ಒಬ್ಬನು ನೀವೇ ಆಗಬಹುದೆಂದು ಅಂಜುವಿರೇಕೆ? ಮಾನವತೆಯು ಎಲ್ಲೆಡೆಯೂ ಮನುಷ್ಯನ ರಕ್ಷಣೆಗೆ ಸಿದ್ಧವಾಗಿರುತ್ತದೆ'ಂದು ನಾನು ನನ್ನ ಪರ್ಯಟನೆಯ ಅನುಭವಗಳನ್ನೆಲ್ಲಾ ಒಂದುಗೂಡಿಸಿ ಹೇಳಿದೆ.

ಯಾವ ಯುರೋಪವನ್ನು ನಾನೇ ನೋಡಿರಲಿಲ್ಲವೋ, ಅಲ್ಲಿಗೆ ಹೋಗಲು ನಾನು ಅವರನ್ನು ಹುರಿದುಂಬಿಸುತ್ತಿದ್ದೆನು. ಸಾವಕಾಶವಾಗಿ ಅವರಲ್ಲಿ ಆತ್ಮವಿಶ್ವಾಸ ಬೆಳೆಯಿತು. ಆದರೆ ಊಟ ಉಪಚಾರಗಳ ಯೋಚನೆ ಅವರನ್ನು ಕಾಡುತ್ತಿತ್ತು. 'ಅಲ್ಲಿ ನಿಮ್ಮ ವೈಷ್ಣವತನದ ಪೇಚಿನಲ್ಲಿ ಬೀಳದಿರಿ. ಮಾಂಸಾಹಾರ ಸುರು ಮಾಡಿರಿ; ಮೊಟ್ಟೆಯನ್ನಂತೂ ಇಲ್ಲೇ ತಿನ್ನಲು ಕಲಿಯಿರಿ'. ಎಂದು ನಾನು ಹೇಳಿದೆ. ಬಹುಶಃ ಅವರು ಮೊಟ್ಟೆ ತಿನ್ನತೊಡಗಿದರು. ಎರಡು ವರ್ಷಗಳ ನಂತರ ೧೯೩೭ ರಲ್ಲಿ ನಾನು ಇಂಗ್ಲಂಡಿನಲ್ಲಿದ್ದಾಗ ಬಂದ ಅವರ ಪತ್ರಗಳಿಂದ ಮೊಟ್ಟೆಯು ಅವರ ಇಷ್ಟ ಭೋಜ್ಯವಾಗಿದೆಯೆಂದು ತಿಳಿದು ಬಂತು. ಆದರೆ, ಬಹುಶಃ ಇದುವರೆಗೂ ಅವರು ಮಾಂಸವನ್ನು ಮುಟ್ಟಿರಲಿಲ್ಲ.

ಯುರೋಪಿಗೆ ಹೋಗಲು ಉಪಯುಕ್ತ ಬಟ್ಟೆಗಳ ಅವಶ್ಯಕತೆಯೂ ಇತ್ತು. ಅವರ ಹತ್ತಿರ ಕೇವಲ ಶರ್ಟು–ಧೋತ್ರಗಳಿದ್ದವು. ನಾನು ಟಿಬೇಟಿನಿಂದ ಹಿಂದಿರುಗುವಾಗ ಒಂದು ಬೆಲೆಯುಳ್ಳ ಉಣ್ಣೆಯ ಬಟ್ಟೆಯನ್ನು ತಂದಿದ್ದೆನು. ಆದರೆ ಅದು ಕೇವಲ ಒಂದೇ ಗೇಣಿನಷ್ಟು ಅಗಲವಿತ್ತು; ನಡುವೆ ಜೋಡಿಸದೆ ಕೋಟು–ಪ್ಯಾಂಟುಗಳಾಗುವಂತಿರಲಿಲ್ಲ. ಭಟ್ಟರಿಗೆ ಅಷ್ಟು ಸೂಕ್ಷ್ಮ ಪರೀಕ್ಷೆಯಿರಲಿಲ್ಲ. ಇದ್ದರೂ ಫ್ಯಾಶನ್ನಿನ ಬಗ್ಗೆ ಯೋಚಿಸುವ ಸಮಯವದಾಗಿರಲಿಲ್ಲ. ಅದ್ದರಿಂದ ಅದಕ್ಕೆ ಉತ್ತಮ ಬಣ್ಣ ಕೊಟ್ಟು ಕೊಲಂಬೋದಲ್ಲಿ ದರ್ಜಿಯಿಂದ ಕೋಟ್ ಪ್ಯಾಂಟ್ ಹೊಲಿಸಿ ಭಟ್ಟರಿಗೆ ಕೊಟ್ಟೆ. ಒಂದು ಹಡಗಿನ ಕಂಪನಿಯಿಂದ ರೂ. ೨೦೦–೨೫೦ ರಲ್ಲಿ ವಾಪಸಾತಿಯ ಟಿಕೆಟ್ ದೊರೆಯಿತು. ತುಬಿಂಗನ್ನನ್ನು ತಲುಪಿ ಅತಿ ಮಿತವ್ಯಯದಿಂದಿದ್ದರೂ ಒಂದು ತಿಂಗಳು ಕಾಲ ಕಳೆಯಲೂ ಸಾಲದಷ್ಟು ಹಣ ಅವರ ಜೇಬಿನಲ್ಲಿತ್ತು. ಆದರೂ ಅನಂತರಾಮರನ್ನು ನಾನು ಸಮುದ್ರಕ್ಕೆ ದೂಡಿಯೇ ಬಿಟ್ಟೆ. ಅವರು ತುಬಿಂಗನ್ನನ್ನು ತಲುಪಿ ತಮ್ಮ ಪ್ರೊಫೆಸರ್ ಮಿತ್ರರ ಸಂಸ್ಕೃತ ಸಂಶೋಧನೆಯಲ್ಲಿ ಸಹಾಯ ಮಾಡುತ್ತಾ ಸ್ವತಃ ಡಾಕ್ಟರೇಟ್ ಪಡೆಯುವ ಸಿದ್ಧತೆಯಲ್ಲಿ ತೊಡಗಿದರು.

ಹತ್ತು ವರ್ಷ ಅಭ್ಯಾಸ ಮಾಡಿದರೂ ಸಾಲದ ವಿಷಯವನ್ನೇ ಅವರು ತಮ್ಮ ಡಾಕ್ಟರೇಟಿಗೆ ಆರಿಸಿಕೊಂಡಿದ್ದರೆಂದು ೧೯೩೭ರಲ್ಲಿ ಲಂಡನ್ನಿನಲ್ಲಿ ನನಗೆ ತಲುಪಿದ ಅವರ ಪತ್ರದಿಂದ ತಿಳಿದು ಬಂದಿತು. 'ಹೀಗೇಕೆ ಮಾಡಿದಿರಿ? ೨–೨॥ ವರ್ಷದಲ್ಲೇ ಪಿ. ಎಚ್. ಡಿ. ಯಾಗಬಹುದಾಗಿದ್ದ ವಿಷಯಗಳನ್ನು ತೆಗೆದುಕೊಳ್ಳಬೇಕಾಗಿತ್ತು. ಸಂಶೋಧನೆಯ ಕಾರ್ಯಕ್ಕೆ ಮುಂದೆ ಇಡೀ ಜೀವನವೇ ಕಾದಿದೆ. ಅದನ್ನು ಆ ತರುವಾಯ ಮಾಡಬಹುದಿತ್ತೆಂದು' ಪತ್ರ ಬರೆದೆ. ಹೇಗೇ ಇರಲಿ, ಭಟ್ಟರು ತುಬಿಂಗನ್ನಿನಿಂದ ಪಿ. ಎಚ್. ಡಿ. ಪದವೀಧರರಾದರು. ಭಾಷೆ ಕಲಿಯುವುದು ಅವರ ಸ್ವಾಭಾವಿಕ ಕುಶಲತೆಯಾಗಿತ್ತೆಂದು ಹೇಳಬಹುದು. ಜರ್ಮನ್ ಭಾಷೆಯ ಮೇಲೆ ತಮ್ಮ ಸಂಪೂರ್ಣ ಸ್ವಾಮ್ಯವನ್ನು ಸ್ಥಾಪಿ

ಸಲು ಅವರಿಗೆ ಬಹಳ ಸಮಯ ಹಿಡಿಯಲಿಲ್ಲ. ಅನಂತರ ಅವರು ಅರ್ಥಶಾಸ್ತ್ರದ ಡಿ.ಎಸ್.ಸಿ. ಡಿಗ್ರಿಯನ್ನು ಸಂಪಾದಿಸಿದರು. ಪರಿಚಿತರ ಸಂಖ್ಯೆ ಬೆಳೆದು ಅವರು ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಭಾರತೀಯ ಶಾಸ್ತ್ರದ ಅಧ್ಯಾಪಕರಾದರು. ಜರ್ಮನ್ ಭಾಷೆಯಲ್ಲಿ ಭಾಷಣಗಳನ್ನೀಯುವುದೇ ಅಲ್ಲದೆ ಅತ್ಯುತ್ತಮ ಲೇಖನಗಳನ್ನೂ ಬರೆಯುತ್ತಿರ್ದರು. ಭಾರತದ ಪರಿಚಯ ಸ್ವರೂಪವಾಗಿ ಅವರು ಬರೆದ ಪುಸ್ತಕವೊಂದರ ಲಕ್ಷಾಂತರ ಪ್ರತಿಗಳ ಸಂಸ್ಕರಣ ಪ್ರಕಟವಾಯಿತು. ಅಂತೂ ಧನ-ಯಶಗಳೆರಡೂ ಅವರ ಕಾಲ ಬುಡಕ್ಕೆ ಬಂದು ಸೇರಹತ್ತಿದ್ದವು.

ಭಾರತದಿಂದ ತೆರಳುವಾಗ ರಾಜಕೀಯದಿಂದ ದೂರವಿದ್ದರವರು. ಹೆಚ್ಚೆಂದರೆ ತಮ್ಮ ದೇಶದ ಪಾರತಂತ್ರ್ಯವು ಅವರಿಗೆ ಇಷ್ಟಕರವಾಗಿರಲಿಲ್ಲವೆಂದಷ್ಟೇ ಹೇಳಬಹುದು. ಇಲ್ಲಿರುವಾಗ ಅವರು ಸೂರ್ಯರಶ್ಮಿ ಎಲ್ಲೆಲ್ಲಿ ಪಸರಿಸುವುದೋ ಅಲ್ಲೆಲ್ಲ ಇಂಗ್ಲೀಷರ ರಾಜ್ಯವ ನೆಲೆಸಿದೆ ಮತ್ತು ಇಂಗ್ಲಿಷರ ಸಮಕ್ಷಮದಲ್ಲಿ ಅನ್ಯರಾಷ್ಟ್ರಗಳು ತೃಣಸಮಾನವೆಂದು ತಿಳಿಯುತ್ತಿದ್ದರು. ಆದರೆ ಜರ್ಮನಿಯಲ್ಲಿ ಹಿಟ್ಲರನು ಎಂದು ಶಪಥ ತೊಟ್ಟು ನಿಂತನೋ ಅಂದೇ ಮಲಗಿದ್ದ ಜರ್ಮನ್ನರು ಜಾಗೃತರಾಗಿ ಎದ್ದೇಳುವುದನ್ನು ಕಣ್ಣಾರೆ ಕಂಡು ಅವರು ಬೆರಗಾದರು. ಪಾರತಂತ್ರ್ಯದಲ್ಲಿ ತೊಳಲಾಡುತ್ತಿದ್ದ ತಮ್ಮ ದೇಶದ ಚಿತ್ರ ಚಿತ್ತಭಿತ್ತಿಯ ಮೇಲೆ ನಿಂತಿತು. ಅವರ ಹೃದಯದಲ್ಲಿ ದೇಶಭಕ್ತಿ ಉಕ್ಕೇರಿ ಬಂದಿತು. ಆ ಮೇಲೆ ದ್ವಿತೀಯ ಮಹಾಯುದ್ಧ ಪ್ರಾರಂಭವಾಯಿತು. ಜರ್ಮನ್ ವಿಜಯಯಾತ್ರೆಯು ಸಮಗ್ರ ಯುರೋಪನ್ನು ಹಿಡಿದು ಅಲ್ಲಾಡಿಸಿತು. ಇಷ್ಟರಲ್ಲಿ ಭಟ್ಟರು ಬರಿಯ ಪ್ರೊಫೆಸರರಾಗಿಯೇ ಉಳಿಯದೆ, ಕುಶಲ ಪತ್ರಿಕಾಕರ್ತರೂ ಆಗಿಬಿಟ್ಟಿದ್ದರು.

ನೇತಾಜಿಯವರು ಕಲಕತ್ತೆಯ ತಮ್ಮ ಮನೆಯಿಂದ ಮಾಯವಾಗಿ ಮೃತ್ಯುವಿನೊಂದಿಗೆ ಸರಸವಾಡುತ್ತಾ ಜರ್ಮನಿಯನ್ನು ತಲುಪಿದರು. ಹಿಟ್ಲರನು ನೇತಾಜಿಯವರನ್ನು ಭಾರತದ ಫ್ಯೂರರ್ (ಅಸಾಮಾನ್ಯ ಮುಂದಾಳು) ಎಂದು ಗೌರವಿಸಿದನು. ನೇತಾಜಿ ತಮ್ಮ ವಿಚಾರಗಳ ಪ್ರಚಾರಕ್ಕೋಸ್ಕರ ಬರ್ಲಿನ್ನಿನಿಂದ ಪತ್ರಿಕೆಯೊಂದನ್ನು ಪ್ರಕಟಿಸಬೇಕೆಂದು ನಿಶ್ಚಯಿಸಿದರು. ಈ ಹೊತ್ತಿಗೆ ಶ್ರೀ ಕೊಡವೂರು ಅನಂತರಾಮ ಭಟ್ಟರ ಹೆಸರು ಅವರ ಕಿವಿಯಲ್ಲಿ ಬಿದ್ದಿತು. ಅವರೇ ಪ್ರಧಾನ ಸಂಪಾದಕರಾಗಿ ನಿಯೋಜಿಸಲ್ಪಟ್ಟರು. ಅವರು 'ಆಜಾದ್ ಹಿಂದ್' ಪತ್ರಿಕೆಯ ಸಂಪಾದಕತ್ವವನ್ನು ಅತ್ಯಂತ ದಕ್ಷತೆಯಿಂದ ನಿರ್ವಹಿಸಿದರು. ಆಗ ಸಂಪಾದಕ ಮತ್ತು ಪ್ರೊಫೆಸರರಾದ ಶ್ರೀ ಕೆ. ಎ. ಭಟ್ಟರ ಕಾರ್ಯಾಲಯವು ಬರ್ಲಿನ್ನಿನ ತೃತೀಯ ಎಂಟಿಬರ್ಗ ಪ್ಲಾಜ್‌ನ ವಿಶಾಲ ಭವನದಲ್ಲಿತ್ತು.

ಜರ್ಮನಿ ಸಂಪೂರ್ಣ ಸೋತು ಶರಣಾಗತವಾಗುತ್ತಿದ್ದಾಗ ಭಟ್ಟರು ಬರ್ಲಿನ್ನಿನಲ್ಲೇ ಇದ್ದರು. 'ಆಜಾದ್ ಹಿಂದ್' ಪತ್ರಿಕೆಯಲ್ಲಿ ಮಿತ್ರರಾಷ್ಟ್ರಗಳ ವಿರುದ್ಧವಾಗಿ ಕಟುವಾದ ಲೇಖನಗಳನ್ನು ಬರೆದಿದ್ದ ಅವರನ್ನು ಮಿತ್ರ ರಾಷ್ಟ್ರಗಳು ಕೈಗೆ ಸಿಕ್ಕಿದರೆ ಕ್ಷಮಿಸುವಂತಿರಲಿಲ್ಲ. ಆದರೆ ಈಗ ಅವರು ಹಿಂದಿನ ಸಂಸ್ಕೃತ ಪಂಡಿತರಾಗಿರಲಿಲ್ಲ. ೧೭ ವರ್ಷದ ಜರ್ಮನಿಯ ವಾಸದಲ್ಲಿ ರಾಜಕೀಯದಲ್ಲಿ ಚೆನ್ನಾಗಿ ಪಳಗಿದ್ದರು. ಅವರು ಬರ್ಲಿನ್ನಿನಿಂದ ದೂರ ದೂರ, ದಕ್ಷಿಣ ಜರ್ಮನಿಯ ಬವೇರಿಯಾ ಪ್ರದೇಶಕ್ಕೆ ಹೋಗಿ, ತಾವು ಜಿಪ್ಸಿಯೆಂದು ಹೇಳಿಕೊಂಡು ಒಬ್ಬ ರೈತನಲ್ಲಿ ಕೆಲಸಕ್ಕೆ ಸೇರಿದರು. (ಜಿಪ್ಸಿಗಳು ಅನೇಕ ಶತಮಾನಗಳ ಹಿಂದೆ ಭಾರತ

# ಯಾರಿಗೂ ಗೊತ್ತಿಲ್ಲ!

ಡಾ. ಕೊಡವೂರು ಅನಂತರಾಮ ಭಟ್ಟರ ಈ ಹೃದಯವಿದ್ರಾವಕ ವೃತ್ತಾಂತವನ್ನು ಪ್ರಸ್ತುತ ಲೇಖಕರು ನಮಗೆ ಬರೆದು ಕಳಿಸಿದಾಗ ನಾವು ಭಟ್ಟರ ಸ್ವಗ್ರಾಮದ ನಮ್ಮ ಸ್ನೇಹಿತರಿಗೆ ಪತ್ರ ಬರೆದು ಭಟ್ಟರ ಕಥೆ ಮುಂದೇನಾಯಿತೆಂದು ವಿಚಾರಿಸಿದೆವು. ಅಲ್ಲಿಂದ ಬಂದ ವಾರ್ತೆ ಈ ದುರಂತಕ್ಕೆ ಕಳಸವಿಟ್ಟಂತಿದೆ.

ಶ್ರೀ ಭಟ್ಟರು ಉಡುಪಿ, ಮೈಸೂರು, ತಿರುಪತಿಗಳಲ್ಲಿ ಸಂಸ್ಕೃತಾಭ್ಯಾಸ ಮಾಡಿ ಜರ್ಮನಿಗೆ ಹೊರಟಾಗ್ಗೆ ಅವರ ಪತ್ನಿ ನಾಲ್ಕು ತಿಂಗಳ ಗರ್ಭಿಣಿ. ಭಟ್ಟರು ತಮಗೆ ಬೇಕಾದ ಹಣಕ್ಕಾಗಿ ಇದ್ದಬಿದ್ದ ಆಸ್ತಿ ಮನೆಗಳನ್ನು ಒತ್ತೆ ಹಾಕಿದ್ದರು. ಆದರೆ ಯುದ್ಧಾರಂಭವಾದ ಮೇಲೆ ಅವರ ಬಗ್ಗೆ ಅವರ ಹೆಂಡತಿಗಾಗಲಿ, ಬಂಧುಗಳಿಗಾಗಲಿ, ಏನೊಂದೂ ಸುದ್ದಿ ಬರಲಿಲ್ಲ. ಅಷ್ಟೇ ಅಲ್ಲ, ಅವರು ಭಾರತಕ್ಕೆ ಮರಳಿದ ಮತ್ತು ರೋಗದಿಂದ ನರಳಿದ ಸಮಾಚಾರವೂ ಊರಲ್ಲಿ ಯಾರಿಗೂ ಗೊತ್ತಿಲ್ಲ. ಅವರ ಪತ್ನಿ ಬಡತನದಲ್ಲಿ ನವೆನವೆದು ಒಂದೆರಡು ವರ್ಷಗಳ ಹಿಂದೆ (೧೯೬೭ರ ಸುಮಾರಿಗೆ) ತೀರಿಕೊಂಡರು. ಅವರ ಮನೆ ಸಾಲಿಗರ ಪಾಲಾಯಿತು. ಈ ದಿಗ್ಗಜವಿದ್ವಾಂಸನ ಏಕಮಾತ್ರ ಪುತ್ರ ಹೊಟೆಲ್ ವ್ಯವಸಾಯದಲ್ಲಿ ಸೇರಿ ಬೆಳಗಾವಿಯಲ್ಲಿದ್ದಾರೆಂದು ತಿಳಿದಿದೆ. ಅವರಿಗೂ ತಂದೆಯ ಬಗ್ಗೆ ಹೆಚ್ಚೇನೂ ಗೊತ್ತಿಲ್ಲ.

ಡಾ. ಭಟ್ಟರು ದಿವಂಗತರಾಗಿದ್ದಾರೆಂದೇ ಕೊಡವೂರಲ್ಲಿ ಎಲ್ಲರೂ ನಂಬಿದ್ದಾರೆ.

— ಸಂ

ದಿಂದ ಯುರೋಪಿನತ್ತ ಹೋದವರೆಂದು ಊಹಿಸಲಾಗಿದೆ) ಭಟ್ಟರು ಆರೋಗ್ಯವಂತರೂ ಸ್ವಲ್ಪ ಗಿಡ್ಡ ದೇಹದವರೂ ಆಗಿದ್ದರು. ಅವರ ಶರೀರ ಸ್ಥೂಲವಾಗಿರಲಿಲ್ಲ. ನಮ್ಮ ದೃಷ್ಟಿಯಲ್ಲಿ ಅವರು ಗೋಧಿ ಬಣ್ಣದವರಾಗಿದ್ದರೂ ಐರೋಪ್ಯರ ದೃಷ್ಟಿಯಲ್ಲಿ ಕರಿಯರೆ ಆಗಿದ್ದರು. ಆದ್ದರಿಂದ ಅವರನ್ನು ಆ ಊರಿನವರು ಜಿಪ್ಸಿಯೆಂದು ನಂಬಿದ್ದರು. ಬವೇರಿಯಾದ ಆ ಊರಿನಲ್ಲಿ ಕ್ಷಿರ ಈ ತರುಣನನ್ನು ಜಿಪ್ಸಿಯಲ್ಲವೆಂದು ಯಾರೂ ಸಂಶಯಪಡುವಂತಿರಲಿಲ್ಲ.

ಮೊದಲು ಮೊಟ್ಟೆಯನ್ನು ತಿನ್ನಲೇ ಹಿಂಜರಿಯುತ್ತಿದ್ದ ಭಟ್ಟರು ಈಗ ತಮ್ಮ ಋಗ್ವೇದದ ಪೂರ್ವಜರನ್ನು ಸಂಪೂರ್ಣ ಅನುಕರಿಸತೊಡಗಿದರು! ಅನೇಕ ತಲೆಮಾರುಗಳಿಂದಲೂ ಅವರ ಮಾಧ್ವ-ವೈಷ್ಣವ ಪರಿವಾರ ಮದ್ಯವನ್ನು ಕಣ್ಣಿನಿಂದಲೂ ನೋಡಿರಲಿಕ್ಕಿಲ್ಲ. ಆದರೆ ಈಗ ಅದೇ ಭಟ್ಟರ ಸಾಮಾನ್ಯ ಪೇಯವಾಗಿತ್ತು. ತಮ್ಮ ಸುಸಂಸ್ಕೃತ ವ್ಯಕ್ತಿತ್ವವನ್ನು ಯಜಮಾನನಿಂದ ಅದೆಂತು ಬಚ್ಚಿಟ್ಟರೋ! ಆದರೆ ಯಾರೂ ತಲೆಯ ಮೇಲೆ ಮೃತ್ಯು ನರ್ತಿಸುತ್ತಿರುವಾಗ ಯಾವುದೇ ಸೋಗನ್ನು ಅರೆಮನಸ್ಸಿನಿಂದ ಮಾಡಲಾರನು. ಭಟ್ಟರು ಜಿಪ್ಸಿಯ ಪಾತ್ರವನ್ನು ಕುಂದಿಲ್ಲದಂತೆ ನಿರ್ವಹಿಸುತ್ತಿದ್ದರು.

ಉಡುಪಿಯಲ್ಲಿ ಭಟ್ಟರು ಕುದುರೆಗಳನ್ನೇನೋ ನೋಡಿರಬಹುದು. ಆದರೆ ಅವರು ಅದರ ಹತ್ತಿರವೂ ಸುಳಿಯುವ ಸಾಹಸ ಮಾಡಿರಲಿಕ್ಕಿಲ್ಲ. ಇಲ್ಲಿ ಅವರ ರೈತ-ಯಜಮಾನನಲ್ಲಿ ಅಸಂಖ್ಯ ಕುದುರೆಗಳಿದ್ದವು. ಅವುಗಳನ್ನು ಕಟ್ಟುವುದು, ಬಿಡುವುದು, ಮೇಯಿಸುವುದು ಇತ್ಯಾದಿ ಕೆಲಸಗಳನ್ನೆಲ್ಲಾ ಅವರೇ ಮಾಡಬೇಕಾಗಿತ್ತು. ಹೀಗೆ ಕುದುರೆ ಸವಾರಿ ಮಾಡುತ್ತಿದ್ದಾಗ ಒಮ್ಮೆ ಕೆಳಗೆ ಬಿದ್ದು ಎದೆಗೆ ಪೆಟ್ಟಾದುದರಿಂದ ಹೃದ್ರೋಗ ಅವರಿಗಂಟಿಕೊಂಡಿತು. ಇದನ್ನು ಅವರು ಸಹಿಸುತ್ತಿದ್ದರು. ೧೯೪೭ ರ ಅಗಸ್ಟ್ ಮಧ್ಯದಲ್ಲಿ ಬ್ರಿಟಿಷರು ಭಾರತದಿಂದ ತೊಲಗುವರೆಂಬ ವಾರ್ತೆಯನ್ನು ಓದಿದಾಗ ಹೃದ್ರೋಗದೊಡನೆ ಇನ್ನೊಂದು ರೋಗವು ಅಂಟಿಕೊಂಡಿತು. ಅದೆಂದರೆ 'ಸ್ವಾತಂತ್ರ್ಯ ಪಡೆದ ಸ್ವದೇಶಕ್ಕೆ ಮರಳಬೇಕೆ'ಂಬ ಚಿಂತೆ. ಆದರೆ ಸುತ್ತಲೂ ಅಮೇರಿಕನ್ ಸೈನಿಕರು ತಳವೂರಿದ್ದರು. ಊರಿಂದ ಹೊರಬಿದ್ದೊಡನೆ ಇವರು ಜಿಪ್ಸಿಯಲ್ಲವೆಂದು ಅಮೇರಿಕನ್ನರು ಸಂಶಯ ತಾಳಿದರೆ ಮೃತ್ಯುವಿನ ದವಡೆಯಿಂದ ಯಾರು ಇವರನ್ನು ಪಾರು ಮಾಡಬಲ್ಲರು ?

ಆದರೂ ಭಟ್ಟರ ಹೃದ್ರೋಗಕ್ಕೆ ಚಿಕಿತ್ಸೆ ಅತ್ಯಂತ ಅವಶ್ಯಕವಾಗಿತ್ತು. ಬವೇರಿಯದ ಸೀಮೆಯು ಸ್ವಿಟ್ಜರ್ಲಂಡಿನ ಗಡಿಯನ್ನು ಅದೇ ಪ್ರದೇಶದಲ್ಲಿ ಸೇರುತ್ತಿತ್ತು. ಭಟ್ಟರು ಒಂದು ದಿನ ಸಮಯ ಸಾಧಿಸಿ ಮೃತ್ಯುವಿನೊಡನೆ ಆಟವಾಡಿ ಗಡಿಯನ್ನುಲ್ಲಂಘಿಸಿ ಪಾರಾದರು. ಸ್ವಿಟ್ಜರ್ಲಂಡಿನ ಓರ್ವ ಡಾಕ್ಟರರ ಬಳಿ ಹೋಗಿ ಪರೀಕ್ಷೆ ಮಾಡಿಸಿದರು. ಫೀಸ್ ಕೊಡಲು ಹಣವೆಲ್ಲಿಂದ ಬರಬೇಕು? ಆದರೆ ಭಟ್ಟರೊಡನೆ ಮಾತನಾಡಿದ ಮೇಲೆ ಅವರ ವ್ಯಕ್ತಿತ್ವದಿಂದ ಡಾಕ್ಟರರು ಬಹಳ ಪ್ರಭಾವಿತರಾದರು. ಭಟ್ಟರು ತಮ್ಮ ವೃತ್ತಾಂತವನ್ನೆಲ್ಲಾ ತಿಳಿಸಿ, ಈಗ "ಸ್ವತಂತ್ರವಾದ ನನ್ನ ದೇಶಕ್ಕೆ ಮರಳಬಯಸುತ್ತಿದ್ದೇನೆ"ಎಂದು ಹೇಳಿದರು.

ಭಟ್ಟರಿಗೆ ಭಾರತದ ಕಾನ್ಸುಲ್ ಜನರಲ್ಲರ ಭೇಟಿ ಮಾಡಿಸಲಾಯಿತು. ಸ್ವಿಟ್ಜರ್‌ಲಂಡಿನಲ್ಲಾಗಬಹುದಾದದಷ್ಟು ಉತ್ತಮವಾಗಿ ತಮ್ಮ ಚಿಕಿತ್ಸೆ ಭಾರತದಲ್ಲಾದೀತೇ? ಅವರಂಥ [illegible] ಪಂಡಿತರಿಗೆ ಸ್ವಿಟ್ಜರ್‌ಲಂಡಿನಲ್ಲಿ, ಕೆಲಸ ದೊರಕುವುದು ಕಷ್ಟವಿರಲಿಲ್ಲ. ಆದರೆ ಅವರು ಸ್ವತಂತ್ರ

ಭಾರತವನ್ನು ತಲುಪಲು ಚಡಪಡಿಸುತ್ತಿದ್ದರು. "ನನ್ನನ್ನು ಭಾರತಕ್ಕೆ ಕಳುಹಿಸಿ ಬಿಡಿ" ಎಂದು ಕಾನ್ಸಲ್ ಜನರಲ್ಲರನ್ನು ಕೇಳಿಕೊಂಡರು.

ಅವರ ಲಕ್ಷಾಂತರ ಮಾರ್ಕುಗಳು ಜರ್ಮನಿಯ ಬ್ಯಾಂಕಿನಲ್ಲಿದ್ದುದನ್ನು ಸಿದ್ಧಪಡಿಸಲು ಬೇಕಾದ ಪತ್ರಗಳು ಅವರಲ್ಲಿದ್ದುವು. ಆದರೆ ಈಗ ಆ ಮಾರ್ಕುಗಳು ಕೇವಲ ಕಾಗದದ ಚೂರುಗಳಾಗಿದ್ದುವು. ಪೆಟ್ಟಿಗೆಯನ್ನು ಹಿಂತಿರುಗಿಸುವ ಪತ್ರ ಬರೆದುಕೊಟ್ಟು ಭಾರತ ಸರಕಾರದ ಖರ್ಚಿನಿಂದ ಸ್ವಿಟ್ಜರ್ಲ್ಯಾಂಡಿನಿಂದ ಭಾರತಕ್ಕೆ ಬಂದರು.

ನವೆಂಬರ್ ೮, ೧೯೪೮ ರಂದು ದಿಲ್ಲಿಯ ಸಭೆಯೊಂದರಲ್ಲಿ ನಾನು ಮಾತಾಡುತ್ತಿದ್ದಾಗ, ಕೋಟ್-ಪ್ಯಾಂಟ್ ಧರಿಸಿದ್ದ ಪ್ರೌಢರೊಬ್ಬರು ನನ್ನತ್ತ ಬಂದರು. ನನ್ನೊಂದಿಗೆ ಅವರಾಡಿದ ಸಂಸ್ಕೃತ ನುಡಿಯನ್ನು ಕೇಳಿದೊಡನೆ ಅನಂತರಾಮ ಭಟ್ಟರ ನೆನಪಾಯಿತು. ೧೮ ವರ್ಷಗಳ ದೀರ್ಘಾವಧಿಯ ಅಗಲುವಿಕೆಯ ನಂತರ ನನ್ನ ಮಿತ್ರನನ್ನು ನೋಡುತ್ತಿದ್ದೆನು. ನನ್ನ ಕಣ್ಣನ್ನೇ ನಾನು ನಂಬದಂತಾದೆನು. ಮರುದಿನ ಅವರು ನಾನಿದ್ದ ಮನೆಗೆ ಬಂದರು. ಅವರು ತಮ್ಮ ಜರ್ಮನಿಯ ಜೀವನವನ್ನು ಸಂಕ್ಷಿಪ್ತವಾಗಿ ವಿವರಿಸಿದರು. ಒಳ್ಳೆಯ ಶಿಫಾರಸು ಪತ್ರಗಳಿರದ್ದರಿಂದ ಎಷ್ಟೊಂದು ಪ್ರಯತ್ನಿಸಿದರೂ ಕೆಲಸ ದೊರಕಲಿಲ್ಲವೆಂದು ತಿಳಿಸಿದರು. ಹೋಟೆಲೊಂದರಲ್ಲಿ ಇಳಿದುಕೊಂಡಿದ್ದರು. ಕೆಲ ತಿಂಗಳುಗಳಿಂದ ಅಲ್ಲಿಯ ಬಿಲ್ಲನ್ನು ಸಲ್ಲಿಸಲೂ ಅಸಮರ್ಥರಾಗಿದ್ದರು. ಅದೇ ಸಮಯದಲ್ಲಿ ಹಿಂದೀ ಸಾಹಿತ್ಯ ಸಮ್ಮೇಳನದ ಪರವಾಗಿ ಪಾರಿಭಾಷಿಕ ಶಬ್ದ ನಿರ್ಮಾಣ ಕಾರ್ಯವನ್ನು ನಾನು ವಹಿಸಿಕೊಂಡಿದ್ದೆ. ಭಟ್ಟರ ಸಂಸ್ಕೃತ ಮತ್ತು ಜರ್ಮನ್ ಭಾಷೆಯ ಅಗಾಧ ಜ್ಞಾನವು ಪರಿಭಾಷಾ ನಿರ್ಮಾಣಕ್ಕೋಸ್ಕರವೇ ಇದೆಯೋ ಎನ್ನುವಂತಿತ್ತು. ಆದ್ದರಿಂದ, ಕೆಲಸ ಹುಡುಕುವ ಪ್ರಯತ್ನವನ್ನು ಮುಂದರಿಸಿ. ಒಂದು ವೇಳೆ ಬೇರಾವುದೂ ದೊರಕದಿದ್ದರೆ ಪರಿಭಾಷೆಯ ಕಾರ್ಯದಲ್ಲಿ ಸಹಕರಿಸಬೇಕೆಂದೂ ಆದರೆ ಅದರಲ್ಲಿ ತಿಂಗಳಿಗೆ ರೂ. ೩೦೦ ಕ್ಕಿಂತ ಹೆಚ್ಚಿನ ವೇತನ ಕೊಡುವಂತಿಲ್ಲವೆಂದೂ ಅವರಿಗೆ ತಿಳಿಸಿದೆ.

೧೮ ವರ್ಷಗಳ ದೀರ್ಘ ಜರ್ಮನಿಯ ವಾಸದಲ್ಲಿ ಅವರು ಅನೇಕಾನೇಕ ಗುಣಾವಗುಣಗಳನ್ನು ಕಲಿತುಕೊಂಡಿದ್ದರು. ಗುಣಗಳಲ್ಲಿ ಅರ್ಥಶಾಸ್ತ್ರ ಭಾರತೀಯ ಸಾಹಿತ್ಯ ಮತ್ತು ಇತಿಹಾಸದ ವಿಶೇಷ ಜ್ಞಾನವು ಪ್ರಾಮುಖ್ಯವಾಗಿದ್ದುವು. ಇಲ್ಲಿಯ ಪ್ರಾಚೀನ ಅಭಿಲೇಖ ಸಂಗ್ರಹಾಲಯವನ್ನು ನೋಡಿದಾಗ, "ಮೂರು – ನಾಲ್ಕು ತಿಂಗಳುಗಳ ಅವಧಿಯಲ್ಲೇ ನೀವು ಈ ಅರಣ್ಯ ಮಧ್ಯದಿಂದ ನಿಮ್ಮ ವಸ್ತುವನ್ನು ಎರಡೇ ನಿಮಿಷಗಳಲ್ಲಿ ಹುಡುಕಿ ತೆಗೆಯಲು ಸಾಧ್ಯವಾಗುವಂತೆ ನಾನು ಈ ಸಂಗ್ರಹಾಲಯವನ್ನು ಸಂಘಟಿಸಬಲ್ಲೆ" ಎಂದು ತಮ್ಮ ಯೋಗ್ಯತೆಯ ಸಮರ್ಥನೆ ಮಾಡಿದರು. ಆದರೆ ಭಾರತವು ಸ್ವತಂತ್ರವಾದ ಮೇಲೆ ಮುಖಸ್ತುತಿಯ ರಾಜ್ಯವು ಸ್ಥಾಪಿತವಾಗಿದೆ. ಇಲ್ಲಿ ಗುಣಗಳನ್ನು ಯಾರು ನೋಡುವರು? ಭಟ್ಟರಿಗೆ ಯಾವ ಕೆಲಸವೂ ದೊರಕಲಿಲ್ಲ. ಮಾರ್ಚ್ ಅಂತ್ಯದವರೆಗೂ ಅತ್ತಿತ್ತ ಅಲೆದಾಡುತ್ತಲೇ ಇದ್ದರು. ಹೋಟೇಲಿನವರ ಋಣವು ಹೆಚ್ಚುತ್ತಾ ಹೋಯಿತು. ಕೊನೆಗೆ ಏಪ್ರಿಲ್ ೧, ೧೯೪೯ ರಂದು ಪರಿಭಾಷಾ-ನಿರ್ಮಾಣದ ಕೆಲಸದಲ್ಲಾದರೂ ಸೇರಿಕೊಳ್ಳಲೆಂದು ದಿಲ್ಲಿಯಿಂದ ಪ್ರಯಾಗಕ್ಕೆ ಬಂದು ತಲುಪಿದರು,

ಅವರಿಗಂಟಿಕೊಂಡಿದ್ದ ಅವಗುಣ ಯುರೋಪ್ ಅಥವಾ ಜರ್ಮನಿಯ ದೋಷದಿಂದಾಗಿರಲಿಲ್ಲ. ಯುರೋಪಿಗೆ ಹೋದ ಮೇಲೆ ಅವರ ಸ್ವದೇಶ

ಭಕ್ತಿಯು ಇನ್ನೂ ಹೆಚ್ಚಾಯಿತು. ಆದರೆ, ಅವರು ಆಧುನಿಕತೆಯ ವರ್ಣದಿಂದ ಸಂಪೂರ್ಣ ರಂಜಿತರಾದರು. ಪ್ರತಿಯೊಂದು ವಿಷಯದಲ್ಲಿಯೂ ಪ್ರತಿ ವಸ್ತುವಿನಲ್ಲಿಯೂ ಸ್ವಚ್ಛತೆ ಮತ್ತು ಸುವ್ಯವಸ್ಥೆಯನ್ನು ಅಪೇಕ್ಷಿಸುತ್ತಿದ್ದರು. ಆದರೆ ಸಹಸ್ರಾರು ಸಂವತ್ಸರಗಳಿಂದ ಮಲೆತು ನಿಂತ ಕೊಳೆಯು ಇಷ್ಟು ತೀವ್ರ ಮಾಯವಾಗುವದೆಂತು? ಇದರಿಂದ ಅವರಿಗೆ ಭಾರತೀಯರ ಬಗ್ಗೆ ತಿರಸ್ಕಾರ ಭಾವ ಉಂಟಾಯಿತು. ಹಿಂದೆ ಅವರು ಜರ್ಮನಿಯಿಂದ ಕನ್ನಡ ಪತ್ರಿಕೆಗಳಿಗೆ ಲೇಖನಗಳನ್ನು ಬರೆದು ಕಳಿಸುತ್ತಿದ್ದರು. ಲಕ್ಷಾಂತರ ಪ್ರತಿಗಳ ಪ್ರಸಾರವುಳ್ಳ ಜರ್ಮನ್ ಪತ್ರಿಕೆಗಳಲ್ಲಿ ಅವರ ಲೇಖನಗಳು ಪ್ರಕಟವಾಗಲಾರಂಭಿಸಿದಾಗ, ಸಾವಿರ–ಎರಡು ಸಾವಿರ ಪ್ರತಿಗಳ ಕನ್ನಡ ಪತ್ರಿಕೆಗಳ ಮೂಲ್ಯವನ್ನು ಕಡೆಗಣಿಸಲಾರಂಭಿಸಿದರು. ಕನ್ನಡ ಪತ್ರಿಕೆಗಳು ಎಷ್ಟು ಕಡಿಮೆ ಪ್ರತಿಗಳಲ್ಲಚ್ಚಾದರೂ ಅವುಗಳ ಮುಖಾಂತರವೇ ತಮ್ಮ ಜನರ ವರೆಗೆ ಮುಟ್ಟಬಲ್ಲರೆಂದು ಅವರು ತಿಳಿದುಕೊಳ್ಳಲಾರದೇ ಹೋದರು. ಯುರೋಪಿನಲ್ಲಿದ್ದಾಗ, ತಮ್ಮನ್ನು ಕೇವಲ ಭಾರತೀಯನೆಂದು ಒಪ್ಪುತ್ತಿದ್ದ ಅವರು ಪ್ರಾಂತೀಯತೆಯ ಹೆಸರು ಕೇಳುತ್ತಲೇ ಮೂಗು ಮುರಿಯುತ್ತಿದ್ದರು. 'ಕರ್ನಾಟಕ ನಿಮ್ಮನ್ನು ಸ್ವಕೀಯನನ್ನಾಗಿಸಿದರೆ ಎಲ್ಲಾ ಮಾರ್ಗಗಳೂ ಸುಗಮವಾಗಬಹುದು. ಕನ್ನಡ ಪತ್ರಿಕೆಗಳಲ್ಲಿ ನಿಮ್ಮ ಜರ್ಮನಿಯ ಜೀವನ ಮತ್ತು ಅನುಭವಗಳ ಬಗ್ಗೆ ಬರೆಯತೊಡಗಿ'ರೆಂದು ಹೇಳಿದೆ. ಆದರೆ ಅವರಿಗದು ಸಮ್ಮತವಾಗಿರಲಿಲ್ಲ. ಅವರೊಂದಿಗೆ ಅವರ ಊರು, ಮನೆಯ ಪ್ರಸ್ತಾಪವೆತ್ತಿದರೆ, "ಅವರೊಂದಿಗೆ ನನಗೇನು ಸಂಬಂಧ? ನಾನು ಪತಿತ! ಮೃತಸಮಾನನೆಂದು ನನ್ನ ಶ್ರಾದ್ಧ ಕರ್ಮವನ್ನೂ ಮಾಡಿಬಿಟ್ಟಿದ್ದಾರೆ." ಎನ್ನುತ್ತಿದ್ದರು. ಅವರ ಮಾವನವರೂ ಇತರ ಸಂಬಂಧಿಗಳೂ ಶ್ರಾದ್ಧ ಕರ್ಮ ಮಾಡಿರಲಿ; ಅವರ ಕೈ ಹಿಡಿದ ಮಡದಿ ಅದೆಂತು ಶ್ರಾದ್ಧ ಮಾಡಿರಲು ಸಾಧ್ಯ! ೧೮ ವರ್ಷಗಳ ನಂತರ ಸ್ವದೇಶಕ್ಕೆ ಮರಳುವಾಗ ತಮ್ಮೊಡನೆ ಪರದೇಶದಿಂದ ತಂದ ಅವಗುಣದ ಬುತ್ತಿ ಇದು.

೩ನೇ ಏಪ್ರಿಲ್, ೧೯೪೯ರಲ್ಲಿ ಅವರು ನಮ್ಮೊಡನೆ ಕಲಿಂಪೋಂಗಿಗೆ ಹೊರಟರು. ಹೃದ್ರೋಗವು ಬಹಳ ಅನಿಷ್ಟಕಾಯಿಲೆ. ಸದಾ ಔಷಧದ ಅಧೀನರಾಗಿಯೇ ಇರಬೇಕಾಗಿತ್ತು. ಒಮ್ಮೊಮ್ಮೆ ಪೀಡೆಯು ಅಸಹನೀಯವಾಗುತ್ತಿತ್ತು. ಆದರೆ, ಸಮಯದ ಅಪವ್ಯಯ ಮಾಡದೆ, ದಿನವಿಡೀ ಪರಿಭಾಷಾ ನಿರ್ಮಾಣದಲ್ಲೇ ತೊಡಗಿರುತ್ತಿದ್ದರು. ನಮ್ಮ ಪರಿಭಾಷಾ ಕಾರ್ಯದಲ್ಲಿ ಭಟ್ಟರು ಬಹಳ ಸಹಾಯ ಮಾಡಿದರು. ಸಮ್ಮೇಳನದ ಅಧಿಕಾರಿಗ ಶಿಥಿಲತೆಯಿಂದ ಆ ಕೆಲಸವನ್ನು ನಾವು ಮುಂದುವರಿಸುವುದು ಸಾಧ್ಯವಾಗಲಿಲ್ಲ. ಆಗಿದ್ದರೆ ಭಟ್ಟರ ಸಹಾಯದಿಂದ ಹಿಂದೀ ಹಾಗೂ ಅನ್ಯ ಭಾರತೀಯ ಭಾಷೆಗಳು ಪರಿಭಾಷೆಯ ವಿಷಯದಲ್ಲಿ ನಿಶ್ಚಿಂತವಾಗಬಹುದಿತ್ತು.

೨೨ನೇ ಫೆಬ್ರುವರಿ ೧೯೫೦ರಲ್ಲಿ ಡಾ. ಭಟ್ಟರೊಡನೆ ನಾವು ಪ್ರಯಾಗಕ್ಕೆ ಹಿಂದಿರುಗಿ ಹೊರಟೆವು. ಕಟಿಹಾರದಲ್ಲಿ ಅಂದು ಉಳಿದು ಮರುದಿನ ನಮ್ಮ ಮಿತ್ರ ಶ್ರೀ ಮಾಮಂಡಿಯಾರ ಕಾರಿನಲ್ಲಿ ನಿಲ್ದಾಣಕ್ಕೆ ಹೋಗುತ್ತ ದಾರಿಯಲ್ಲಿ ನಮ್ಮ ಸಂಗಾತಿಯೊಬ್ಬರು ಭಟ್ಟರನ್ನು ನೋಡಿ "ನಿಮಗೆ ನಿದ್ದೆ ಬರುತ್ತಿದೆಯೇ? ಮಲಗಿ ಕೊಳ್ಳಿ"ರೆಂದು ಹೇಳಿದರು. ಆದರೆ

ನಿಲ್ದಾಣ ತಲುಪಿ ನೋಡುವಾಗ, ಭಟ್ಟರು ಮಲಗಿರಲಿಲ್ಲ, ಮೂರ್ಛಾವಸ್ಥೆಯಲ್ಲಿದ್ದರು. ರೇಲ್ವೆ ಆಸ್ಪತ್ರೆಗೆ ಭಟ್ಟರನ್ನು ಎತ್ತಿಕೊಂಡೊಯ್ದೆವು. ಸ್ವಲ್ಪ ವೇಳೆ ಮೊದಲು ನಗುತ್ತಾ, ನುಡಿಯುತ್ತಿದ್ದ ಭಟ್ಟರು ಈಗ ಸಂಜ್ಞಾಹೀನರಾಗಿ ಬಿದ್ದಿದ್ದರು. ಇವರು ಪಾರ್ಶ್ವವಾಯುವಿಗೆ ಗುರಿಯಾಗಿರುವರೆಂದು ಡಾಕ್ಟರರು ತಿಳಿಸಿದರು. ಹೃದ್ರೋಗವಂತೂ ಮೊದಲಿನಿಂದಲೇ ತಳವೂರಿತ್ತು. ಮರುದಿನವೂ ಅವರ ಸ್ಥಿತಿ ಹಾಗೇ ಇತ್ತು. ಅವರ ಈ ಸ್ಥಿತಿಯನ್ನು ನೋಡಿ ನನ್ನ ಹೃದಯ ವ್ಯಾಕುಲತೆಯಿಂದ ತುಂಬಿತು. ಜರ್ಮನಿಯಲ್ಲಿ ಕಳೆದ ೧೮ ವರ್ಷಗಳಲ್ಲಿ ತಮ್ಮ ದೇಶಕ್ಕೆ ಅತ್ಯಂತ ಅಗತ್ಯವಾಗಿದ್ದ ಎಷ್ಟೊಂದು ಅಗಾಧ ಜ್ಞಾನ ಮತ್ತು ಅನುಭವವನ್ನು ಸಂಪಾದಿಸಿದ್ದ ಅವರು ಅದೆಲ್ಲವನ್ನು ತಮ್ಮೊಂದಿಗೆ ಕೊಂಡೊಯ್ಯುವರೋ?

ಕಟಿಹಾರದಲ್ಲಿ ಯೋಗ್ಯ ಚಿಕಿತ್ಸೆಯಾಗುವುದು ಅಸಾಧ್ಯವಾಗಿತ್ತು. ಆದ್ದರಿಂದ ಡಾಕ್ಟರರ ಅನುಮತಿಯೊಂದಿಗೆ ನಾವು ಪ್ರಯಾಗಕ್ಕೆ ಅವರನ್ನು ಕರೆದೊಯ್ಯಲು ನಿರ್ಧರಿಸಿದ್ದೆವು. ೨೬ನೇ ಫೆಬ್ರುವರಿಯಂದು ನಾವು ಪ್ರಯಾಗವನ್ನು ತಲುಪಿದಾಗ ಕತ್ತಲಾಗಿತ್ತು. ಭಟ್ಟರನ್ನು ಮೋತಿಲಾಲ ಮೆಮೋರಿಯಲ್ ಆಸ್ಪತ್ರೆಗೆ ಸಾಗಿಸಿಕೊಂಡು ಹೋದೆವು. ಬಹಳ ದಿನಗಳವರೆಗೆ ಭಟ್ಟರು ಮೃತ್ಯುವಿನೊಡನೆ ಹೋರಾಡಿ ಪಾರಾದರು. ಆದರೆ, ಪಾರ್ಶ್ವವಾಯುವಿನ ಪ್ರಭಾವ ತೊಲಗಬೇಕಾದರೆ ಒಂದು ವರ್ಷದ ದೀರ್ಘಾವಧಿ ಹಿಡಿಯಿತು.

ಕೆಲವು ತಿಂಗಳುಗಳಾದ ಮೇಲೆ ಆಸ್ಪತ್ರೆಯ ಅಧಿಕಾರಿಗಳು, “ಇವರು ಅಪಾಯದಿಂದ ದೂರಾಗಿರುವರು. ಸಶಕ್ತರಾಗಲು ಇನ್ನೂ ಅನೇಕ ಮಾಸಗಳು ಬೇಕಾಗಿರುವುದರಿಂದ ಅಷ್ಟು ಸಮಯ ಇಲ್ಲಿಟ್ಟುಕೊಳ್ಳಲಾರೆವೆ”ಂದು ಹೇಳಿದರು. ದೊಡ್ಡ ಸಮಸ್ಯೆಯುಂಟಾಯಿತು. ಭಟ್ಟರನ್ನು ಎಲ್ಲಿಗೆ ಕರೆದೊಯ್ಯಬೇಕು? ನಾನು ಮಸೂರಿಯಲ್ಲಿರುತ್ತಿದ್ದೆ. ಸುಮಾರು ಆರೂವರೆ ಸಹಸ್ರ ಅಡಿ ಎತ್ತರದ ಆ ಊರು ಭಟ್ಟರ ಚಿಕಿತ್ಸೆಗೆ ಪ್ರತಿಕೂಲವಾಗಿತ್ತು. ಶ್ರೀ ಪುರುಷೋತ್ತಮದಾಸ ಟಂಡನ್ನರು ಮಂತ್ರಿಗಳಿಗೆ ಬರೆದು ಭಟ್ಟರು ಸ್ವಲ್ಪ ಸಮಯ ಅಲ್ಲಿಯೇ ಇರಲು ಸಾಧ್ಯವಾಗುವಂತೆ ವ್ಯವಸ್ಥೆ ಮಾಡಿದರು.

ಮುಂದಿನ ವರ್ಷ (೧೯೫೧ರಲ್ಲಿ) ಭಟ್ಟರ ಸಮಾಚಾರ ಮಿತ್ರರಿಂದ ಆಗಾಗ ದೊರೆಯುತ್ತಿತ್ತು. ಸಾಹಿತ್ಯ ಸಮ್ಮೇಳನವೂ ಕೆಲಸ ಮಾಡದೇ ವೇತನ ಕೊಡುವಂತಿರಲಿಲ್ಲ. ನಾನು ಚಡಪಡಿಸುತ್ತಿದ್ದೆ. ಅವರಿಗೆ ಏನಾದರೂ ಯೋಗ್ಯ ಕೆಲಸ ಕೊಡಿಸಲು ಸರಕಾರಕ್ಕೆ ಬರೆದೆ. ಆದರೆ ನಮ್ಮ ಸ್ವತಂತ್ರ ಭಾರತದಲ್ಲಿ ಭಟ್ಟರಂಥ ಅಮೂಲ್ಯ ರತ್ನಕ್ಕೆ ಕಾಸಿನ ಬೆಲೆ ಕೂಡಾ ಇರಲಿಲ್ಲ! ಅನಂತರ ಭಟ್ಟರು ಎತ್ತ ಅದೃಶ್ಯರಾದರೋ! ಕೆಲ ವರ್ಷಗಳಿಂದ ಅವರ ಪತ್ತೆಯೇ ಇಲ್ಲವಾಗಿದೆ. ಆಗಾಗ ಅವರನ್ನು ಸ್ಮರಿಸುತ್ತಿರುವ ನನ್ನ ಹೃದಯದಲ್ಲಿ ಒಂದು ತೆರನಾದ ಅಸಹನೀಯ ಶೂಲೆ ಏಳುವುದು. ✡



# ಯುಗಾದಿ

ಸ್ವಾಗತವು ಸನ್ನಿಧಿಗೆ ಋತುರಾಜ ಮಹಿಮನಿಗೆ
ಸ್ವಾಗತವು ಸೌಂದರ್ಯ ಸೌಭಾಗ್ಯ ಸಿರಿಗೆ

●

ಕೋಗಿಲೆಯ ಕಂಠದಲಿ ದನಿಯಾಗಿ ಬಂದೆ
ಚಿಗುರೆಲೆಯ ರೂಪದಲಿ ಭುವನದಲಿ ನಿಂದೆ

●

ನೀ ಬರುವ ಸಂಗತಿಯ ಕಿವಿಯಲ್ಲಿ ಉಸುರಿ
ಕುಸುಮಗಳು ಅರಳಿಹವು ಸೌಂದರ್ಯ ಸೂಸಿ

●

ನಮ್ಮನೆಯ ಬಾಗಿಲಿಗು ಬೆಳಕನ್ನು ಸುರಿದು
ಮಂಗಳದ ಹಾಡನ್ನು ಸ್ವಸ್ತಿಕವ ಬರೆದು

●

ಬೆಳ್ಳಿ ಬಟ್ಟಲು ಹಿಡಿದು ಚಿನ್ನ ತೊಟ್ಟಿಲು ತೂಗಿ
ಮನೆ ಮನೆಗು ಬಾರಯ್ಯ ಮನಮನವ ಬೆಳಗಿ

**ಈಶ್ವರ ಕಮ್ಮಾರ**

---

ಮಾರ್ಚ್ 'ಕಸ್ತೂರಿ'ಯಲ್ಲಿ ಬಂದ 'ದೇವರಲ್ಲಿ ನಾವು ನಂಬಿಕೆ ಇಡಬೇಕೆ?' ಮತ್ತು 'ಮಾನವರ ವಿಕಾಸಕ್ಕೊಂದು ದಾರಿ' ಈ ಎರಡು ಲೇಖನಗಳ ಬಗೆಗೆ ಓದುಗರಿಂದ ಅಧಿಕವೂ ತೀವ್ರವೂ ಆದ ಪ್ರತಿಕ್ರಿಯೆಗಳು ಬಂದಿದ್ದು ಅವುಗಳನ್ನು ಮೇ ಸಂಚಿಕೆಯಲ್ಲಿ ಪ್ರತ್ಯೇಕವಾಗಿಯೇ ಪ್ರಕಟಿಸುತ್ತೇವೆ.

— ಸಂ.

# ಕಲಬೆರಕೆಯನ್ನು ನೀವೂ ಪರೀಕ್ಷಿಸಿ

ಕಲಬೆರಕೆ ಒಂದು ಶಾಪ. ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಜನರು ಇದರ ತೀವ್ರ ಪರಿಣಾಮಗಳನ್ನು ಅನುಭವಿಸುತ್ತಿದ್ದಾರೆ. ನಾವು ದಿನ-ವಹಿ ಬಳಸುವ ಬಹುತೇಕ ಆಹಾರ ಪದಾರ್ಥಗಳಲ್ಲಿ ಕಲಬೆರಕೆ ಸಂಭವ ಉಂಟು. ಈ ಕಲಬೆರಕೆಯನ್ನು ನೀವೂ ಬೇಕಾದರೆ ಮನೆಯಲ್ಲಿಯೇ ಪರೀಕ್ಷಿಸಬಹುದು. ಇದಕ್ಕೆ ನಿಮಗೆ ಕೆಲವು ರಾಸಾಯನಿಕ ವಸ್ತುಗಳು, ಒಂದೆರಡು ಉಪಕರಣಗಳು ಬೇಕಾದೀತು.

೧. ನೀರು ಹಾಲನ್ನು ಗಟ್ಟಿ ಅಥವಾ ಮಂದವಾಗಿಸಲು ಗಂಜಿ ಅಥವಾ ಅಕ್ಕಿ ಹಿಟ್ಟು ಕದಡಿ ಹಾಲಿಗೆ ಸೇರಿಸುತ್ತಾರಲ್ಲ. ಆಗ ಅದನ್ನು ಹೇಗೆ ಪತ್ತೆ ಹಚ್ಚುವಿರಿ?

ಅಂತಹ ಹಾಲಿನ ನಮೂನೆಯನ್ನು ಒಂದು ಗಾಜಿನ ನಳಿಕೆಯಲ್ಲಿ ತೆಗೆದುಕೊಳ್ಳಿ. ಇಂಕ್ ಫಿಲ್ಲರಿನ ಸಹಾಯದಿಂದ ಟಿಂಕ್ಚರ್ ಆಫ್ ಅಯೋಡಿನ್ ದ್ರಾವಣವನ್ನು ತೆಗೆದು ಹನಿಹನಿಯಾಗಿ ಹಾಲಿಗೆ ಬೆರೆಸಿ, ಗಾಜಿನ ಕಡ್ಡಿಯಿಂದ, ಕಲಕಿ. ಹಾಲು ನೀಲಿ ಬಣ್ಣಕ್ಕೆ ತಿರುಗುತ್ತದೆ. ಆಗ ಅದರಲ್ಲಿ ಪಿಷ್ಟದ ಅಂಶ ಬೆರೆಸಿದೆ ಎಂದು ಹೇಳಬಹುದು.

೨. ಬೆಣ್ಣೆ ಮತ್ತು ತುಪ್ಪದಲ್ಲಿ ಕಲಬೆರಕೆಯನ್ನು ಕಂಡುಹಿಡಿಯುವ ಕ್ರಮ ಹೇಗೆ?

ಗಾಜಿನ ನಳಿಕೆಯಲ್ಲಿ ಚಮಚ ಚಮಚದಷ್ಟು ಕರಗಿಸಿದ ಬೆಣ್ಣೆ ಅಥವಾ ತುಪ್ಪ ತೆಗೆದುಕೊಳ್ಳಿ. ಅದಕ್ಕೆ ಅಷ್ಟೇ ಪ್ರಮಾಣದಲ್ಲಿ ಹೈಡ್ರೋಕ್ಲೋರಿಕ್ ಆಮ್ಲವನ್ನು ಬೆರೆಸಿ, ಅನಂತರ ಒಂದು ಚಿಟಿಕೆ ಸಕ್ಕರೆಯನ್ನು ಹಾಕಿ ಗಾಜಿನ ಕಡ್ಡಿಯಿಂದ ಚೆನ್ನಾಗಿ ಕಲಕಿ ಐದು ನಿಮಿಷಗಳ ನಂತರ ನಳಿಕೆಯನ್ನು ತೆಗೆದು ನೋಡಿದರೆ ತಳ ಭಾಗದದಲ್ಲಿ ಅಚ್ಚ ಕೆಂಪು ಬಣ್ಣ ಕಾಣಿಸುತ್ತದೆ.

೩. ಕಡಲೆ ಕಾಯಿ ಎಣ್ಣೆಯಲ್ಲಿ [illegible] ಎಣ್ಣೆ ಬೆರತಿದೆಯೋ ಇಲ್ಲವೋ ಎಂಬುದನ್ನು ಪತ್ತೆ ಹಚ್ಚುವುದು ಹೇಗೆ?

ಒಂದು ನಳಿಕೆಯಲ್ಲಿ ಒಂದು ಚಮಚದಷ್ಟು ಎಣ್ಣೆ ತೆಗೆದುಕೊಳ್ಳಿ. ಇಂಕ್‌ಫಿಲ್ಲರಿನಲ್ಲಿ ಸ್ವಲ್ಪ ನೈಟ್ರಿಕ್ ಆಮ್ಲವನ್ನು ತೆಗೆದುಕೊಂಡು [illegible]ವಾಗಿ ನಳಿಕೆಯಲ್ಲಿರುವ ಎಣ್ಣೆಗೆ ತೊಟ್ಟು ತೊಟ್ಟಾಗಿ ಬೆರೆಸಿ, ಗಾಜಿನ [illegible]

ನಂತರ ಅದನ್ನು ಸ್ಟ್ಯಾಂಡಿನಲ್ಲಿಡಿ. ಸ್ವಲ್ಪ ಹೊತ್ತಿನ ನಂತರ ನೋಡಿದರೆ ಆಮ್ಲ ಮತ್ತು ಎಣ್ಣೆ ಬೇರೆ ಬೇರೆಯಾಗಿರುವುದಲ್ಲದೆ ಆಮ್ಲದ ಬಣ್ಣವು ಕೆಂಪು ಅಥವಾ ಕಂದು ಕೆಂಪು ಬಣ್ಣಕ್ಕೆ ತಿರುಗಿರು- ವುದು. ಅದನ್ನು ನೋಡಿ ಎಣ್ಣೆಯಲ್ಲಿ ದತ್ತೂರ ಬೀಜ ಎಣ್ಣೆ ಬೆರೆತಿದೆ ಎಂದು ಖಚಿತವಾಗಿ ಹೇಳ ಬಹುದು.

೪. ಕಡಲೆಕಾಯಿ ಎಣ್ಣೆಯೊಡನೆ ಬೆರೆತ ಪ್ಯಾರ ಫಿನ್ ಎಣ್ಣೆಯನ್ನು ಹೇಗೆ ಪತ್ತೆ ಹಚ್ಚು ವುದು?

ಗಾಜಿನ ನಳಿಕೆಯಲ್ಲಿ ೨-೩ ತೊಟ್ಟು ಎಣ್ಣೆ ಗೆದುಕೊಳ್ಳಿ. ಅದಕ್ಕೆ ಎರಡು ಚಮಚ ಮದ್ಯ ಸಾರದಲ್ಲಿ ಕರಗಿಸಿದ ಪೋಟಾಷ್ ಹಾಕಿ. ಕುದಿ ಯುವ ನೀರಿನಲ್ಲಿ ೧೫ ನಿಮಿಷ ಈ ನಳಿಕೆಯನ್ನಿಡಿ. ಆನಂತರ ಅದನ್ನು ಹೊರ ತೆಗೆದು ಎರಡು ಚಮಚ ಬಿಸಿ ನೀರು ಹಾಕಿ. ನಳಿಕೆಯಲ್ಲಿರುವ ದ್ರವ ಮಬ್ಬು ಅಥವಾ ಮಂಜಾದರೆ ಪ್ಯಾರಫಿನ್ ಎಣ್ಣೆ ಬೆರೆತಿದೆ ಎಂದು ತಿಳಿಯಬಹುದು.

೫. ಕಡಲೆಕಾಯಿ ಎಣ್ಣೆಯಲ್ಲಿ ಹರಳೆಣ್ಣೆ ಬೆರೆ ತಿರುವುದನ್ನು ಹೇಗೆ ಕಂಡುಹಿಡಿಯುವುದು?

ಒಂದು ನಳಿಕೆಯಲ್ಲಿ ಅರ್ಧ ಚಮಚ ಎಣ್ಣೆ ತೆಗೆದು ಕೊಂಡು ಪೆಟ್ರೋಲ್ ಹಾಕಿ, ಎಣ್ಣೆ ಪೆಟ್ರೋಲ್ ನಲ್ಲಿ ಕರಗಿಹೋಗುವುದು ಅದನ್ನು ಮಂಜಿನ ಗಡ್ಡೆಯ ಪಾತ್ರೆಯಲ್ಲಿಡಿ. ನಳಿಕೆಯಲ್ಲಿರುವ ದ್ರಾವ ಣವು ಮಂಜು ಮಂಜಾದರೆ ಎಣ್ಣೆಯಲ್ಲಿ ಹರಳೆಣ್ಣೆ ಬೆರೆತಿದೆ ಎಂದು ಹೇಳಬಹುದು.

೬. ತಿಂಡಿ ಪದಾರ್ಥಗಳಲ್ಲಿ 'ಮೆಟಾನಿಲ್ ಎಲ್ಲೊ' ಎಂಬ ಹಳದಿ ಬಣ್ಣವನ್ನು ಬಳಸುವುದು ಕಾನೂನು ನಿಷಿದ್ಧ. ಈ ಬಣ್ಣ ಕ್ಯಾನ್ಸರ್ ಕಾರಕ. ಸಿಹಿ ತಿಂಡಿಗಳಲ್ಲಿ ಇದನ್ನು ಬಳಸಿದೆಯೋ ಇಲ್ಲವೋ ಎಂಬುದನ್ನು ಪತ್ತೆ ಹಚ್ಚುವುದು ಹೇಗೆ ?

ಯಾವ ಪದಾರ್ಥದಲ್ಲಿ ಈ 'ಮೆಟಾನಿಲ್ ಎಲ್ಲೊ' ಬಣ್ಣ ಪತ್ತೆ ಮಾಡಬೇಕೋ ಆ ಪದಾರ್ಥದ ತುಂಡನ್ನು ಪುಡಿ ಮಾಡಿ ೧-೨ ಚಮಚ ಬೆಚ್ಚ ಗಿರುವ ನೀರಿಗೆ ಬೆರೆಸಿ, ಆನಂತರ ಪುಡಿಯನ್ನು ತೆಗೆದು ನೀರನ್ನು ಮಾತ್ರ ನಳಿಕೆಗೆ ಹಾಕಿ. ಅದಕ್ಕೆ, ಇಂಕ್‌ಫಿಲರ್ ಮೂಲಕ ಹೈಡ್ರೋಕ್ಲೋರಿಕ್ ಆಮ್ಲವನ್ನು ತೆಗೆದು ಒಂದೆರಡು ತೊಟ್ಟು ಬೆರೆಸಿ, ಗಾಜಿನ ಕಡ್ಡಿಯಲ್ಲಿ ಕಲಕಿ. ನಳಿಕೆಯಲ್ಲಿ ಗುಲಾಬಿ ಕೆಂಪು ಬಣ್ಣ ಬರುವುದು. ಇದೇ ರೀತಿ ಅಡಿಗೆ ಅರಿಸಿನದಲ್ಲೂ ಮೆಟಾನಿಲ್ ಎಲೋವನ್ನು ಪತ್ತೆ ಹಚ್ಚಬಹುದು.

೭. ಕಾಫಿ ಪುಡಿಯಲ್ಲಿ ಹುಣಸೆ ಬೀಜದ ಹುಡಿ ಮತ್ತು ಖರ್ಜೂರ ಬೀಜದ ಪುಡಿಗಳ ಬೆರಕೆ ಯನ್ನು ಕಂಡುಹಿಡಿಯುವ ಕ್ರಮಗಳಾವುವು?

ಬ್ಲಾಟಿಂಗ್ ಪೇಪರ್ ತೆಗೆದುಕೊಂಡು ಅದರ ಮೇಲೆ ಕಾಫಿ ಪುಡಿಯನ್ನು ಉದುರಿಸಿ, ಇಂಕ್ ಫಿಲ ರಿನಲ್ಲಿ ಕಾಸ್ಟಿಕ್ ಸೋಡಾ ದ್ರಾವಣವನ್ನು ತೆಗೆದು ಕೊಂಡು ಕಾಫಿ ಪುಡಿಯ ಕಣಗಳ ಮೇಲೆ ಸಿಂಪ ಡಿಸಿದಾಗ ಅಲ್ಲಿ ಕಂದು ಬಣ್ಣದ ವರ್ತುಲಾಕೃತಿ ಗಳು ಮೂಡುತ್ತವೆ. ಇದೇ ಬೆರಕೆಯಾದವ್ದರ ಗುರುತು.

('ಆಹಾರ ವಿಜ್ಞಾ'ನದಿಂದ)

***************

ಬೆಟ್ಟವು ನೀರಿನಿಂದ ಹೇಗೊ ಹಾಗೇ ದೊಡ್ಡವರು (ರಾಜಾದಿಗಳು) ಕೂಡ, ಮನಸ್ಸನ್ನು ಸಂತಸಗೊಳಿಸುವ ಮೆಲುನಡಿಗೆಯ ಹೆಂಗಸರಿಂದ ಭೇದಿಸಲ್ಪಡು ತ್ತಾರೆ.

* * *

ಗುಣಿಯ ಬದುಕೇ ಬದುಕು; ಧರ್ಮಿಷ್ಠನ ಬದುಕೇ ಬದುಕು.

—ಸಂಸ್ಕೃತ ಸುಭಾಷಿತಗಳು

ಇಟಾಲಿಯನ್ ಕಥೆ

# ಮೊದಲ ಗಂಡ



ಮೂಲ : **ಪಿರಾಂಡೆಲ್ಲೊ**

ಕರ್‌ಲೀನಾ ನನ್ನ ಪೂರ್ಣ ಹೆಸರು. ಆದರೆ ಆತ ನನ್ನ ಲೀನಾ ಅಂತ ಮುದ್ದಾಗಿ ಕರೆಯುತ್ತಿದ್ದ. ಕ್ರಮೇಣ ಎಲ್ಲರೂ ನನ್ನನ್ನು ಇದೇ ಹೆಸರಿನಿಂದ ಕರೆಯತೊಡಗಿದರು. ಯಾರಾದರೂ ನನ್ನ ಕರ್‌ಲೀನಾ ಅಂತ ಕರೆದರೆ ಅದು ನನ್ನ ಹೆಸರೆಂದು ನನಗೆ ಗೊತ್ತಾಗುವುದೇ ಇಲ್ಲ. ನನ್ನನ್ನು ಆತ ಬಹಳ ಪ್ರೀತಿಸುತ್ತಿದ್ದ. ಯಾವಾಗಲೂ ಲೀನಾ ಲೀನಾ ಅಂತ ಕರೆಯುತ್ತ ನನ್ನ ಓಲೈಸುತ್ತಿದ್ದ. ಇದೋ ಈ ಫೋಟೋ ಇದೆಯಲ್ಲ ಇದು ಆತನದೇ ನೋಡಿ," ಎಂದು ಗೋಡೆಗಂಟಿ ನೇತಾಡುತ್ತಿದ್ದ ಫೋಟೋ ಒಂದನ್ನು ತೋರಿಸಿದಳು ಲೀನಾ. ಇಷ್ಟರಲ್ಲಿ ಅವಳ ಎರಡನೇ ಗಂಡನಾಗಲಿದ್ದ ಬತೋಲಿಯೋ ಆಕೆ ತೋರಿಸಿದ ಫೋಟೋ ನೋಡಿದ. ಫೋಟೋದಲ್ಲಿರುವ ಲೀನಾಳ ಮೊದಲ ಗಂಡ ಕೋಸಿಮ್ ತದ್ದೆಟೂ ನಗು ಮುಖದಿಂದ ಆತನ ಕಡೆ ನೋಡುತ್ತ ಹ್ಯಾಟನ್ನು ಸ್ವಲ್ಪೇ ಎತ್ತಿ ಅಭಿನಂದಿಸುತ್ತಿರುವ ಭಂಗಿಯಲ್ಲಿ ಇದ್ದ.

ತನಗೆ ತಿಳಿಯದಂತೆ ಬತೋಲಿಯೋ ಆ ಅಭಿನಂದನೆಯನ್ನು ಸ್ವೀಕರಿಸಿದಂತೆ ಫೋಟೋ ಎದುರು ತಲೆ ತಗ್ಗಿಸಿದ.

ಬದುಕಿದ್ದಾಗಲೇ ಅಪ್ರತಿಮ ಶಿಲ್ಪಿ ಎಂದು ಹೆಸರುಗಳಿಸಿದ್ದ ಸಿನೋರ್ ಕೋಸಿಮ್. ಆತ ಸತ್ತು ಬಹಳ ದಿನಗಳಾಗಿದ್ದರೂ ಆತನ ಹೆಂಡತಿ ಲೀನಾ ಈಗ ಎರಡನೆ ಬಾರಿ ಇನ್ನೊಬ್ಬರ ಹೆಂಡತಿಯಾಗಲಿರುವ ಸಂದರ್ಭದಲ್ಲೂ ಮೊದಲನೆ ಗಂಡನ ಫೋಟೋವನ್ನು ಗೋಡೆಯಿಂದ ತೆಗೆದುಹಾಕಬೇಕೆನ್ನುವ ಭಾವನೆ ಅವಳಿಗೆ ಬರಲೇ ಇಲ್ಲ. ಕೂತು ತಿಂದರೂ ಸವೆಯದಂಥ ಆಸ್ತಿ. ಸುಂದರವಾದ ಒಂದು ಮನೆ ಮನೆ ತುಂಬ ಬೆಲೆಬಾಳುವ ವಸ್ತುಗಳು, ಸಮಾಜದಲ್ಲಿ ಘನತೆ, ಗೌರವ ಎಲ್ಲವನ್ನೂ ಸಂಪಾದಿಸಿ ಕಾಣಿಕೆಯಾಗಿ ತನಗೆ ಬಿಟ್ಟು ಹೋಗಿರುವ ಕೋಸಿಮ್ ತದ್ದೆಟೂ ಬಗ್ಗೆ ಲೀನಾಳಿಗೆ ಅಪರಿಮಿತವಾದ ಕೃತಜ್ಞತಾ ಭಾವನೆ ಇಲ್ಲ ಎನ್ನುವಂತಿಲ್ಲ. ಆ ಭಾವನೆಯಿಂದಾಗಿಯೇ ಗೋಡೆಯಿಂದ ಆ ಫೋಟೋ ತೆಗೆದುಹಾಕಲು ಲೀನಾಳಿಗೆ ಸಾಧ್ಯವಾಗದೇ ಇರಬಹುದು.

ರಲ್ಲ ನಮ್ಮ ಮಾತುಗಳು ಬತೋಲಿಯೋನ [illegible] ಬಳಸುತ್ತಿವೆ ಎಂಬುದನ್ನು [illegible] ತನ್ನಷ್ಟಕ್ಕೆ ತಾನೇ ನಿಸ್ಸಂಕೋಚ [illegible] ಹೇಳುತ್ತಿರುವಳು ಲೀನಾ…

"[illegible] ಹೇಳುವುದಾದರೆ ಹೆಸರು ಬದಲಿಸಿ ಕೊಳ್ಳಲು ನನಗಿಷ್ಟವಿಲ್ಲ. ಆದರೆ ಆತ ಏನು ಹೇಳಿದರೂ ನಾನು ಪ್ರತಿ ನುಡಿಯುತ್ತಿರ ಲಿಲ್ಲ. ನೀವೂ ಹಾಗೆ ಕರೆಯಿರಿ. ಸರಿಯಷ್ಟೆ. ಹೀಗೆ ಹೇಳುತ್ತಿರುವೆ ಅಂತ ಏನೂ ತಿಳಿದು ಕೊಳ್ಳುವುದಿಲ್ಲ ತಾನೆ!"…

"ಅಹಂ… ಆಹಾ… ನಾನೇನನ್ನೂ ಅಂದು [illegible]…ಸ…ಸರಿ… ಹಾಗೇ ಕರೆಯು ತ್ತೇನೆ," ಅಂದ ಬತೋಲಿಯೋ ತೊದಲುತ್ತ.

ಗೋಡೆಗಂಟಿದ್ದ ಫೋಟೋದ ಮೇಲೆ ಗುಬ್ಬಿ ಕೂತಿದ್ದ ಆತನ ದೃಷ್ಟಿ ಒಂದಿಷ್ಟೂ ಕದಲಲಿಲ್ಲ. ಫೋಟೋದಲ್ಲಿ ಸ್ವರ್ಗೀಯ ಕೋಸಿಮ್ ಆತನ ಕಡೆ ಏವೆ ಇಕ್ಕದೆ ನೋಡುತ್ತ ಮುಗುಳ್ನಗುತ್ತ ಟೋಪಿ ಎತ್ತಿ ಅಭಿನಂದಿಸುತ್ತಿ ರುವನು.

ನಂತರದ ಮೂರು ತಿಂಗಳುಗಳಲ್ಲಿ ಲೀನಾ ಬತೋಲೀಯೋರ ಮದುವೆ ಸರಳವಾಗಿ ನಡೆ ಯಿತು. ಈ ನೂತನ ದಂಪತಿಗಳನ್ನು ಮಧು ಚಂದ್ರಕ್ಕೆ ಕಳಿಸಲಿಕ್ಕಾಗಿ ಬಂಧು ಮಿತ್ರರ ಜೊತೆಗೆ ಲೀನಾಳ ಗೆಳತಿಯಾದ ಅರ್ರೈನ್ನಿಯಾ [illegible] ಗಂಡ ಮೊತ್ತಾ ಕೂಡ ಬಂದಿದ್ದರು. [illegible] ಗಂಡನ ವಯಸ್ಸು ಐವತ್ತಕ್ಕಿಂತ [illegible] ಇರಲಿಲ್ಲ. ಆತನೇ ಲೀನಾ, ಬತ್ತೋಲೀನೋರ ಮಧ್ಯೆ ಮಾತುಕತೆ ನಡೆಸಿ ಅವರಿಬ್ಬರ ಮದುವೆಮಾಡಿದ್ದ. ಈ ಮದುವೆ ಬಗ್ಗೆ ಯಾರಾದರೂ ಲೊಟಪಿಟಿ ಅಂದರೆ ಮೊತ್ತಾಗೆ ಸಿಟ್ಟು ಬಾರದೇ ಇರುವುದಿಲ್ಲ. ಈ ವಿಷಯ ಗೊತ್ತಿದ್ದೂ ಅರ್ರೈನ್ನಿಯಾ ಸುಮ್ಮನಿರಲಾಗದೆ, "ಪಾಪ ಬತೋಲಿಯೋ… ಲೀನಾಳಂಥ ಹೆಂಗಸಿನ ಜೊತೆ…" ಅಂತ ಸಹಾನುಭೂತಿ ಪ್ರಕಟಿಸಿದಳು.

ಬತೋಲಿನೋ ನೀವು ತಿಳಿದುಕೊಂಡಿ ರುವಂಥ ಮೂರ್ಖ ಅಥವಾ ತಲೆ ಕಡಿಮೆ ಇರುವ ದಡ್ಡನೇನಲ್ಲ. ಕೆಮಿಸ್ಟ್ರಿಯಲ್ಲಿ ಆತನಿಗೆ ಅಪಾರ ಪರಿಜ್ಞಾನವಿದೆ. ಅಲ್ಲದೆ ಆತನೇ ಇಷ್ಟ ಪಟ್ಟು ಲೀನಾಳನ್ನು ವರಿಸಿದ್ದಾನೆ. ಆತನ ಗಿಲ್ಲದ ಚಿಂತೆ ನಿನಗೇತಕ್ಕೆ. ಏನಂದುಕೊಂಡಿದ್ದೀಯೋ ಏನೋ, ಒಬ್ಬ ಉತ್ತಮ ಗಂಡನಿಗಿರಬೇಕಾದ ಎಲ್ಲ ಒಳ್ಳೆಯ ಗುಣಗಳು ಆತನಲ್ಲಿವೆ ಅಂತ ಮೊದ ಮೊದಲು ನೀನೇ ಹೇಳುತ್ತಿದ್ದೆ. ಕೆಮಿಸ್ಟ್ರಿ ಯಲ್ಲಿ ಮಾಡಿರುವ ತನ್ನ ಪ್ರಯೋಗಗಳನ್ನು ಆತ ಈಗಾಗಲೇ ಪ್ರಕಟಿಸಿದ್ದರೆ ದೇಶ ವಿದೇಶ ಗಳಲ್ಲಿ ಹೆಸರುವಾಸಿಯಾಗುತ್ತಿದ್ದ. ಅಂಥ ಸರಳ ಸ್ವಭಾವದ ಮನುಷ್ಯ. "ಬತೋಲಿಯೋನಂಥ ಮನುಷ್ಯನನ್ನೂ ನಾನೆಲ್ಲೂ ನೋಡಿಲ್ಲ ಬಿಡು" ಅಂತ ಮೊತ್ತಾ ನಾಲ್ಕು ಮಾತು ಜಾಸ್ತಿ ಹೇಳಿದ.

ಅರ್ರೈನ್ನಿಯಾ ಹೌದೆನ್ನುವಂತೆ ತಲೆ ಅಲ್ಲಾ ಡಿಸಿದಳು. ಆದರೆ ಲೀನಾ ಹೊರಡುತ್ತಿರುವ ಎರಡನೆಯ ಮಧುಚಂದ್ರ ಕುರಿತು ಆಲೋ ಚಿಸುತ್ತ ಒಳಗೊಳಗೇ ನಕ್ಕಳು. ಲೀನಾಳ ಮೊದ ಲನೆಯ ಮಧುಚಂದ್ರ ರೋಮಿನಲ್ಲಿ ನಡೆ ದದ್ದು. ಅದೇ ರೋಮ್ ನಗರದಲ್ಲಿ ಎರಡನೆಯ ಮಧು ಚಂದ್ರ ಸಹ. ಮೊದಲನೆ ಸಾರಿ ಅವಳ ಜೊತೆ ಪಾದರಸದಂಥ ಚುರುಕಿನ ತುಂಟು ಸ್ವಭಾವದ ಕೋಸಿಮ್ ಇದ್ದ. ಈ ಸಾರಿ ಆತನ ಜಾಗದಲ್ಲಿ ಬಟ್ಟ ತಲೆಯ ಯುವ ಕನೂ ಅಮಾಯಕನೂ ಅನುಭವರಹಿತನೂ ಆದ ಬತೋಲಿಯೋ ಇರುವನು.

ರೋಮಿನಲ್ಲಿ ಇಳಿಯುತ್ತಲೇ ಯಾವ ಹೋಟೆಲ್ಲಿಗೆ ಹೋಗುವುದೆಂದು ಬತೋಲಿಯೋ ಯೋಚಿಸುತ್ತಿದ್ದಾಗಲೇ ಲೀನಾ ಕೂಲಿಯವ ನನ್ನು ಕರೆದು ಹೋಟೆಲು ವಿಕ್ಟೋರಿಯಾ ಅಂದಳು. ಸಾಮಾನುಗಳನ್ನು ಸ್ಟೇಶನ್ನಿನಿಂದ ಹೊರಗೆ ಒಯ್ದು ಅದೇ ತಾನೇ ಜಾಗದಿಂದ ಕದಲುತ್ತಿದ್ದ ಹೋಟೆಲ್ ವಿಕ್ಟೋರಿಯಾದ ವಾಹನದಲ್ಲಿಟ್ಟು ಕೂಲಿಯವ ಮರಳಿದ. ಬಸ್ ಡ್ರೈವರನನ್ನು ಗುರುತಿಸಿದಳವಂತೆ ನಕ್ಕಳು ಲೀನಾ.

ಹೋಟೆಲಲ್ಲಿ ಕಾಲಿರಿಸುತ್ತಿದ್ದಂತೆಯೇ ಗಂಡ ನಿಗೆ ಹೇಳಿದಳು ಲೀನಾ, "ಹೇಗಿದೆ ಹೋಟಲ್ಲು? ಚೆನ್ನಾಗಿದೆ ಅಲ್ವೆ: ಚಿಕ್ಕದಾಗಿದ್ದರೂ ಬಹಳ ಚೊಕ್ಕವಾಗಿದೆ. ಅದೂ ಅಲ್ಲದೆ ಪಟ್ಟಣದ ನಡುವೆ ಇದೆ. ಖರ್ಚು ಕೂಡ ತುಂಬ [illegible]

ಆರು ವರುಷಗಳ ಹಿಂದೆ ಆತನ ಜೊತೆಗೆ ಮಧುಚಂದ್ರಕ್ಕೆ ಇಲ್ಲಿಗೇ ನಾನು ಬಂದಿದ್ದೆ. ಅದೇಕೆ, ನಿಮಗೂ ಈ ಹೋಟಲ್ಲಿನ ವಾತಾವರಣ ಇಷ್ಟವಾಗಬಹುದು...ನೋಡಿ..."

ಹಳೆಯ ಸಿಹಿಸೆನಪುಗಳು ಇನ್ನೂ ಜೀವಂತವಾಗಿವೆ ಅವಳ ಹೃದಯದಲ್ಲಿ. ಆ ಘಟನೆಯ ಪುನರಾವರ್ತನೆಯಾಗುತ್ತಿರುವಂತೆ ಭಾಸವಾಗುತ್ತಿದೆ. ಹೋಟಲಿನ ಯಾವೊಬ್ಬ ನೌಕರನೂ ಲೀನಾಳನ್ನು ಗುರುತಿಸಲಿಲ್ಲ. ಆದರೆ ಅವಳು ಮಾತ್ರ ಅಲ್ಲಿನ ಪ್ರತಿಯೊಬ್ಬನನ್ನೂ ಗುರುತಿಸಿದಳು. ಪಿಪ್ಪೋ ಎಂಬ ಹೆಸರಿನ ಮುದುಕ ಲೀನಾ ಮತ್ತು ಬತೋಲಿಯೋರನ್ನು ಹನ್ನೆರಡು ನಂಬರಿನ ಕೋಣೆಗೆ ಕರೆದುಕೊಂಡೊಯ್ದ. ವಿಶಾಲವಾದ, ಸುಂದರವಾದ ಕೋಣೆ ಅದಾಗಿತ್ತು. ಆದರೂ ಲೀನಾಳಿಗೆ ಆ ಕೋಣೆ ಸರಿಬರಲಿಲ್ಲ.

"ಪಿಪ್ಪೋ, ಹತ್ತೊಂಬತ್ತನೇ ನಂಬರಿನ ಕೋಣೆ ಖಾಲಿ ಇದೆಯಾ?" ಎಂದು ಕೇಳಿದಳು. ಮೆನೇಜರ್ ಬಳಿ ತಿಳಿದುಕೊಂಡು ಬರುವೆನೆಂದು ಪಿಪ್ಪೋ ಅಲ್ಲಿಂದ ಕದಲಿದ.

"ಎಂಥ ವಿಚಿತ್ರ! ಆರು ವರ್ಷಗಳ ಹಿಂದೆ ಇದೇ ತರಹ ನಡೆಯಿತು. ಆಗ ಹೋಟಲಿನ ಹರು ನಮಗಾಗಿ ಎರಡನೇ ಮಹಡಿಯ ಒಂದು ಕೋಣೆಯನ್ನು ಕೊಟ್ಟಿದ್ದರು. ಅದು ಅವರಿಗೆ ಸರಿ ಬಾರದೇ ಹೋದ್ದರಿಂದ ೧೯ನೇ ನಂಬರಿನ ಕೋಣೆಯನ್ನು ತೆಗೆದುಕೊಂಡಿದ್ದರು. ಆ ಕೋಣೆ ಎಷ್ಟು ಚೆನ್ನಾಗಿದೆ ಗೊತ್ತಾ? ನಿಶ್ಶಬ್ದವಾಗಿಯೂ ಪ್ರಶಾಂತವಾಗಿಯೂ ಇರುವುದರ ಜೊತೆಗೆ ಒಳ್ಳೇ ಗಾಳಿ ಬೆಳಕು ಕೂಡ ಬರುತ್ತದೆ ಆ ಕೋಣೆಗೆ" ತನ್ನ ಗಂಡಗೆ ಹೇಳಿದಳು ಲೀನಾ.

ಅಷ್ಟರಲ್ಲಿ ಪಿಪ್ಪೋ ಬಂದು ಆ ಕೋಣೆ ಖಾಲಿ ಇರುವುದಾಗಿ ತಿಳಿಸಿದ್ದೊಂದೆ ತಡ, ಕುಣಿದಾಡಿ ಬಿಡುವಷ್ಟು ಸಂತೋಷವಾಯಿತು ಲೀನಾಳಿಗೆ.

'ಅದೃಷ್ಟವಶಾತ್ ನಮಗೆ ಮತ್ತೆ ಅದೇ ಕೋಣೆ ಸಿಕ್ಕಿದೆ. ಸುಂದರವಾಗಿ ಹೊಂದಿಸಿಟ್ಟಿರುವ ವಸ್ತುಗಳು, ಹೂ ಪಾತ್ರೆಗಳು... ಓಹ್..."

ಅವಳ ಆನಂದದಲ್ಲಿ ಒಂದಿಷ್ಟು ಕೂಡ ಭಾಗಿಯಾಗದೇ ಹೋಗುತ್ತಿದ್ದಾನೆ ಆತ ಎಂದು ಕೊಳ್ಳುವ ಅವಶ್ಯಕತೆಯೇ ಇಲ್ಲ.

"ಹೇಗಿದೆ ಕೋಣೆ ಚೆನ್ನಾಗಿದೆ ಅಲ್ಲವೆ?" ಕೇಳಿದಳು ಲೀನಾ.

"ಪರವಾಗಿಲ್ಲ, ನಿನಗೆ ಇಷ್ಟವಾಗಿದ್ದರೆ ಅಷ್ಟೇ ಸಾಕು."

ಬಟ್ಟೆ ಬದಲಾಯಿಸಲಿಕ್ಕೆಂದು ಲೀನಾ ತೆರೆಮರೆಗೆ ಸರಿದ ಮೇಲೆ ಆತ ಒಂದು ಮಂಚದ ಕಡೆ ನೋಡಿದ. ಆರು ವರ್ಷಗಳ ಹಿಂದೆ ಲೀನಾ ಅದೇ ಮಂಚದ ಮೇಲೆ ತನ್ನ ಮೊದಲ ಗಂಡನ ಜೊತೆ ಮಲಗಿಕೊಂಡಿದ್ದಿರಬಹುದು. ಆ ನೆನಪಿನೊಂದಿಗೇ ಕೊಸಿಮ್ [illegible] ಎತ್ತಿ ಅಭಿನಂದಿಸುವ ಭಂಗಿ ಇರುವ ಫೋಟೋ ಕಣ್ಣೆದುರು ಮತ್ತೆ ಮೂಡಿತು.

ಬತೋಲಿಯೋ ಮೊದಲೇ ಮಿತ ಭಾಷಿ. ಬಾಯಿಯಿಲ್ಲದವ. ಮಾತು ಮಾತಿಗೆ ಆತನ ಹೆಂಡತಿ ಕೋಸಿಮ್‌ನ ನಡೆ ನುಡಿಗಳನ್ನು ಅನುಕರಿಸಲು ಒತ್ತಾಯಿಸುತ್ತಿರುವುದು ಆತನಿಗೆ ಕಿರಿಕಿರಿ ಅನಿಸಿದರೂ ಆತ ಹೆಂಡತಿ ಎದುರು ತುಟಿ ಬಿಚ್ಚಲಿಲ್ಲ. ತನ್ನ ರೀತಿನೀತಿಗಳಿಂದ ತನ್ನ ಹಾಲೀ ಗಂಡನ ಮನಸ್ಸಿನ ಮೇಲಾ-ಗುತ್ತಿರುವ ನೋಟವನ್ನು ಅರ್ಥಮಾಡಿಕೊಳ್ಳಲಿಲ್ಲ ಲೀನಾ.

ಮೊದಲ ಗಂಡನೊಂದಿಗಿನ ಮಧುರ ನೆನಪುಗಳ ಚಕ್ರಬಂಧದಲ್ಲಿ ಅವಳು ಅಷ್ಟರ ಮಟ್ಟಿಗೆ ಸಿಕ್ಕಿಕೊಂಡಿರುವುದಕ್ಕೆ ಕಾರಣಗಳು ಇಲ್ಲದಿಲ್ಲ. ಆತನನ್ನು ಮದುವೆಯಾದಾಗ ಲೀನಾಳ ವಯಸ್ಸು ಕೇವಲ ಹದಿನೆಂಟು. ತನಗೆ ಗೊತ್ತಿದ್ದೋ ಗೊತ್ತಿಲ್ಲದೆಯೋ ಗಂಡನ ಜೊತೆಗಿದ್ದ ಕಾಲದ [illegible] ಗಿನ ಭಾವನೆಗಳು ಸ್ವಯಂಚಾಲಿತವಾಗಿ ಅವಳಲ್ಲಿ ಆತನೇ ಅವಳ ಬದುಕಿನ ಎಲ್ಲ [illegible] ಗಳನ್ನು ಸುಂದರಗೊಳಿಸಿದ್ದ, ಮತ್ತು ಕೊರತೆಗಳನ್ನು ನಿವಾರಿಸಿದ್ದ. ತಾನೊಬ್ಬ ಉಪಾಧ್ಯಾಯನಂತೆ; ಸ್ನೇಹಿತನಂತೆ ಅವಳಿಗೆ ಗೊತ್ತಿರದಿದ್ದ ಎಷ್ಟೊ ಪಾಠಗಳನ್ನು ಕಲಿಸಿದ್ದ. ಎಷ್ಟೋ ವಿಧದಿಂದ ದಾಂಪತ್ಯ ಸುಖವನ್ನು ಪರಿಚಯಿಸಿದ್ದ. ಸಾವು ಬದುಕಿನ ಮಧ್ಯೆ ಹೋರಾಡುತ್ತಿದ್ದ

ಆತ ಎರಡನೇ ಮದುವೆಯಾಗಲೇಬೇಕು ಅಂತ ಲೀನಾಳಿಂದ ಮಾತು ತೆಗೆದುಕೊಂಡಿದ್ದ. ಒಲ್ಲದ ಮನಸ್ಸಿನಿಂದ ಬತೋಲಿಯೊ ಜೊತೆ ಮದುವೆಗೆ ಒಪ್ಪಿಕೊಂಡಿದ್ದಳು ಲೀನಾ.

ತನ್ನ ಜೊತೆ ಮದುವೆಯಾದ ನಂತರವೂ ತನ್ನ ಮೊದಲ ಗಂಡನ ನೆನಪುಗಳನ್ನು ನಿಸ್ಸಂಕೋಚವಾಗಿ ಹೇಳುತ್ತಿರುವಳಲ್ಲಾ ಅಂತ ಒಂದಿಷ್ಟೂ ಬೇಸರವಿಲ್ಲ ಬತೋಲಿಯೋನಿಗೆ. ಗತಿಸಿದ ಕೋಸಿಮನ ನೆನಪುಗಳಿಂದ - ಬಿಡುಗಡೆ ಹೊಂದಿ ತನ್ನ ಕಡೆ ಲೀನಾ ಸ್ವಲ್ಪಾದರೂ ಯೋಚಿಸುವಂತಾದರೆ ಸಾಕು ಎಂದಷ್ಟೇ ಅಂದುಕೊಂಡ ಬತೋಲಿಯೋ. ತನ್ನ ಜೊತೆಗಿದ್ದೂ ಹೆಂಡತಿ ಮತ್ತೊಬ್ಬನನ್ನು ಪದೆ ಪದೇ ವರ್ಣಿಸುತ್ತಿರುವುದು ಗಂಡನಾದವನಿಗೆ ನರಕಯಾತನೆಯಲ್ಲದೆ ಮತ್ತೇನು.

ಹನಿಮೂನ್ ಮುಗಿಸಿಕೊಂಡು ಸ್ವಸ್ಥಳಕ್ಕೆ ಸೇರುತ್ತಿದ್ದಂತೆಯೇ ಆರೈನ್ಸಿಯಾಳ ವೃದ್ಧ ಗಂಡ ಮೊಕ್ತಾ ತೀರಿಕೊಂಡ ದುರ್ವಾರ್ತೆ ಕೇಳಿ ಲೀನಾ ಬಹುವಾಗಿ ದುಃಖಿಸಿದಳು. ಪತಿ ವಿಯೋಗದಿಂದ ದುಃಖಿತಳಾದ ತನ್ನ ಗೆಳತಿಯನ್ನು ಸಂತೈಸಲು ಪರಿ ಪರಿಯಾಗಿ ಪ್ರಯತ್ನಿಸಿದಳು ಲೀನಾ.

ಗಂಡ ಸತ್ತು ಹತ್ತು ದಿನಗಳಾದರೂ ಆರೈನ್ಸಿಯಾ ಚೇತರಿಸಿ ಕೊಳ್ಳದಿರುವುದನ್ನು ಕಂಡು, "ಹೆಣ್ಣಿಗೇನಾಗಿದೆ. ಯಾಕೆ ಹೀಗೆ ಬೆಟ್ಟ ತಲೆ ಮೇಲೆ ಬಿದ್ದಂತೆ ದುಃಖಿಸುತ್ತಿರುವೆ?" ಎಂದು ಸಂತೈಸಿದ ಬತೋಲಿಯೋ.

ಗಂಡನ ಅಜ್ಞಾನಕ್ಕೆ ಲೀನಾ ಮುಖ ಕಿವುಚಿಕೊಂಡಳು.

"ಬೆಟ್ಟದಂಥ ಗಂಡನನ್ನು ಕಳೆದುಕೊಂಡ ಯಾವ ಹೆಣ್ಣಿಗೆ ತಾನೆ ದುಃಖವಾಗದಿರುತ್ತದೆ?" ಎಂದು ಸ್ವಲ್ಪ ಸಿಟ್ಟಿನಿಂದಲೇ ಹೇಳಿದಳು.

ಬತೋಲಿಯೋ ನಕ್ಕು, "ತಂದೆ ವಯಸ್ಸಿನಾತ ಮೊಕ್ತಾ, ಹೋಗದೆ ಇರಲಿಕ್ಕೆ ಸಾಧ್ಯವೆ? ಅಷ್ಟು ಮಾತ್ರಕ್ಕೆ..." ಅಂದ ನಿಧಾನವಾಗಿ.

"ಆದ ಮಾತ್ರಕ್ಕೆ..." ಸಿಡುಕಿದಳು ಲೀನಾ.

"ಅದೆಲ್ಲ ಅಭಿನಯವೆಂದು ನನಗೆ ಗೊತ್ತು:" ಅವಳ ಮಾತನ್ನು ತಳ್ಳಿ ಹಾಕುತ್ತ ಹೇಳಿದ ಬತೋಲಿಯೋ. ಅದರಿಂದಾಗಿ ಲೀನಾಳ ಮುಖದಲ್ಲಿ ಸಿಟ್ಟು ಚಿಲ್ಲೆಂದಿತು.

"ಅಭಿನಯ! ಗಂಡನನ್ನು ಕಳೆದುಕೊಂಡ ಹೆಣ್ಣಿನ ಹೃದಯ ಹೇಗಿರುತ್ತದೆಂಬುದು ಗಂಡಸಾದ ನಿನಗೇನು ಗೊತ್ತು?" ಕೊಸಿವ್ ಸತ್ತಾಗ ನಾನು ಬಹಳ ದಿನ , ಅತ್ತೆ. ನನ್ನದು ಕೂಡ ಅಭಿನಯ ಅಂತೀರಾ ?".

"ಆರೈನ್ಸಿಯಾಳ ಗಂಡನಂತೆ ಮುದುಕನೇ-ನಲ್ಲವಲ್ಲ... ಅದಕ್ಕೆಂದೇ ಅತ್ತಿದ್ದಿ ಬಿಡು" ಅಂದ ವ್ಯಂಗ್ಯವಾಗಿ.

ಬತೆಲಿಯೋಗೆ ಲೀನಾಳಿಗಿಂತ ಅವಳ ಮೊದಲ ಗಂಡನ ಮೇಲೆಯೇ ವಿಪರೀತ ಅಸಹನೆ ಇದೆ. ಯಾವ ಮಹತ್ವದಿಂದಾಗಿ ಆಕೆ ಕೋಸಿ-ವ್‌ನನ್ನು ಹಾಡಿಹರಸುತ್ತಿರುವಳೋ ಎಂಬುದು ಆತನಿಗರ್ಥವಾಗಲಿಲ್ಲ. ದಿನ ದಿನಕ್ಕೆ ಆತನಲ್ಲಿ ತಾಳ್ಮೆ ನಶಿಸುತ್ತಿರುವುದು.

ಡ್ರಾಯಿಂಗ್ ರೂಮಿನಲ್ಲಿ ಕೋಸಿವ್ ಗಹಗಹಿಸಿ ನಕ್ಕಂತೆ 'ಒಂದಾನೊಂದು ದಿನದ ನನ್ನ ಕೋಣೆಯನ್ನು ನೀನು ನಿನ್ನ ಕಮಿಸ್ಟ್ರಿ ಪ್ರಯೋಗಗಳಿಗಾಗಿ ಉಪಯೋಗಿಸುತ್ತಿರುವೆಯಾ ಬಹಳ ಚೆನ್ನಾಗಿದೆ ಅಂದಂತೆ' ಭ್ರಮೆಯಾಗು-ತ್ತಿದೆ ಆತನಿಗೆ. ಅದು ಬಿಟ್ಟು ಮಲಗುವ ಕೋಣೆಗೆ ಹೋದರೆ ಅಲ್ಲೂ ಅವನ ಕಾಟ; 'ನನ್ನ ಹೆಂಡತಿ ನಿನಗೆ ಇಷ್ಟವಾದಳೇನು. ನಾನವಳಿಗೆ ಹೇಳಿ ಕೊಟ್ಟ ಶೃಂಗಾರ ಶಿಕ್ಷಣ ಹೇಗಿದೆ... ಆಂ!' ಅಂತ ಕೇಳದಂತೆ ಭಾಸವಾಗುತ್ತದೆ.

ಇದೆಲ್ಲವನ್ನೂ ಸಹಿಸಿಕೊಳ್ಳುವದು ಆತನಿಗೆ ಸಾಧ್ಯವಾಗಲಿಲ್ಲ. ಹೀಗೆ ಇದ್ದರೆ ಕೆಲವು ದಿನಗಳಲ್ಲಿ ತಾನು ಹುಚ್ಚನಾಗಿ ಬಿಡಬಹುದೆಂಬ ಭಯ. ಅದರಿಂದಾಗಿ ಆತನ ಯೋಚನೆಯ ದಿಕ್ಕೇ ಬದಲಾಯಿತು. ಒಂದು ದಿನ ಇದ್ದಕ್ಕಿದ್ದಂತೆ ಲೀನಾ, "ಈ ನಡುವೆ ನಿಮ್ಮಲ್ಲಿ ಒಂದು ರೀತಿಯ ಬದಲಾವಣೆ ಕಂಡು ಬರುತ್ತಿದೆ... ನೀವು ಸಹ ಥೇಟ್ ಆತನಂತೆಯೇ ವರ್ತಿಸುತ್ತಿರುವಿರಿ. ಕೆಲಸಗಳ ಒತ್ತಡದಿಂದ ಆತ ಎಲ್ಲಿ ಇಟ್ಟ ವಸ್ತುಗಳನ್ನು ಅಲ್ಲೇ ಮರೆತು ಬಿಡುತ್ತಿದ್ದರು. ಅವುಗಳನ್ನು ಹುಡುಕಿ ತೆಗೆ

ಯುವ ಹೊತ್ತಿಗೆ ಸಾಕು ಸಾಕಾಗಿ ಹೋಗುತ್ತಿತ್ತು. ಎಂದೂ ನನ್ನೊಡನೆ ಒತ್ತಿ ತುಟಿ ಬಿಚ್ಚಲಿಲ್ಲ ಅತ. ಎಂಥಾ ಒಳ್ಳೆಯ ವ್ಯಕ್ತಿ..." ಅಂತ ಅಕಸ್ಮಿಕವಾಗಿ ಹೇಳಿದಳು.

ಬತೋಲಿಯೋನ ಮನಸ್ಸು ಚಿಕ್ಕದಾಯಿತು. ಮನಃಕ್ಲೇಶದಿಂದ ಆತನಿಂದ ಘಟಿಸುತ್ತಿದ್ದ ಚಿಕ್ಕ ಪುಟ್ಟ ತಪ್ಪುಗಳು ಆಕೆಗೆ ತನ್ನ ಮೊದಲ ಗಂಡನನ್ನು ಜ್ಞಾಪಕಕ್ಕೆ ತರುತ್ತಿದ್ದವು ಎಂದು ಅರ್ಥ. ಯಾವ ವ್ಯಕ್ತಿಯ ರೂಪ ಅವಳ ಮನಸ್ಸಿನಿಂದ ಕದಲಿ ಹೊರ ಹೋಗಬೇಕೆಂದು ಆತ ಆಶಿಸಿದ್ದನೋ ಅದು ಸಾಧ್ಯವಾಗದ ಮಾತು. ಆದ್ದರಿಂದ ತಾನೇ ದೂರ ಸರಿದರಾಯಿತೆಂದು ನಿಶ್ಚಯಿಸಿಕೊಂಡ. ನಿಜ ಹೇಳಬೇಕೆಂದರೆ ಆತನಿಗೇನೂ ಲೀನಾಳ ಮೇಲೆ ದ್ವೇಷ ಇಲ್ಲ. ಇದ್ದರೆ ಅವಳ ಮೊದಲ ಗಂಡನ ಮೇಲೆ ಮಾತ್ರ. ಅದೇ ಆತನ ನಿಶ್ಚಯಕ್ಕೆ ಕಾರಣವಾದ ಶಕ್ತಿ.

ಅರ್ಲೈನ್ಸಿಯಾ ಕಾಲೇಜು ದಿನಗಳಲ್ಲಿ ಆತನಿಗಾಗಿ ತಹತಹಿಸಿ ವಿಫಲಳಾಗಿದ್ದಳು. ಗಂಡನನ್ನು ಕಳೆದುಕೊಂಡಿದ್ದರೂ ಆಕೆ ಸುಂದರಿ. ಈ ಅವಕಾಶವನ್ನು ಉಪಯೋಗಿಸಿಕೊಳ್ಳಲು ನಿಶ್ಚಯಿಸಿದ ಬತೋಲಿಯೋ.

"ತಾನು ಅವಳ ಜೊತೆ ಸಂಬಂಧ ಹೊಂದುವುದನ್ನು ನೋಡಿ ಲೀನಾ ಈರ್ಷ್ಯೆ ಅಸೂಯೆಗಳ ಬೆಂಕಿಯಲ್ಲಿ ಸುಟ್ಟು ಹೋಗಲಿ. ಇಷ್ಟು ದಿನ ತನಗೆ ಕೊಟ್ಟ ಮಾನಸಿಕ ಹಿಂಸೆ ಬಗ್ಗೆ ಪಶ್ಚಾತ್ತಾಪ ಪಡಲಿ ಅಂದು ಕೊಂಡ ತಕ್ಷಣ ಬತೋಲಿಯೋ ತಾನಂದುಕೊಂಡಿದ್ದನ್ನು ಕಾರ್ಯಗತಗೊಳಿಸಲು ಮುಂದಾದ. ಯಾವುದನ್ನೂ ಆಕ್ಷೇಪಿಸದೆಯೇ ಆತನ ಜೊತೆ ರಹಸ್ಯವಾಗಿ ಬೆರೆಯಲು ಆರ್ಲೈನ್ಸಿಯಾ ಒಪ್ಪಿದಳು ಕೂಡ. ಅವರಿಬ್ಬರೂ ದಿನಕ್ಕೊಮ್ಮೆಯಾದರೂ ಸಂಧಿಸ ತೊಡಗಿದರು. ಬತೋಲಿಯೋ ದಿನದ ಪಕ್ಷಿನ ವೇಳೆಯನ್ನು ಆರ್ಲೈನ್ಸಿಯಾ ಮನೆಯಲ್ಲಿ ಕಳೆಯ ತೊಡಗಿದ. ಕ್ರಮೇಣ ಹೆಂಡತಿ ಲೀನಾಳಿಗೆ ತನ್ನ ಮೇಲೆ ಅನುಮಾನ ಹುಟ್ಟಿದ್ದನ್ನು ನೋಡಿ ಆನಂದಿಸಿದ.

ಒಂದು ದಿನ ಅರ್ಲೈನ್ಸಿಯಾ ಮನೆಯಲ್ಲಿ ಮಲಗುವ ಕೋಣೆಯಲ್ಲಿ ಕುಳಿತು ಆಲೋಚಿಸುತ್ತಿದ್ದ ಬತೋಲಿಯೋನ ದೃಷ್ಟಿ ತನಗರಿವಿಲ್ಲದಂತೆ ಮಂಚದ ಪಕ್ಕ ಮೆರೆಯುತ್ತಿದ್ದ ವಸ್ತುವಿನ ಕಡೆ ಹೋಯಿತು. ತಕ್ಷಣ ಅದನ್ನು ಕೈಗೆತ್ತಿಕೊಂಡ. ಅದು ಹಗಲಿರುಳು ಅರ್ಲೈನ್ಸಿಯಾಳ ಕೊರಳಲ್ಲಿ ಮಿನುಗುತ್ತಿದ್ದ ಲಾಕೆಟ್ ಅದನ್ನು ಬೆರಳುಗಳಲಿ ತಿರುಗಿಸುತ್ತ ಬಾತ್‌ರೂಮಿನಲಿದ್ದ ಅವಳಿಗಾಗಿ ಎದುರು ನೋಡುತ್ತ ಕುಳಿತ. ಆತ ಉದ್ದೇಶಪೂರ್ವಕವಾಗಿ ತೆರೆಯದಿದ್ದರೂ ಲಾಕೆಟ್ ಬಾಯಿತೆರೆಯಿತು. ಅದರಲ್ಲಿ ದುಂಡಗೆ ಕಟ್ ಮಾಡಿ ಇಟ್ಟಿದ್ದ ಫೋಟೋ ಕಣ್ಣಿಗೆ ಬೀಳುತ್ತಲೇ ಶಾಕ್ ತಗಲಿದಂತೆ ದಿಗ್ಭ್ರಾಂತನಾದ ಬತೋಲಿಯೋ.

ಮುಗುಳ್ನಗುತ್ತ ಟೋಪಿ ಎತ್ತಿ ಅಭಿನಂದಿಸುವ ಆತ ಹಿಂದೊಮ್ಮೆ ಅರ್ಲೈನ್ಸಿಯಾಳ ಬಾಯ್ ಫ್ರೆಂಡು ಮತ್ತು ಲೀನಾಳ ಮೊದಲ ಗಂಡ ಕೋಸಿಮ್ ತದ್ದೆಟೂನ ಫೋಟೋ ಅದಾಗಿತ್ತು. ✲



**ಆದಿವಾಸಿ ಯುವಕನೊಬ್ಬನ ಎಡಗೈ ಹೆಬ್ಬೆಟ್ಟು ಪೆಟ್ಟಿನಿಂದ ಜಜ್ಜಿ ಹೋಯಿತು. ಡಾಕ್ಟರರ ಬಳಿ ಹೋದಾಗ ಡಾಕ್ಟರರು ಅದನ್ನು ಕತ್ತರಿಸಿ ಹಾಕುವದನ್ನುಳಿದು ಬೇರೆ ಉಪಾಯವಿಲ್ಲ ಎಂದರು. ಆಗ ಆ ಯುವಕ ಗಾಬರಿಯಾಗಿ, "ಹಾಗಾದ್ರೆ ಬುದ್ಧಿ, ಇನ್ನ ಮೇಲೆ ನಾನು ಬರಿ ಒಂಬತ್ತರ ವರೆಗೆ ಮಾತ್ರ ಎಣಿಸಬೇಕಲ್ವ? ಅಯ್ಯೋ ಕಷ್ಟವೆ" ಎಂದು ಅತ್ತುಬಿಟ್ಟ.**

# ಪಕ್ಷಪಾತಿ ಪ್ರಕೃತಿ

ಡಾ. ವಿ. ಶ್ರೀಧರ್

ಶ್ರೀಮಂತಾಭಿವೃದ್ಧಿಯ ಕಡೆ ಹೆಣಗುತ್ತಿರುವ ಪ್ರಾಚೀನ ಬಹುತೇಕ ದೇಶಗಳಲ್ಲಿ ತಾಂತ್ರಿಕ ವಿಜ್ಞಾನವನ್ನೇ ವಿಜ್ಞಾನವೆಂದು ಸರ್ಕಾರಗಳೂ ಭ್ರಮಿಸುವುದನ್ನು ಕ್ಷಮಿಸಬಹುದಾದರೂ, ಜಗತ್ತಿನ ಅತ್ಯುನ್ನತ ಪ್ರಶಸ್ತಿ ನೀಡುವ ಹೊಣೆ ಹೊತ್ತಿರುವ ನೊಬೆಲ್ ಪಾರಿತೋಷಕ ಸಮಿತಿಯೂ 'ಈ ಸಂಶೋಧನೆಯಿಂದ ಏನುಪಯೋಗ?' ಎಂಬ ವರ್ತಕ ಬುದ್ಧಿಯನ್ನು ಪದೇ ಪದೇ ಪ್ರದರ್ಶಿಸಿರುವುದು ಅನೇಕರಿಗೆ ಅಸಂತುಷ್ಟಿಯುಂಟುಮಾಡಿದೆ. ವಿಜ್ಞಾನ ರಂಗದಲ್ಲಿ ಕ್ರಾಂತಿಕಾರಿಯಾಗಿ ವಿಶ್ವಜ್ಞಾನದ ರೂಪವನ್ನೇ ಬದಲಾಯಿಸಿದ ಸಾಪೇಕ್ಷತಾ ಸಿದ್ಧಾಂತಕ್ಕೆ ಮನ್ನಣೆ ನೀಡಲು ಕೊನೆಗೂ ನಿರಾಕರಿಸಿದ ನೊಬೆಲ್ ಸಮಿತಿ ಇತ್ತೀಚೆಗೆ ಎಚ್ಚೆತ್ತುಕೊಂಡು ಸ್ವಾಭಾವಿಕ ಏಕೀಕರಣದ ಪ್ರಯತ್ನಕ್ಕೆ ಪ್ರಶಸ್ತಿ ನೀಡಿರುವುದು ಸಂತೋಷದ ಸಂಗತಿ. ಆಕಾಶ (Space) ಮತ್ತು ಕಾಲಗಳ (Time) ಏಕತೆಯನ್ನೇ ಕೆದಕಿದ ಮಹತ್ವದ ಸಂಶೋಧನೆಗೆ (ಹದಿನಾರು ವರ್ಷ ತಡವಾಗಿಯಾದರೂ) ಇತ್ತೀಚಿನ ಭೌತವಿಜ್ಞಾನದ ನೊಬೆಲ್ ಬಹುಮಾನ ದೊರಕಿರುವುದು ಸ್ವಾಗತಾರ್ಹ. ಈ ಸಂಶೋಧನೆಯ ವಿಷಯ ಗಹನವಾದರೂ, ಅರ್ಥವರಿಯಲು ಧೈರ್ಯವಿರುವ ಸಾವಿರಾರು ಸಾಮಾನ್ಯರಿಗೆ ಸ್ವಲ್ಪವಾದರೂ ಸ್ವಾದವುಣಿಸುವ ಸ್ಫೂರ್ತಿಯಿಂದಲೇ ಈ ಲೇಖನ (ನವೆಂಬರ್ ೮೦ರ ಕಸ್ತೂರಿಯಲ್ಲಿನ 'ಬಹುಶಕ್ತಿ ವಿಜ್ಞಾನ'ವನ್ನು ಮೊದಲು ಓದಿಕೊಂಡರೆ ಈ ಕೆಳಗಿನ ಅಂಶಗಳು ಮತ್ತಷ್ಟು ಸ್ಪಷ್ಟವಾಗುತ್ತವೆ.)

ಪರಮಾಣುವಿಗಿಂತಲೂ ಸೂಕ್ಷ್ಮವಾದ ಪ್ರಾಥಮಿಕ ಕಣಗಳು (Elementary Particles) ಮತ್ತು ಅವುಗಳನ್ನಾಳುವ ನಿಯಮಗಳೇ ಭೌತಿಕ ವಿಶ್ವದ ತಳಹದಿ. ಗುರುತ್ವ (Gravitation), ದುರ್ಬಲ (Weak), ವಿದ್ಯುದಾಯಸ್ಕಾಂತೀಯ (Electromagnetic) ಮತ್ತು ಪ್ರಬಲ (Strong) ಎಂಬ ನಾಲ್ಕು ನಿರ್ದಿಷ್ಟವಾದ ಶಕ್ತಿಗಳು ಪ್ರಾಥಮಿಕ ಕಣಗಳ ಮಧ್ಯೆ ಕಂಡು ಬರುತ್ತವೆ. ಈ ಕಣಗಳಿಗೆ ಅನೇಕ ಗುಣಗಳಿವೆಯಾದರೂ ಕೆಲವು ಶಕ್ತಿಗಳು ಕೆಲವು ಗುಣಗಳನ್ನು ಕಡೆಗಣಿಸುತ್ತವೆಯೆಂಬುದು ಸ್ಪಷ್ಟವಾಗಿದೆ.

ಜೊತೆಗೆ, ಅವಕಾಶ ಮತ್ತು ಕಾಲಗಳ ಗುಣಗಳಲ್ಲಿ ಕೆಲವನ್ನು ಎಲ್ಲಾ ಭೌತಿಕ ನಿಯಮಗಳೂ ನಿರಾಕರಿಸಿ ನಡೆಯುತ್ತವೆಯೆಂದೂ ತಿಳಿದಿದೆ. ಉದಾಹರಣೆಗೆ, ಒಂದು ನಿರ್ದಿಷ್ಟ ಅಂತರದಲ್ಲಿರಿಸಿದ ಎರಡು ಅಯಸ್ಕಾಂತಗಳ ಮಧ್ಯದ ಶಕ್ತಿ ಬೆಂಗಳೂರಲ್ಲಿ ಎಷ್ಟಿರುತ್ತದೆಯೋ, ಹುಬ್ಬಳ್ಳಿಗೆ ತೆಗೆದುಕೊಂಡು ಹೋದಾಗಲೂ ಅಷ್ಟೇ ಇರುತ್ತದೆ. ಅಂದರೆ, ಅಯಸ್ಕಾಂತ ಶಕ್ತಿ, 'ಅವಕಾಶ'(ದೇಶ)ದ ಒಂದು ಗುಣವಾದ 'ಸ್ಥಳ'ವನ್ನು ಕಡೆಗಣಿಸುತ್ತದೆ. ಇದನ್ನೇ ಅಯಸ್ಕಾಂತ ಶಕ್ತಿಯ ನಿಯಮಗಳು ಸ್ಥಳ ಪಲ್ಲಟನ ಸ್ಥಿರತೆ (Translational Invariance) ಹೊಂದಿವೆ, ಎಂಬ ಮೂಲಭೂತ ಸತ್ಯವನ್ನಾಗಿ ಘೋಷಿಸಬಹುದು. ಅವಕಾಶದ ಮತ್ತೊಂದು ಗುಣ 'ದಿಕ್ಕು'. ಎರಡು ಬೈಸಿಕಲ್ಲುಗಳು ಎದುರು ಬದುರಾಗಿ ಬಂದು ಢಿಕ್ಕಿ ಹೊಡೆದಾಗ ಆಗುವ ಅನಾಹುತ ಅವು ಪೂರ್ವ, ಪಶ್ಚಿಮಗಳಿಂದ ಬಂದಿದ್ದರೆಷ್ಟೋ, ಉತ್ತರ ದಕ್ಷಿಣಗಳಿಂದ ಬಂದಿದ್ದರೂ ಅಷ್ಟೇ. ಭೌತ ವಿಜ್ಞಾನದ ಎಲ್ಲಾ ನಿಯಮಗಳೂ ದಿಕ್ಕಿನ ಬಗ್ಗೆ ನಿಷ್ಪಕ್ಷಪಾತಿಗಳು ಎಂಬ ಸತ್ಯವನ್ನು 'ದಿಕ್ಪಲ್ಲಟನ ಸ್ಥಿರತೆ' (Rotational Invarience) ಎಂದು ಹೆಸರಿಸ ಬಹುದು. ಇವೆರಡೂ ಮತ್ತು ಇನ್ನೂ ಕೆಲವು ಸ್ಥಿರತೆಗಳೂ ವಿಜ್ಞಾನಿಗಳಿಗೆ ತಿಳಿದು ಬಂದಿವೆ, ಬಹು ವರ್ಷಗಳಿಂದ. ಪ್ರಕೃತಿ ಮೂಲತಃ ನಿಷ್ಪಕ್ಷಪಾತಿ ಎಂಬ ಅನಿಸಿಕೆ ಪ್ರಕೃತಿಯ ಸರಳತೆಯಲ್ಲಿ ನಾವಿಟ್ಟ ನಂಬಿಕೆ. ಇದು ಗಹನವಾದ ಪ್ರತಿಪಾದನೆ. ನಿಷ್ಪಕ್ಷಪಾತತನ ಕೋಟಿಯಲ್ಲೊಮ್ಮೆ ಭಂಗವಾಗುವುದು ಕಂಡು ಬಂದರೂ ಪ್ರಕೃತಿಯ ಅಂತರ್ಯದ ಬಗೆಗಿನ ನಮ್ಮ ಭಾವನೆ ಮೂಲಭೂತವಾಗಿ ಬದಲಾಗದೇ ವಿಧಿಯಿರದು (ಶೇಕಡಾ ತೊಂಭತ್ತೊಂಭತ್ತು ಭಾಗ ಸತ್ಯ ಹೇಳುವ ವ್ಯಕ್ತಿ, ಪ್ರಶಂಸನೀಯನಾದರೂ ಅವನನ್ನು ಸತ್ಯ ಹರಿಶ್ಚಂದ್ರನ ಮಟ್ಟಕ್ಕೆ ಏರಿಸುತ್ತೇವೆಯೇ?) ಅದ್ದರಿಂದಲೇ ಈ ದಿಸೆಯಲ್ಲಿನ ಸಂಶೋಧನೆಗಳಿಗೆ ಮಹತ್ವವಿರುವುದು.

ಒಂದು ಸಂತರ್ಪಣೆಯಲ್ಲಿ ಸಾಲಾಗಿ ಕುಳಿತು ಊಟಮಾಡುತ್ತಿರುವವರನ್ನು ನೋಡಿದರೆ ಯಾರಿಗೂ ಆಶ್ಚರ್ಯವೆನಿಸದು. ಆದರೆ ಅವರೆದುರಿಗೆ ಒಂದು ದೊಡ್ಡ ಕನ್ನಡಿ ತಂದಿಟ್ಟು ಅದರಲ್ಲಿ ನೋಡಿದರೆ ನಮಗೆ ನಗು ತಡೆಯಲಾಗದು! ಅಲ್ಲಿ ಎಲ್ಲರೂ ಎಡಗೈಯಲ್ಲಿ ಊಟ ಮಾಡುತ್ತಿರುವ ಗೌರವಸ್ಥರೇ! ವಸ್ತುಗಳ ಎಡ ಮತ್ತು ಬಲಗಳನ್ನು ಕನ್ನಡಿ ಅದಲು ಬದಲು ಮಾಡಲು ಸಾಧ್ಯವಾಗಿರುವುದು ಅವಕಾಶದ ಇನ್ನೊಂದು ಗುಣವಾದ 'ಪಾರ್ಶ್ವತೆ' ಯಿಂದ. ಈ ಅದಲು ಬದಲನ್ನು ಬಿಟ್ಟರೆ ಕನ್ನಡಿಯೊಳಗಿನ ಜನರ ನುಡಿ, ನಗು, ಊಟ-ಕ್ರಮ ಇತ್ಯಾದಿಗಳೆಲ್ಲಾ ಹೊರಗಿನವರಂತೆಯೇ ಅಲ್ಲವೇ? ನಿಜ ಜಗತ್ತಿನಲ್ಲೂ ಇಂತಹ ದೃಷ್ಟಾಂತಗಳು ಅನೇಕ. ಎಡಚರ ದೇಹಕ್ರಿಯೆಗಳೂ ಬಲಗೈಯವರ ದೇಹಕ್ರಿಯೆಗಳೂ ಒಂದೇ ನಿಯಮಗಳಿಗೇ ಒಳಪಟ್ಟಿರುವುದು. ಇಂತಹ ಅನೇಕ ಉದಾಹರಣೆಗಳಿಂದ ಪ್ರಭಾವಿತರಾಗಿದ್ದರಿಂದಲೇ ಪ್ರಕೃತಿಯ ನಿಯಮಗಳು ಎಡ ಮತ್ತು ಬಲಗಳ ಮಧ್ಯೆ ತಾರತಮ್ಯ ತೋರುವುದಿಲ್ಲ ಎಂಬ ನಂಬಿಕೆ ಹೊಂದಿದ ವಿಜ್ಞಾನಿಗಳು 'ಪಾರ್ಶ್ವ ಪ್ರತಿಫಲನ ಸ್ಥಿರತೆ' (Parity Reversal Invarience) ಪ್ರತಿಪಾದಿಸಿದರು. ಪ್ರತಿಪಾದಿಸಿದ ನಂತರವೂ ಕಂಡು ಹಿಡಿಯಲ್ಪಟ್ಟ ವಿಷಯಗಳು ಇದಕ್ಕೆ ಅನುಗುಣವಾಗೇ ಇದ್ದುದರಿಂದ ಈ ನಂಬಿಕೆ ಬಹಳ ವರ್ಷಗಳ ಕಾಲ ಆಳಿತು.

ಆದರೆ ಧಾರ್ಮಿಕ ನಂಬಿಕೆಗಳಿಗೂ ವೈಜ್ಞಾನಿಕ ನಂಬಿಕೆಗಳಿಗೂ ಇರುವ ವ್ಯತ್ಯಾಸವಿಷ್ಟೆ. ಮೊದಲನೆಯವು, ಪಟ್ಟಭದ್ರಹಿತಗಳಾಗಿ ತಳವೂರಿ ರಕ್ತ ಹರಿಸಿದರೂ ತಮ್ಮ ಗದ್ದುಗೆಗಳನ್ನು ರಕ್ಷಿಸಿಕೊಳ್ಳುತ್ತವೆ. ಎರಡನೆಯವು. ಲೋಕ ಸಭೆಯಲ್ಲಿ ತಮ್ಮ ವಿರೋಧವಾಗಿ ಒಂದೇ ಒಂದು ಮತ ಪೆಚ್ಚಿಗೆ ದಾಖಲಾದ ತಕ್ಷಣವೇ ಯಾಂತ್ರಿಕವಾಗಿ ಉರುಳಿ ಹೋಗುವ ಪ್ರಜಾಪ್ರಭುತ್ವದ ಸರ್ಕಾರಗಳಂತೆ ಪ್ರತಿಭಟನೆಯಿಲ್ಲದೇ ಪಕ್ಕಕ್ಕೆ ತಳ್ಳಲ್ಪಡುತ್ತವೆ. 'ಪಾರ್ಶ್ವ ಪ್ರತಿಫಲನ ಸ್ಥಿರತೆ' 'ದುರ್ಬಲ ಶಕ್ತಿ'ಯ ವಿಷಯದಲ್ಲಿ ಪಾಲಿಸಲ್ಪಡುವುದಿಲ್ಲ ಎಂದು ೧೯೫೬ ರಲ್ಲಿ ಘೋಷಿಸಿದರು, ಲೀ ಮತ್ತು ಯಾಂಗ್ ಎಂಬ ವಿಜ್ಞಾನಿಗಳು. ಮರುವರ್ಷ ಅವರ ಘೋಷಣೆ ಪ್ರಾಯೋಗಿಕ

ವಾಗಿ ಸಿದ್ಧವಾಗಿದ್ದರಿಂದ ಆ ವರ್ಷ ಅವರಿಗೆ ನೊಬೆಲ್ ಪುರಸ್ಕಾರ ಸಿಕ್ಕಿತು.

ದೀಪಾವಳಿಯಲ್ಲಿ ರೊಯ್ಯನೇ ಆಕಾಶಕ್ಕೆ ಹಾರುವ 'ಏರೋಪ್ಲೇನ್' ಬತ್ತಿಯಿರುವ ಒಂದು ಸಣ್ಣ ಡಬ್ಬಿ. ಬತ್ತಿಗೆ ಬೆಂಕಿ ತೋರಿಸಿ ಹಿಂದೆ ಸರಿದು ನಿಂತು ನೋಡಿದಾಗ ಅದು ಮೇಲಕ್ಕೇರುವುದಷ್ಟೆ ಅಲ್ಲದೇ ತಾನೂ ಗರಗರನೆ ತಿರುಗುತ್ತಿರುತ್ತದೆ ಸಾಮಾನ್ಯವಾಗಿ. ಇದನ್ನು ತಯಾರಿಸಿದ ಕಾರ್ಖಾನೆಯ ಯಂತ್ರ ನಿಷ್ಪಕ್ಷಪಾತಿಯಾಗಿದ್ದರೆ ಡಬ್ಬಿಯೊಳಗೆ ಎಲ್ಲೆಡೆಗೂ ಸಮಾನವಾಗಿ ಮದ್ದು ತುಂಬಿಸಿರಬೇಕು. ಇಂತಹ ಅನೇಕ ಡಬ್ಬಿಗಳನ್ನು ತಂದು ಸಮತಟ್ಟಾದ ನೆಲದ ಮೇಲಿರಿಸಿ ಬೆಂಕಿಯಿಟ್ಟು ಹಾರಿಸಿ ವೀಕ್ಷಿಸಿದರೆ ಅವುಗಳಲ್ಲಿ ಅರ್ಧ ಡಬ್ಬಿಗಳು ಬಲಮುರಿಯಲ್ಲೂ (ತಲೆಯೆತ್ತಿ ನೋಡಿದಾಗ ಕಾಣುವ ಡಬ್ಬಿಯು ಭ್ರಮಣ ಗಡಿಯಾರದ ಮುಳ್ಳುಗಳು ಚಲಿಸುವ ರೀತಿ) ಉಳಿದವು ಎಡಮುರಿಯಲ್ಲೂ ಗರಗರನೆ ತಿರುಗುತ್ತಿದ್ದುವು ಎಂದು ತಿಳಿಯುತ್ತದೆ. ಆದರೆ ಇನ್ನೊಂದು ಕಾರ್ಖಾನೆ ತಯಾರಿಸಿದ್ದವನ್ನು ತಂದು ಹಾರಿಸಿ ನೋಡಿದಾಗ ಬಹುತೇಕ ಡಬ್ಬಿಗಳು ಎಡಮುರಿಯಲ್ಲಿ ಮಾತ್ರವೇ ತಿರುಗುತ್ತಾ ಹಾರಿದವು ಎಂದಿಟ್ಟುಕೊಳ್ಳಿ. ಆಗ ಈ ಎರಡನೇ ಕಾರ್ಖಾನೆಯ ಯಂತ್ರ ನಿಷ್ಪಕ್ಷಪಾತಿಯಲ್ಲ ಎಂದು ನಿರ್ಧರಿಸಬೇಕಲ್ಲವೇ? ಪ್ರಾಥಮಿಕ ಕಣಗಳ ಲೋಕದಲ್ಲೂ ಹೀಗೇ. ಉದಾಹರಣೆಗೆ, 'ಮ್ಯೂ' ಎಂಬ ಕಣ ಸೃಜಿಸಲ್ಪಟ್ಟ ಅಲ್ಪ ಸಮಯದಲ್ಲೇ ತಾನಾಗಿಯೇ ಮೂರು ವಿಧದ ಕಣಗಳಾಗಿ ಸಿಡಿದು ಹೋಗುತ್ತದೆ. ಈ ಸಿಡಿಯುವಿಕೆ ಆಗುವುದು 'ದುರ್ಬಲ ಶಕ್ತಿ'ಯ ದೆಸೆಯಿಂದ. ಅನೇಕ ಮ್ಯೂ ಕಣಗಳನ್ನು ನೋಡಿದಾಗ ಕಂಡು ಬರುವುದೇನೆಂದರೆ ಹಾರುತ್ತಾ ಹೊರ ಬರುವ ಮೂರು ಕಣಗಳಲ್ಲಿ ಒಂದಾದ ಎಲೆಕ್ಟ್ರಾನ್ ಎಂಬ ಕಣ ಯಾವಾಗಲೂ ಎಡ ಮುರಿಯಲ್ಲೇ ತಿರುಗುತ್ತಿರುವುದು! ಅಂದ ಮೇಲೆ, ದುರ್ಬಲ ಶಕ್ತಿಗೆ ಎಡಗಡೆ ಯಾವುದು, ಬಲಗಡೆ ಯಾವುದು ಎನ್ನುವುದು ಚೆನ್ನಾಗಿ ಗೊತ್ತು! ಪಾರ್ಶ್ವತೆಯೆನ್ನುವುದು ಕೇವಲ ನಮ್ಮ ಭಾವನೆಯ ವೈಚಿತ್ರ್ಯವಲ್ಲ. ಭೌತಿಕ ವಿಶ್ವದ ಅಂತರ್ಯಾನದಲ್ಲೂ ಸ್ಪಷ್ಟವಾಗಿರುವ ಗುಣ ಎಂಬುದನ್ನು ಒಪ್ಪಿಕೊಳ್ಳಬೇಕಾಯಿತು, ೧೯೫೭ ರಲ್ಲಿ.

ಇದರ ಹಿಂದೆಯೇ ಅದುವರೆಗೂ ನೀರೆರೆದು ಬೆಳೆಸಿಕೊಂಡಿದ್ದ ಮತ್ತೊಂದು ನಂಬಿಕೆಯೂ ಭಗ್ನವಾಯಿತು. ವಸ್ತುಗಳೆಲ್ಲವೂ ಪರಮಾಣುಗಳಿಂದಾಗಿವೆ, ಪರಮಾಣುಗಳು ಪ್ರೋಟಾನ್ ನ್ಯೂಟ್ರಾನ್ ಮತ್ತು ಎಲೆಕ್ಟ್ರಾನ್‌ಗಳಿಂದಾಗಿವೆಯೆಂದು ತಿಳಿದಿದ್ದೇವಷ್ಟೆ. ವೇಗ ವರ್ಧಕಗಳನ್ನುಪಯೋಗಿಸಿ ಎಲೆಕ್ಟ್ರಾನ್‌ಗಳಿಗೆ ಚೈತನ್ಯ ನೀಡಿ ಅವುಗಳನ್ನು ವಸ್ತುಗಳ ಮೇಲೆ ಘರ್ಷಿಸುವುದರಿಂದ ಪರಮಾಣುವಿನಲ್ಲಿಲ್ಲದ (ಆದರೂ ನಕ್ಷತ್ರಗಳ ಗರ್ಭಗಳೊಳಗೆ ಪ್ರಕೃತಿ ಸಾಧ್ಯವಾಗಿಸುವ) ಅನೇಕ ಹೊಸ ವಿವಿಧ ಕಣಗಳೂ ಉತ್ಪತ್ತಿಯಾಗುತ್ತವೆ. ಇವುಗಳಲ್ಲಿ ಕೆಲವೊಮ್ಮೆ ಕಂಡು ಬರುವ ಒಂದು ಕಣ ಗಾತ್ರ ಮತ್ತು ತೂಕದಲ್ಲಿ ಪ್ರೋಟಾನಿನಂತಿದ್ದರೂ ವಿದ್ಯುದಂಶ ಮತ್ತಿತರ ಗುಣಗಳಲ್ಲಿ ಪ್ರೋಟಾನಿನ ತದ್ವಿರುದ್ಧ! ಇದನ್ನೂ ಪ್ರೋಟಾನನ್ನೂ ಹತ್ತಿರ ತಂದರೆ ಅವೆರಡೂ ಒಂದನ್ನೊಂದು ಸಂಹರಿಸಿಬಿಡುತ್ತವೆ! ಕಣಗಳಿದ್ದ ಜಾಗದಿಂದ ಕೇವಲ ಚೈತನ್ಯ ಮಾತ್ರ ಹಾರಿ ಬರುತ್ತದೆ. ಪ್ರೋಟಾನಿನ ಪರಮ ಹಗೆಯಾದ ಈ ಕಣವನ್ನು 'ಪ್ರತಿ ಪ್ರೋಟಾನ್' ಎನ್ನುತ್ತಾರೆ. 'ಪ್ರತಿ ನ್ಯೂಟ್ರಾನ್' ಮತ್ತು 'ಪ್ರತಿ ಎಲೆಕ್ಟ್ರಾನ್'ಗಳೂ ಕಂಡು ಬರುತ್ತವೆ ಈ ಹೊಸ ಕಣಗಳಲ್ಲಿ ಆಗಾಗ್ಗೆ. ಅಷ್ಟೇಕೆ, ಇದುವರೆಗೂ ಕಂಡು ಹಿಡಿಯಲ್ಪಟ್ಟಿರುವ ಪ್ರಾಥಮಿಕ ಕಣಗಳಲ್ಲಿ ಎದುರಾಳಿಯಿಲ್ಲದ ಕಣವೇ ಇಲ್ಲ. ಇದೇ ಕುತೂಹಲಕಾರಿಯಾದರೆ, ಇನ್ನಷ್ಟು ಆಸಕ್ತಿ ತರಿಸುವ ವಿಷಯ ಈ ವಿರುದ್ಧ ಕಣಗಳೂ ತಮ್ಮ ತಮ್ಮೊಳಗೆ ಕಣಗಳ ರೀತಿಯಲ್ಲೇ ವ್ಯವಹರಿಸುವುದು! ಉದಾಹರಣೆಗೆ. ಒಂದು ಪ್ರೋಟಾನ್ ಮತ್ತು ಒಂದು ಎಲೆಕ್ಟ್ರಾನನ್ನು ಸೆರೆ ಹಿಡಿದು ತನ್ನ ಸುತ್ತಲೂ ಸುತ್ತುವಂತೆ ಮಾಡಿಕೊಂಡಾಗ ಆ ಜೋಡಿಯೇ 'ಜಲ ಜನಕ ಪರಮಾಣು'. ಜಲ ಜನಕದ ಗುಣಗಳು ನಮಗೆ ಚೆನ್ನಾಗಿ ತಿಳಿದಿವೆ. ಒಂದು ಪ್ರತಿ ಪ್ರೋಟಾನ್ ಕೂಡಾ ಒಂದು ವಿರುದ್ಧ ಎಲೆಕ್ಟ್ರಾನನ್ನು ಸೆರೆಹಿಡಿದುಕೊಂಡು 'ಪ್ರತಿ ಜಲ ಜನಕ ಪರಮಾಣು'ವನ್ನು ಉಂಟಾಗಿಸುತ್ತದೆ.

ಆಶ್ಚರ್ಯವೆಂದರೆ ಈ ಪ್ರತಿ ಪರಮಾಣುವಿನ ಗುಣ, ಲಕ್ಷಣಗಳೆಲ್ಲಾ ಜಲಜನಕದ ಪರಮಾಣುವಿನಂತೆಯೇ! ಅಂದ ಮೇಲೆ, ವಿದ್ಯುತ್ ಶಕ್ತಿ ಪ್ರೋಟಾನ್–ಎಲೆಕ್ಟ್ರಾನ್‌ಗಳ ಜೋಡಿಗೂ, ವಿರುದ್ಧ ಪ್ರೋಟಾನ್– ಪ್ರತಿ ಎಲೆಕ್ಟ್ರಾನ್‌ಗಳ ಜೋಡಿಗೂ ಮಧ್ಯೆ ಪಕ್ಷಪಾತ ತೋರಿಸದು ಎಂದಾಯಿತು. ಇದನ್ನೇ ತಾತ್ವಿಕವಾಗಿ ಹಿಗ್ಗಿಸಿ ನೋಡಿ. ಪ್ರೋಟಾನ್, ನ್ಯೂಟ್ರಾನ್ ಮತ್ತು ಎಲೆಕ್ಟ್ರಾನ್‌ಗಳನ್ನು ಹೇಗೋ ಮಾಯವಾಗಿಸಿ ಅವುಗಳ ಬದಲು ಅವುಗಳ ವಿರುದ್ಧ ಕಣಗಳನ್ನು ತಂದಿಟ್ಟರೆ ಇಡೀ ವಿಶ್ವವೇ 'ಪ್ರತಿ ವಿಶ್ವ'ವಾಗಿ ಹೋಗುತ್ತದೆಯಲ್ಲವೇ? ಆದರೂ ನಮ್ಮ ಜೀವನದಲ್ಲಿ ಕಿಂಚಿತ್ತೂ ಬದಲಾವಣೆಯಿರದು! 'ಪ್ರತಿ ಮಾನವ'ರಾದ ನಾವು ಪ್ರತಿ ಆಮ್ಲಜನಕ' ಉಸಿರಾಡಿ 'ಪ್ರತಿ ನೀರ'ನ್ನು ಕುಡಿದರೂ ನಮ್ಮ ದೇಹ ಕ್ರಿಯೆಗಳಲ್ಲಿಯಾಗಲೀ, ಗಾಳಿ ಬೀಸುವಿಕೆಯಲ್ಲಾಗಲೀ, ನೀರು ಹರಿಯುವಿಕೆಯಲ್ಲಾಗಲೀ, ನಮಗೆ ಏನೂ ವ್ಯತ್ಯಾಸ ಕಾಣಿಸದು. ಕಣ, ಪ್ರತಿ ಕಣಗಳೆಂಬುವು ಪ್ರಕೃತಿಯ ದೃಷ್ಟಿಯಲ್ಲಿ ಸರಿಸಮಾನವಾದ ಎರಡು ಗುಂಪುಗಳು. ಪ್ರತಿ ಕಣಗಳಿಂದಲೇ ಆಗಿರುವ ಮತ್ತೊಂದು ವಿಶ್ವವಿದ್ದರೆ ಅದರ ಜೀವಿಗಳು ಕೊನೆಗೆ ಕಂಡು ಹಿಡಿದುಕೊಳ್ಳುವುದು ನಾವೀಗ ಕಂಡು ಹಿಡಿದಿರುವ ಪ್ರಕೃತಿ ನಿಯಮಗಳನ್ನೇ. ಹೀಗೆ ತಾತ್ವಿಕವಾಗಿ ಸೂಚಿತವಾದ ಈ ವಿಷಯವನ್ನು 'ಗುಣ ವ್ಯತಿರಿಕ್ತನ ಸ್ಥಿರತೆ' (Charge Conjugation Inavrience) ಎನ್ನಬಹುದು. ಆದರೆ ಪಾರ್ಶ್ವ ಪ್ರತಿಫಲನ ಸ್ಥಿರತೆ ನಿಖರವಾಗಿ ಪಾಲಿಸಲ್ಪಡುತ್ತಿಲ್ಲವೆಂದು ಗೊತ್ತಾದಾಗ ಕುತೂಹಲ ತಾಳಿದ ವಿಜ್ಞಾನಿಗಳು ಈ ನಂಬಿಕೆಯನ್ನೂ ಪರೀಕ್ಷಿಸಿದರು. ಮ್ಯೂ ಕಣದಿಂದ ಸಿಡಿಯುವ ಎಲೆಕ್ಟ್ರಾನ್ ಎಡ ಮುರಿಯಲ್ಲಿ ತಿರುಗುತ್ತಾ ಬರುವುದೆಂದು ತಿಳಿದಿತ್ತು. 'ಪ್ರತಿ ಮ್ಯೂ ಕಣ'ದ ಸಿಡಿತವನ್ನು ನೋಡಿದರು. ಅದರಿಂದ ಪ್ರತಿ ಎಲೆಕ್ಟ್ರಾನ್ ಹೊರ ಬರುವುದೇನೋ ಸರಿಯಾಗಿತ್ತು. ಗುಣ ವ್ಯತಿರಿಕ್ತನ ಸ್ಥಿರತೆ ಪಾಲಿಸಲ್ಪಟ್ಟಿದ್ದರೆ ಪ್ರತಿ ಎಲೆಕ್ಟ್ರಾನ್ ಕೂಡಾ ಎಡಮುರಿಯಲ್ಲಿ ತಿರುಗುತ್ತಿದ್ದಿರಬೇಕಿತ್ತು. ಆದರೆ ಪ್ರಯೋಗ ಶಾಲೆಯಲ್ಲಿ ಕಂಡಿದ್ದು ಬಲ ಮುರಿಯಲ್ಲಿ ತಿರುಗುತ್ತಾ ಹಾರಿ ಬರುವ ಪ್ರತಿ ಎಲೆಕ್ಟ್ರಾನ್! ಸಿಡಿತಗಳಿಗೆ ಕಾರಣವಾದ ದುರ್ಬಲ ಶಕ್ತಿ ನಿಷ್ಪಕ್ಷಪಾತಿಯಾಗಿರುವ ಬದಲು ಗುಂಪನ್ನು ನೋಡಿಕೊಂಡು ತಾಳ ಹಾಕುತ್ತದೆ ಎಂದಾಯಿತು.

ಹೀಗೆ ಅನೇಕ ವರ್ಷಗಳ ಕಾಲ ಅಚ್ಚು ಮೆಚ್ಚಾಗಿದ್ದ ಎರಡು ನಂಬಿಕೆಗಳು ಕುಸಿದು ಬಿದ್ದರೂ ಅವುಗಳ ಹಿಂದೆಯೇ ಮತ್ತೊಂದು ವಿಷಯ ಹೊಳೆದು ಬಂತು. ಇವೆರಡೂ ಪ್ರತ್ಯೇಕವಾಗಿ ಭಂಗವಾಗುತ್ತವೆ, ನಿಜ. ಆದರೆ ಇವೆರಡನ್ನೂ ಒಟ್ಟಿಗೆ ತೆಗೆದುಕೊಂಡು ನೋಡಿದರೆ ಒಂದು ಹೊಸ ಸ್ಥಿರತೆ ಕಂಡು ಬರುತ್ತದೆ. ಮ್ಯೂ ಕಣದ ಸಿಡಿಯುವಿಕೆಯನ್ನು ಕನ್ನಡಿಯಲ್ಲಿ ನೋಡಿದರೆ ಅಲ್ಲಿ ಎಲೆಕ್ಟ್ರಾನ್ ಬಲಮುರಿಯಲ್ಲಿ ತಿರುಗುತ್ತಿರುವಂತೆ ಕಾಣುತ್ತದೆಯಲ್ಲವೆ? ಈಗ ಆ ಕನ್ನಡಿಯೊಳಗಿನ ಕಣಗಳನ್ನೆಲ್ಲಾ ವಿರುದ್ಧ ಕಣಗಳಾಗಿ ಪರಿವರ್ತಿಸೋಣ. ಆಗ ವಿರುದ್ಧ ಮ್ಯೂ ಕಣದಿಂದ ಸಿಡಿದು ಬಲಮುರಿಯಲ್ಲಿ ತಿರುಗುತ್ತಾ ಹಾರಿ ಬರುವ ಪ್ರತಿ ಎಲೆಕ್ಟ್ರಾನ್ ತಾನೇ ಕಾಣ ಬರುವುದು? ನಮ್ಮ ಮಾನಸಿಕ ಮಾಯಾಜಾಲದಿಂದ ಕಲ್ಪಿತವಾದರೂ ಈ ಚಿತ್ರ ಕನ್ನಡಿಯೊಳಗಿನ ಗಂಟಲ್ಲ! ಇದು ನಿಜವಾಗಿಯೂ ಪ್ರಯೋಗಶಾಲೆಯಲ್ಲಿ ಕಂಡುಬಂದ ಚಿತ್ರವೆನ್ನುವುದನ್ನು ಕೆಲವು ವಾಕ್ಯಗಳ ಹಿಂದೆ ಅರಿತೆವು. ಆದ್ದರಿಂದ ಪಾರ್ಶ್ವ ಪ್ರತಿಫಲನ ಮತ್ತು ಗುಣ ವ್ಯತಿರಿಕ್ತನಗಳೆರಡನ್ನೂ ಚಲಾಯಿಸಿಬಿಟ್ಟರೆ ಕಾಣುವ ಚಿತ್ರಕ್ಕೂ, ನೈಜತೆಗೂ ವ್ಯತ್ಯಾಸವೇ ಇರದು. ಇದನ್ನೇ 'ಜೋಡಿ ಸ್ಥಿರತೆ' ಎನ್ನೋಣ, ಇದರ ಪರಿಣಾಮ ಏನೆಂದರೆ ನಮ್ಮ ವಿಶ್ವಕ್ಕೂ ಪ್ರತಿ ವಿಶ್ವಕ್ಕೂ ಎಡ, ಬಲಗಳಲ್ಲಿ ವ್ಯತ್ಯಾಸ ಇರುವುದಾದರೂ, ಪ್ರತಿ ವಿಶ್ವದಲ್ಲಿ ಎಡ, ಬಲಗಳನ್ನು ಅದಲು ಬದಲು ಮಾಡಿಕೊಂಡರೆ ಆಗ ಅಲ್ಲಿನ ಭೌತಿಕ ನಿಯಮಗಳಿಗೂ ನಮ್ಮ ವಿಶ್ವದ ಭೌತಿಕ ನಿಯಮಗಳಿಗೂ ಕೊಂಚವೂ ವ್ಯತ್ಯಾಸವಿರದು. ಈ ವಿಷಯ ಹೊಳೆದಾಗ ವಿಜ್ಞಾನಿಗಳಿಗೆ ಸಂತೋಷವಾಯಿತು

ಆದರೂ, ಹೇಗೋ ಸಮಜಾಯಿಸಿಕೊಂಡೆ

ವೆಂದು ಮರಳಲ್ಲಿ ತಲೆ ಹುಗಿದುಕೊಂಡು ನಿದ್ರೆ ಮಾಡುವ ಸ್ವಭಾವವಲ್ಲ ವಿಜ್ಞಾನಿಗಳದು ಈ ಜೋಡಿ ಸ್ಥಿರತೆಯೂ ನಿಖರವೋ ಅಲ್ಲವೋ ಎಂಬುದನ್ನರಿಯಲು ಸಂಶೋಧನೆಗಳನ್ನು ನಡೆಸ ತೊಡಗಿದರು. ಪಾರ್ಶ್ವ ಪ್ರತಿಫಲನ ಮತ್ತು ಗುಣ ವ್ಯತಿರಿಕ್ತನ ಸ್ಥಿರತೆಗಳು ಪ್ರತ್ಯೇಕವಾಗಿ ಭಂಗವಾಗುವ ಅನೇಕ ಪ್ರಾಥಮಿಕ ಕಣಗಳ ಸಿಡಿತಗಳನ್ನು ಪರೀಕ್ಷಿಸಿದರು. ಅಲ್ಲೆಲ್ಲಾ ಈ ಜೋಡಿ ಸ್ಥಿರತೆಯು ಪರಿಪಾಲನೆಯೇ ಕಂಡು ಬಂತು. ಕಣ, ಪ್ರತಿ ಕಣಗಳ ವ್ಯತ್ಯಾಸವನ್ನಾಗಲೀ, ಎಡ, ಬಲಗಳ ವ್ಯತ್ಯಾಸವನ್ನಾಗಲೀ ದುರ್ಬಲ ಶಕ್ತಿ ಗುರುತಿಸುತ್ತಿದೆಯಾದರೂ ಇವೆರಡೂ ಚೆಲಾವಣೆಯಾದಾಗ ಉಂಟಾಗುವ ಪರಿಸ್ಥಿತಿಗೂ ಮೊದಲಿನ ಪರಿಸ್ಥಿತಿಗೂ ಮಧ್ಯೆ ವ್ಯತ್ಯಾಸ ಹೇಳಲು ದುರ್ಬಲ ಶಕ್ತಿಗೆ ಸಾಕಷ್ಟು ಜಾಣತನವಿಲ್ಲ ಎಂದು ನಂಬಿಕೆಯಾಗತೊಡಗಿತು. ಇನ್ನೇನು, ತೃಪ್ತಿಯಿಂದ ಹಿಂದಕ್ಕೊರಗಿ ಕುಳಿತುಕೊಳ್ಳುವುದರಲ್ಲಿದ್ದರು. ಆಗಲೇ ಅಮೇರಿಕದ ಬಹುಶಕ್ತಿ ವಿಜ್ಞಾನಿಗಳಾದ ವಾಲ್ ಫಿಚ್ ಮತ್ತು ಜೇಮ್ಸ್ ಕ್ರೋನಿನ್‌ರು ಕಂಡು ಹಿಡಿದ ವಿಷಯ ಎಲ್ಲರೂ ಧಿಗ್ಗನೆದ್ದು ಕುಳಿತುಕೊಳ್ಳುವಂತೆ ಮಾಡಿತು!



"ಕಾಶಿಗೆ ಹೋಗೋದು ನನ್ನ ಹಣೇಲಿ ಬರೆದಿಲ್ಲ ಅಂತಾ ಹೇಳ್ತಿಯಲ್ಲಪ್ಪಾ... ನಾನು ಸ್ವಲ್ಪ ಬರೆದು ಬಿಡ್ಲಾ..."

ವಿದ್ಯುದ್ರಹಿತ 'ಕ' ಎಂಬ ಕಣ (Neutral K Meson) ಅನೇಕ ವಿಚಿತ್ರಗಳ ತವರು ಉದಾಹರಣೆಗೆ, ಮಿಕ್ಕ ಯಾವುದೇ ಪ್ರಾಥಮಿಕ. ಕಣಕ್ಕೂ ಅದರ ಪ್ರತಿ ಕಣಕ್ಕೂ ಎಣ್ಣೆ, ಸೀಗೇಕಾಯಿನ ಸಂಬಂಧವಾದರೆ, ಈ 'ಕ' ಕಣಕ್ಕೂ ಅದರ ವಿರುದ್ಧ ಕಣಕ್ಕೂ ಹಾಲು, ಕೆನೆಗಳ ಸಂಬಂಧ! ಈ ಸ್ನೇಹ ಎಷ್ಟೆಂದರೆ, 'ಕ' ಕಣಗಳನ್ನು ಪ್ರತ್ಯೇಕಿಸಿ ಒಂದೆಡೆ ಕೂಡಿಹಾಕಿದರೂ ಅವು ಅಲ್ಪ ಸಮಯದಲ್ಲೇ ಅರ್ಧಭಾಗ ಪ್ರತಿ ಕಣಗಳಾಗಿ ಬಿಡುತ್ತವೆ! ಒಂದನ್ನೊಂದು ಸಂಹರಿಸುವುದಿರಲಿ, ಕಣ ಯಾವುದು, ವಿರುದ್ಧ ಕಣ ಯಾವುದು ಎಂದು ಹೇಳಲೂ ಆಗದು! ಹುಟ್ಟುವಾಗ ಗಂಡು, ಹೆಣ್ಣುಗಳಾಗಿ (ಕಣ, ಪ್ರತಿಕಣಗಳಾಗಿ) ಹುಟ್ಟಿದರೂ, ಆ ನಂತರ ಎಲ್ಲವೂ 'ಅರ್ಧ ನಾರೀಶ್ವರ ಕಣ' ಗಳೇ ಆಗಿ ಹೋಗುತ್ತವೆ ಸಾಯುವ ತನಕ!

ಈ ವಿಚಿತ್ರ ವಿಗ್ರಹ ಮಾಡುವಂತಹುದಾದರೂ ವಿಜ್ಞಾನಿಗಳು ಸುಲಭವಾಗಿ ಹತಾಶರಾಗದ ಜನ. ಈ ಅರ್ಧ ನಾರೀಶ್ವರ ಕಣಗಳಲ್ಲೂ ಬಲಗೈಯವರು ಮತ್ತು ಎಡಗೈಯವರೆಂದು ಎರಡು ಬಗೆಯಿದೆಯೆಂದು ಕಂಡುಕೊಂಡರು. ಎಡಗೈ ಲಕ್ಷಣದ ಕಣಗಳು ಬಲಗೈ ಲಕ್ಷಣದವಕ್ಕಿಂತ ಹೆಚ್ಚು ಕಾಲ ಬದುಕುತ್ತವೆಯೆಂದೂ ಬಲಗೈಯಂತೆ ಎರಡು ಲಘುವಾದ ಕಣಗಳಾಗಿ ಸಿಡಿಯುವ ಬದಲು ಮೂರು ಕಣಗಳಾಗಿ ಸಿಡಿಯುತ್ತವೆಯೆಂದೂ ಕಂಡುಕೊಂಡರು. ಜೋಡಿ ಸ್ಥಿರತೆ ಪಾಲಿಸಲ್ಪಡುವುದರಿಂದಲೇ ಈ ರೀತಿಯ ಭಿನ್ನತೆ ಇರುವುದು ಎಂದೂ ಗೊತ್ತಾಯಿತು.

ಆದರೆ ಜೋಡಿ ಸ್ಥಿರತೆ ಭಂಗವಾದರೆ ಹೇಗಿರಬೇಕು? ಆಗ ಎಡಗೈ ಲಕ್ಷಣದ ಕಣಗಳು ಬಲಗೈಯಂತೆ ಎರಡೇ ಕಣಗಳಾಗಿ ಸಿಡಿಯುವುದು ಸಾಧ್ಯವಾಗಬೇಕು. ಬಹುತೇಕ ಕಣಗಳು ಜೋಡಿ ಸ್ಥಿರತೆ ಪಾಲಿಸಿದರೂ ಸಾವಿರಕ್ಕೆ ಒಂದು ಕಣವಾದರೂ ತನ್ನ ಗುಂಪಿಗೆ ದ್ರೋಹ ಬಗೆದು ಬೇರೆಯ ರೀತಿ ವರ್ತಿಸುತ್ತದೆಯೋ ಇಲ್ಲವೋ ಎಂಬುದನ್ನರಿಯಲು ಸಂಶೋಧನೆ ಕೈಗೊಂಡರು ಫಿಚ್ ಮತ್ತು ಕ್ರೋನಿನ್. ಅನೇಕ ತಿಂಗಳುಗಳ ಕಾಲ ಕಾದು ಕಾದು ನೋಡುತ್ತಿದ್ದರು. ಅವರ ತಾಳ್ಮೆಗೆ

ಕೊನೆಗೆ ಪುರಸ್ಕಾರ ಸಿಕ್ಕಿತು. ೧೯೬೪ರ ಮಧ್ಯಭಾಗದಲ್ಲಿ ಪ್ರಕಟಿಸಿದ ಅವರ ಸಂಶೋಧನೆಯ ಫಲಿತಾಂಶಗಳು ಜೋಡಿ ಸ್ಥಿರತೆ ನಿಖರಲವಲ್ಲವೆಂದು ನಿಸ್ಸಂದೇಹವಾಗಿ ಸಿದ್ಧಮಾಡಿದುವು. ಸಾವಿರ ಎಡಗೈ ಲಕ್ಷಣದ 'ಕ' ಅರ್ಧನಾರೀಶ್ವರರನ್ನುಗಮನಿಸಿದರೆ ಅಲ್ಲಿ ಎರಡು ಕಣಗಳು ಕಿಡಿಗೇಡಿಗಳಾಗಿ ಬಲಗೈ ಲಕ್ಷಣದವರಂತೆ ಎರಡೇ ಕಣಗಳಾಗಿ ಸಿಡಿಯುವುವೆಂದು ದಾಖಲಾಯಿತು. ಜೋಡಿ ಸ್ಥಿರತೆ ಶೇಕಡಾ ೯೯.೮ ರಷ್ಟು ಸತ್ಯವೆನ್ನುವುದು ಪ್ರಶಂಸನೀಯವಾದರೂ ಅದನ್ನು ವಿಶ್ವಸತ್ಯವನ್ನಾಗಿ ಆರಾಧಿಸುವುದು ಕನಸಿನ ಮಾತಾಯಿತು. ಅಂದಿನಿಂದ ನಾವು ಚಾಪೆಯ ಕೆಳಗೆ ನುಸುಳಿದರೆ ತಾನು ರಂಗೋಲೆಯ ಕೆಳಗೂ ನುಸುಳ ಬಲ್ಲೆನೆಂದು ತೋರಿಸಿಕೊಟ್ಟಳು ಪ್ರಕೃತಿ!

ಹೀಗೆ ಒಂದರ ಹಿಂದೆ ಒಂದರಂತೆ ಕುಸಿದು ಬಿದ್ದ ನಂಬಿಕೆಗಳ ಅವಶೇಷಗಳ ಮಧ್ಯೆ ನಿಂತು ಕಣ್ಣೀರಿಡುತ್ತಾ ಪ್ರಕೃತಿಯ ಸರಳತೆಯಲ್ಲಿ ನಾವಿಟ್ಟಿದ್ದ ವಿಶ್ವಾಸ ಮಣ್ಣು ಪಾಲಾಯಿತೆಂದು ಕೆಲವರು ದುಃಖಿಸಬಹುದಾದರೂ, ಈ ನಂಬಿಕೆಗಳು ನಿಖರವಾಗಿ ಪಾಲಿಸಲ್ಪಟ್ಟಿದ್ದರೆ ಇಂದು ನಾವು ಅಸ್ತಿತ್ವದಲ್ಲಿರಲೂ ಸಾಧ್ಯವಿರುತ್ತಿರಲಿಲ್ಲವೆಂದು ಗೋಚರಿಸಿದಾಗ ಎಲ್ಲರೂ ನೆಮ್ಮದಿಯ ನಿಟ್ಟುಸಿರು ಬಿಡಬೇಕು! ಫಿಚ್ ಮತ್ತು ಕ್ರೋನಿನ್‌ರವರಿಗೆ ಕೆಲವು ವಾರಗಳ ಹಿಂದೆ ಸಂದ ನೊಬೆಲ್ ಬಹುಮಾನ ಸಾರ್ಥಕ ದಕ್ಷಿಣೆ ಎನ್ನಬೇಕು. ಏಕೆಂದರೆ ಜೋಡಿ ಸ್ಥಿರತೆ ನಿಖರವಾಗಿದ್ದರೆ ಪ್ರಕೃತಿ ನಮ್ಮ ವಿಶ್ವದ ಬದಲು ಪ್ರತಿ ಕಣಗಳಿಂದಾದ ವಿಶ್ವವನ್ನೇ ಆರಿಸಿಕೊಂಡು ತನ್ನ ಆಳಿಕೆ ನಡೆಸಬಹುದಿತ್ತು!

ಇನ್ನೂ ಪರಿಶೀಲಿಸಿದರೆ, ಒಂದು ವೇಳೆ ನಮ್ಮ ಕಣಗಳ ವಿಶ್ವವನ್ನೇ ಆಕೆ ಆರಿಸಿಕೊಳ್ಳಬಯಸಿದ್ದರೂ ಇದರಲ್ಲಿ ಸ್ಥಿರವಾದ ವಸ್ತುಗಳು ಉಂಟಾಗುವುದೇ ಸಾಧ್ಯವಾಗುತ್ತಿರಲಿಲ್ಲ! ಏಕೆಂದರೆ, ಹದಿನೈದು ಶತಕೋಟಿ ವರ್ಷಗಳ ಹಿಂದೆ ಮಹಾಸ್ಫೋಟದಿಂದ ಹುಟ್ಟಿದ ಈ ವಿಶ್ವದಲ್ಲಿ ಮೊದಲು ಇದ್ದುದು ಪರಮಾಣುಗಳಲ್ಲ, ಸಮಾನ ಸಂಖ್ಯೆಯಲ್ಲಿ ಹೋರಾಡಿ, ಹತವಾಗಿ ಮತ್ತೆ ಉತ್ಪತ್ತಿಯಾಗುತ್ತಿದ್ದ ವಿವಿಧ ಕಣ, ಪ್ರತಿ ಕಣಗಳು ಮಾತ್ರವೇ. ವಿಶ್ವ ವಿಕಾಸಗೊಂಡಂತೆ ತಣ್ಣಗೂ ಆಗತೊಡಗಿದಾಗ ಕಣ, ಪ್ರತಿ ಕಣ್ಣಗಳು ಸುಲಭವಾಗಿ ಉತ್ಪತ್ತಿಯಾಗುವುದು, ನಿಂತು ಹೋಗಿ ಆಗಾಗಲೇ ಹುಟ್ಟಿದ್ದವು ತಮ್ಮ ವಿರೋಧಿಗಳನ್ನು ಹುಡುಕಿಕೊಂಡು ಹೋಗಿ ಹತವಾಗುತ್ತಲೋ ಇಲ್ಲವೇ ಅಲೆದಲೆದು ಕೊನೆಗೆ ಸಿಡಿದು ಸಾಯುತ್ತಲೋ ಇದ್ದುವು. ಜೋಡಿ ಸ್ಥಿರತೆ ನಿಖರವಾಗಿದ್ದರೆ ಈ ಸಿಡಿತಗಳ ಫಲವಾದ ಎಲ್ಲಾ ಲಘು ಕಣಗಳೂ ಎಲ್ಲಾ ಲಘು ಪ್ರತಿ ಕಣಗಳಷ್ಟೇ ಸಂಖ್ಯೆಯಲ್ಲಿರಬೇಕಾಗಿತ್ತು. ಆಗ ಕಡೆಗೆ ಅನಿವಾರ್ಯವಾಗಿ ಎಲ್ಲಾ ಲಘು ಕಣಗಳೂ, ಪ್ರತಿ ಕಣಗಳೂ ಪರಸ್ಪರ ಸಂಹರಿಸಿ ನಾಶವಾಗಬೇಕಿತ್ತು. ಕೇವಲ ಚೈತನ್ಯ ಮಾತ್ರ ಹಾರಾಡುತ್ತಿದ್ದ ವಿಶ್ವ ಘನತೆಯಿಲ್ಲದೆ ಭೂತ ವಿಶ್ವವಾಗೇ ಇರುತ್ತಿತ್ತು!

ಜೋಡಿ ಸ್ಥಿರತೆ ನಿಖರವಲ್ಲದ್ದರಿಂದ ಸಿಡಿತಗಳಾಗುವಾಗ ಪ್ರತಿ ಕಣಗಳಿಗಿಂತ ಹೆಚ್ಚಾಗಿ ಕಣಗಳೇ ಹೊರ ಬಂದುವು. ಕಾಲಕಳೆದಂತೆ ಪ್ರತಿ ಕಣಗಳೆಲ್ಲಾ ತಮ್ಮ ಎದುರಾಳಿಗಳನ್ನು ಹುಡುಕಿಕೊಂಡು ಹೋಗಿ ಹೋರಾಡಿ ನಾಶವಾದರೂ, ಕೊಂಚ ಹೆಚ್ಚಿನ ಸಂಖ್ಯೆಯಲ್ಲಿದ್ದರಿಂದ ಕೊನೆಗೆ ಕೆಲವು ಕಣಗಳು ಎದುರಾಳಿಗಳಿಲ್ಲದೇ ಶಾಶ್ವತವಾಗಿ ಉಳಿದುಕೊಂಡವು. ನಿಧಾನವಾಗಿ ಪರಮಾಣುಗಳ ವಸ್ತುಗಳೂ, ನೀಹಾರಿಕೆಗಳೂ, ನಕ್ಷತ್ರಗಳೂ ಅಲ್ಲದೆ ಸೂರ್ಯ, ಭೂಮಿ, ಜಲ, ನೆಲ, ಮರ, ಖಗ, ಮೃಗ ಮತ್ತು ಕೊನೆಗೆ ನಾವು ಮಾನವರೂ ಉದಿಸಿ ಬಂದೆವು. ಪ್ರತಿ ಪರಮಾಣುಗಳ ಸಂಪರ್ಕದಿಂದ ಕ್ಷಣಮಾತ್ರದಲ್ಲಿ ಮಾಯವಾಗಿ ಹೋಗುವ ಭಯದ ಅರಿವೂ ಇಲ್ಲದೇ ನೀವು ಈ ಪುಟಗಳನ್ನು ನಿಮ್ಮ ಕೈ ಬೆರಳುಗಳಿಂದ ತಿರುಗಿಸುತ್ತಾ ವಿಶ್ವ ಸತ್ಯಗಳ ಸ್ವಾದ ಮಾಡುತ್ತಿರುವುದು ಸಾಧ್ಯವಾಗಿರುವುದೇಕೆಂದರೆ, ವಿಶ್ವ ಜನಿಸಿದ ಆ ಮೊದಲ ಕೆಲವು ಕ್ಷಣಗಳಲ್ಲಿದ್ದ ಶತಕೋಟಿ ಕಣ, ಪ್ರತಿ ಕಣಗಳ ಸಮೂಹದಲ್ಲೊಮ್ಮೆ ಒಂದು ಕಣದ ಮೇಲೆ ಪ್ರಕೃತಿ ಕೊಂಚ ಪಕ್ಷಪಾತದಿಂದ ತನ್ನ ಕಡೆಗಣ್ಣೋಟವನ್ನು ಬೀರಿದ್ದರಿಂದಲೇ! ✡

ಆ ಕಾವ್ಯದಿಂದ
ಆತ ಕೃಷ್ಣವಾತ್ಸಲ್ಯಕ್ಕೆ
ಪಾತ್ರನಾದ

# ಜಯದೇವ ಕವಿಯ
# ಗೀತಗೋವಿಂದ

**ಗಜೇಂದ್ರಗಡ ಶಾಮರಾಯ**

ಬಂಗಾರಕ್ಕೆ ಸುಗಂಧವೂ ಕೂಡಿದಂತೆ' ಎಂಬುದೊಂದು ಪಡೆನುಡಿ ಇದೆ. ಕಾವ್ಯಕ್ಕೂ ಒಂದು ರೀತಿಯಲ್ಲಿ ಈ ಮಾತು ಅನ್ವಯಿಸುವದೆಂದು ಹೇಳಬಹುದು. ಶಬ್ದ (ವಾಕ್) ಹಾಗೂ ಅರ್ಥ, ಇವೆರಡೂ ಪಾರ್ವತೀ ಪರಮೇಶ್ವರರಿದ್ದಂತೆ–ಅರ್ಧನಾರೀ ನಟೇಶ್ವರರಾಗಿ ಅವಿಭಾಜ್ಯವಾಗಿ ಒಂದುಗೂಡಿರುವವವೆಂದು ಕವಿ ಕುಲಗುರು ಕಾಳಿದಾಸನು ಹೇಳಿರುವನು. ಆದರೆ ಶಬ್ದ ಹಾಗೂ ಅರ್ಥಗಳಲ್ಲಿ ಸಾಮಾನ್ಯವಾಗಿ, ನೆಲೆಸಿರುವ ಸಾಹಚರ್ಯವು ಕಾವ್ಯ ಹಾಗೂ ಸಂಗೀತಗಳಲ್ಲಿ ಸರ್ವತ್ರ ಕಂಡು ಬರುವದಿಲ್ಲ. ಕ್ವಚಿತ್ತಾಗಿ ಕೆಲವೊಂದು ಕಾವ್ಯ ಕೃತಿಗಳಲ್ಲಿ ಮಾತ್ರ ಕಾವ್ಯ ಸಂಗೀತಗಳ ಮಧುರ ಮಿಳನವನ್ನು ನಾವು ಕಾಣುವೆವು. ಸಂಗೀತದ ಸ್ವರಮಾಧುರ್ಯವು ಅಂಥ ಕಾವ್ಯಗಳಲ್ಲಿ ಹುದುಗಿದ ರಸದ ಝರಿಗೆ ಬೆರೆತು ಕೊಂಡಾಗ, ಅದು ಸಂತೋಷದ ಹೊನಲಾಗಿ ಹರಿಯುವದು. ಭಾವ ಸೌಷ್ಠವ ಹಾಗೂ ಸ್ವರ–ಮಾಧುರ್ಯಗಳ ಯುತಿಯು ಅಲೌಕಿಕ. ಸಂಗೀತದ, ಸ್ವರಮಾಧುರ್ಯದ ಬಲದಿಂದಲೆ ಸಕಲ ಭಾಷೆಗಳಲ್ಲಿರುವ ಭಕ್ತಿ ಗೀತೆಗಳಿಗೆ ಆಧ್ಯಾತ್ಮಸಿದ್ಧಿಯ ಸ್ಥಾನ ದೊರೆತಿದೆ.

'Music washes the dust off the soul' ಎಂಬ ಕವಿಯ ಉಕ್ತಿಯೊಂದಿದೆ. ಸಂಗೀತ ಸಮನ್ವಿತವಾದ ಅಂಥ ಭಕ್ತಿ ಗೀತಗಳು ಇಂದು 'ಸಂತ ವಾಣಿ' ಯಾಗಿ ಸಂಗೀತತಜ್ಞರಿಗೆ ಶ್ರೇಷ್ಠ ಕಾಣಿಕೆಗಳಾಗಿವೆ. ಭಗವದ್ಭಕ್ತಿಯನ್ನು ಊರ್ಜಿತಗೊಳಿಸಲು ಭಕ್ತಿಮಾರ್ಗದಲ್ಲಿ ಅಮೋಘ ಸಾಧನಗಳಾಗಿವೆ. ಯುರೋಪಿನಲ್ಲಿ 'ಸಂತಗೀತ' (Psalms) ಗಳನ್ನು ಬನಿಯನ್ ಮುಂತಾದ ಸಂತಕವಿಗಳೂ, ಉತ್ತರ ಭಾರತದಲ್ಲಿಯ ಚೈತನ್ಯ, ಕಬೀರ, ಮೀರಾ, ಸೂರದಾಸ ಮುಂತಾದವರು, ದಕ್ಷಿಣ ಭಾರತದಲ್ಲಿ ಆಳ್ವಾರರೂ, ತ್ಯಾಗರಾಜ, ತುಕಾರಾಮ, ಪುರಂದರದಾಸರೇ, ಮೊದಲಾದ ಭಕ್ತ ಶಿರೋಮಣಿಗಳು ಸ್ವಂತದ ಆತ್ಮ ಸಿದ್ಧಿಗೆ ಸಂಗೀತದ ಸಹಾಯವನ್ನು ಪಡೆಯುವದಲ್ಲದೆ, ಸಂಗೀತ ಶಾಸ್ತ್ರ ಹಾಗೂ ಕಲೆಗಳಿಗೆ ಅಮೂಲ್ಯವಾದ ಕಾಣಿಕೆಗಳನ್ನು ನೀಡಿರುವರು.

'ಗೀತ ಗೋವಿಂದ'ದ ಕರ್ತೃ ಜಯದೇವ ಕವಿಯು ಸಂಗೀತ ಕಾವ್ಯದ ಕವಿಗಳಲ್ಲಿ ಅಗ್ರ ಸ್ಥಾನವನ್ನು ಪಡೆದಿರುವನು.

ದಿವಂಗತ ಗ. ದಿ. ಮಾಡಗೂಳಕರರ ಮರಾಠಿ ಭಾಷೆಯಲ್ಲಿಯ 'ಗೀತರಾಮಾಯಣ'ವು ಸಂಗೀತ ಪ್ರಪಂಚದಲ್ಲಿ ಇಂದು ಉನ್ನತ ಸ್ಥಾನವನ್ನು ಪಡೆದಿದೆ. ಗೀತ ರಾಮಾಯಣಕ್ಕೆ ಸಂಗೀತದ ಸತ್ವವನ್ನು, ಸೊಬಗನ್ನು ತಂದು ಕೊಟ್ಟವರು ಸುಧೀರ ಫಡಕೆಯವರು. ಗೀತ ರಾಮಾಯಣದ ಮಾಧುರ್ಯದಿಂದ ಇಂಗ್ಲಂಡ, ಅಮೇರಿಕಗಳಲ್ಲಿಯ ಶ್ರೋತೃಗಳನ್ನೂ ಸಂತೋಷಗೊಳಿಸಿ ಬಂದ ಶ್ರೇಯಸ್ಸು ಶ್ರೀ ಫಡಕೆಯವರದು. ಒಂದು ಉತ್ಕೃಷ್ಟ ಕೃತಿಯು ವ್ಯಾಪಕ ಲೋಕಪ್ರಿಯತೆ, ವಿಖ್ಯಾತಿಗಳನ್ನು ಪಡೆದರೆ, ಅದರ ಅನುವಾದ ಮಾತ್ರವಲ್ಲ, ಅನುಕರಣವೂ ಅನ್ಯ ಭಾಷೆಗಳಲ್ಲಿ ನಡೆಯುವದು. ಕೆಲವೊಂದು ಅನುಕರಣಗಳು ಮೂಲ ಕಾವ್ಯದ ಸತ್ವವಿಲ್ಲದೆ ಕಳಪೆಯಾಗುವವು. ಶ್ರೀ ಮಾಡಗೂಳಕರರ ಗೀತ ರಾಮಾಯಣವು ಭಾರತದ ಹಲವಾರು ಭಾಷೆಗಳಿಗೆ ಅನುವಾದ ಗೊಂಡಿದೆ, ಅನುಕರಣಕ್ಕೂ ಎಡೆಕೊಟ್ಟಿದೆ.

ಇಲ್ಲಿ ಒಂದು ಪ್ರಶ್ನೆ ಕೇಳಬರುವದು. ಗೀತ ರಾಮಾಯಣದಂಥ ಗೇಯಕಾವ್ಯದ ಲೋಕ ಪ್ರಿಯತೆಗೆ ಯಾವುದು ಕಾರಣ? ಕವಿಯ ಪ್ರತಿಭೆಯೊ? ಅದನ್ನು ಮಧುರ ಸಂಗೀತಕ್ಕೆ ಅಳವಡಿಸಿಕೊಂಡ ಗಮಕಿಯ ಸಂಗಿತದ ಪ್ರೌಢಿ ಮೆಯೊ? ಗಾಯಕನ ಕಂಠ ಮಾಧುರ್ಯವೊ? ಈ ವಾದವು ಅನಗತ್ಯವಾದುದು ಎಂದೆನಿಸುವದು. ರಸಿಕ ವೃಂದಕ್ಕೆ ಬೇಕಾಗಿರುವದು 'ವಾದ'ವಲ್ಲ, ರಸಿಕ ಹೃದಯ ಬಯಸುವದು 'ಸ್ವಾದ'-ಸವಿ. ಕನಕದಾಸರ ಮಾತನ್ನು ಇಲ್ಲಿ ಸ್ಮರಿಸಬಹುದು! 'ಸವಿಯು ಸಕ್ಕರೆಯೊಳಗೊ, ಸಕ್ಕರೆಯು ಸವಿಯೊ ಳಗೊ'... ಎಂಬಂತೆ, ಸಕ್ಕರೆ ಹಾಗೂ ಸವಿ ಇವೆ ರಡೂ ಅವಿಭಾಜ್ಯವಾದವು. ಕಾವ್ಯದ ರಸವಂತಿಕೆ ಯೊಡನೆ ಸಂಗೀತದ ಮಾಧುರ್ಯವು ಹಾಲು ಜೇನುಗಳಂತೆ ಏಕರಸವಾಗಿ ಬೆರೆತುಕೊಂಡಾಗ, ಕಾವ್ಯ ಹಾಗೂ ಸಂಗೀತಗಳ ಈ ಸಂಯೋಗ ಸ್ವರ್ಗೀಯವಾಗುವದು. ರಸಿಕರ ಮನಸೆಳೆಯುವ ಮೋದ, ಮೋಹಕತೆಗಳೆರಡೂ ಅದರಲ್ಲಿ ತಾವಾ ಗಿಯೇ ಒದಗುವವು. ಜಯದೇವ ಕವಿಯ 'ಗೀತ ಗೋವಿಂದ'ವು ಅಪರೂಪವಾದ ಸಂಯೋಗವನ್ನು ಪಡೆದುಕೊಂಡಿದೆ. ಅದರ ಬಲದಿಂದ ಬಂಗಾಲ ಮುಂತಾದ ಕೆಲವು ಪ್ರದೇಶಗಳಲ್ಲಿ ಈ ಗೀತ ಕಾವ್ಯದ ಲೋಕಪ್ರಿಯತೆಯು ಇಂದಿಗೂ ಅಚ್ಚಳಿ ಯದೆ ಉಳಿದುಕೊಂಡಿದೆ. 'ಗೀತ ರಾಮಾಯಣ' ದಂಥ ಇಂದಿನ ಗೇಯ ಕಾವ್ಯಗಳಿಗೆಲ್ಲ ಜಯ ದೇವನ ಈ ಅಮರ ಕೃತಿಯು ಮಾತೃಸ್ಥಾನ ದಲ್ಲಿದೆ, ಎಂಬುದನ್ನು ಮರೆಯುವಂತಿಲ್ಲ.

ಭಾರತದ ಐತಿಹಾಸಿಕ ಪ್ರಜ್ಞೆಯಲ್ಲಿ ಎದ್ದು ಕಾಣುವ ಒಂದು ನ್ಯೂನತೆ ಇದೆ. ನಮ್ಮ ಐತಿ ಹಾಸಿಕ ಪುರುಷರು ತಮ್ಮ ಸ್ವಂತದ ಜೀವನದ ಬಗ್ಗೆ ಹೇಳಿರುವದು ತೀರ ಕಡಿಮೆ. ಸಾಹಿತ್ಯ ಕ್ಷೇತ್ರದಲ್ಲಿಯಂತೂ ಈ ಕೊರತೆಯು ಇನ್ನೂ ಹೆಚ್ಚಾಗಿ ಕಂಡು ಬರುವದು ನಮ್ಮ ಕವಿಗಳ ಪರಿ ಚಯವನ್ನು ಅವರೇ ಪ್ರಾಸಂಗಿಕವಾಗಿ ಹೇಳಿರುವ ಕೆಲವು ಮಾತುಗಳಿಂದ, ಇಲ್ಲವೆ ಅನ್ಯ ಕವಿಗಳು ಅವರ ಪ್ರಶಂಸೆಯಲ್ಲಿ ಕಾಣಿಸಿದ ಕೆಲವು ಅಂಶ ಗಳಿಂದ ಈ ತುಣುಕುಮಿಣುಕುಗಳನ್ನು ಊಹೆ ಯಿಂದ ಜೋಡಿಸಿ ಮಾಡಿಕೊಳ್ಳಬೇಕಾಗುವದು. ಜಯದೇವ ಕವಿಯೂ ಈ ಮಾತಿಗೆ ಅಪವಾದವಾ ಗಿಲ್ಲ. ಜಯದೇವ ಕವಿಯ ಬಗ್ಗೆ ಹಲವಾರು ಐತಿಹ್ಯಗಳು, ದಂತಕಥೆಗಳು ಬಂಗಾಳದ ಜನ ಸಾಮಾನ್ಯದಲ್ಲಿ ಉಳಿದುಕೊಂಡಿವೆ.

ನಮ್ಮ ಪ್ರಾಚೀನ ಕವಿಗಳ ಚರಿತ್ರೆಯನ್ನು ಕಟ್ಟುವಾಗ ಇನ್ನೂ ಒಂದು ತೊಂದರೆ ಕಾಲ್ತೊಡ ಕಾಗುವದು. ಸರಿಸಮಾನ ಖ್ಯಾತಿಯ ಒಂದೇ ಹೆಸರಿನ ಇಬ್ಬರು ಮೂವರು ಕವಿಗಳಿರುವಲ್ಲಿ ಒಬ್ಬನನ್ನು ಇನ್ನೊಬ್ಬನಾಗಿ ತಿಳಿದುಕೊಂಡ ಸನ್ನಿವೇಶಗಳೂ ಉಂಟು. ಸಂಸ್ಕೃತಿ ಸಾಹಿತ್ಯ ದಲ್ಲಿ ಜನಾನುರಾಗ ಗಳಿಸಿದ 'ಜಯದೇವ' ಎಂಬ ಹೆಸರಿನ ಇಬ್ಬರಿರುವರು. 'ಪ್ರಸನ್ನ

ರಾಘವ ಎಂಬ ನಾಟಕ 'ಚಂದ್ರಾಲೋಕ' ಎಂಬ ಅಲಂಕಾರ ಗ್ರಂಥಗಳನ್ನು ರಚಿಸಿದವನೂ ಜಯದೇವ ಎಂಬವನೇ ಆಗಿದ್ದಾನೆ. ಆದರೆ ಆತನ ಕಾಲ ೧೩ನೆಯ ಶತಮಾನ,

'ಗೀತ ಗೋವಿಂದ'ದ ಜಯದೇವನು ಹುಟ್ಟಿ ಬೆಳೆದ ಪ್ರದೇಶವು ಯಾವುದೆಂಬ ವಿಷಯವೂ ವಿವಾದಕ್ಕೆ ಎಡೆಯಾಗಿದೆ. 'ಕಿಂದು ಬಿಲ್ವ'ವೆಂಬ ವಾರಿಧಿಗೆ ತಾನು 'ಚಂದ್ರನಾಗಿ' ಉದಯಿಸಿದೆನೆಂದು ಜಯದೇವನು ತನ್ನ ಊರನ್ನು ಹೇಳಿರುವನು. 'ಕಿಂದು ಬಿಲ್ವಕ್ಕೇನ ಕೇಂದುಬಿಲ್ವ', 'ತಿಂದು ಬಿಲ್ವ'ವೆಂಬ ಪಾಠಾಂತರಗಳಿವೆ. ಅಂತೂ ತಿಂದು ಬಿಲ್ವವೆಂಬುದು ಜಯದೇವನ ಜನ್ಮಸ್ಥಳ. ಆದರೆ ಕಿಂದು ಬಿಲ್ವವು ನಿಜವಾಗಿಯೂ ಯಾವುದೆಂಬ ಬಗ್ಗೆ ತೀವ್ರ ಮತ ಭೇದವಿದೆ. ಬಂಗಾಲ, ಓರಿಸ್ಸಾ ಹಾಗೂ ಮಿಥಿಲಾ ರಾಜ್ಯಗಳು ಜಯದೇವನು ತಮ್ಮವನೆಂದು ಆಗ್ರಹತಾಳಿವೆ. ಓರಿಸ್ಸಾದಲ್ಲಿಯ 'ಕೆಂದುಲೀ ಶಾಸನ'ವೆಂಬ ಚಿಕ್ಕ ಊರು, ಬಂಗಾಲದಲ್ಲಿ ಅಜಯ ನದೀ ತೀರದಲ್ಲಿರುವ 'ಕೆಂದುಲೀ' ಎಂಬುದೊಂದು ಗ್ರಾಮ ಈ ವಿವಾದಕ್ಕೆ ಎಡೆಮಾಡಿಕೊಟ್ಟಿವೆ. ಜಯದೇವ ಕವಿಯ ಅಮರವಾದ ಲೋಕಪ್ರಿಯತೆ, ಕವಿಯು ತಮ್ಮವನಾಗುವದರಿಂದ ಒದಗುವ ರಾಷ್ಟ್ರಪ್ರತಿಷ್ಠೆ ಈ ಸಂಗತಿಗಳೆ ಈ ವಿವಾದಕ್ಕೆ ನೆಲೆಯಾಗಿವೆ. ಆದರೆ ಜಯದೇವನ ಬಗ್ಗೆ ದೊರೆಯುವ ಅಧಿಕೃತ ಆಧಾರಗಳಿಂದ ಆತನು ಬಂಗಾಲದ ಕವಿಯೇ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ.

ಜಯದೇವನ ಪತ್ನಿಯ ಹೆಸರು ಪದ್ಮಾವತಿಯಾಗಿರಬಹುದೆಂದೂ ಒಂದು ಊಹೆಯಿದೆ. ಪದ್ಮಾವತಿಯು ತನ್ನ ಪತ್ನಿಯೆಂದು ಜಯದೇವನು ಪ್ರಕಟವಾಗಿ ಹೇಳಿರದಿದ್ದರೂ, ಆತನ 'ಗೀತ ಗೋವಿಂದ' ಕಾವ್ಯದಲ್ಲಿ ಪದ್ಮಾವತಿಯೆಂಬ ಹೆಸರು ಆಗಾಗ್ಗೆ ಬರುತ್ತದೆ. 'ಪದ್ಮಾವತಿ' ಎಂದರೆ ಕಮಲ ಸಂಭವಳಾದ ಲಕ್ಷ್ಮೀದೇವಿ. ಅವಳು ಕಾವ್ಯ ನಾಯಕನಾದ ಶ್ರೀ ಹರಿಯ ಪತ್ನಿ, ಎಂಬುದೂ ಒಂದು ಅರ್ಥ. ಆದರೆ ಜಯದೇವನು ತನ್ನ ಪತ್ನಿಯ ಮೇಲಿನ ಪ್ರೀತಿಯಿಂದ ಅವಳ ಹೆಸರನ್ನು ಪ್ರಚ್ಛನ್ನವಾಗಿ ಕಾವ್ಯ ಚಾತುರ್ಯದಿಂದ ಗೀತಗೋವಿಂದದಲ್ಲಿ ಗುಂಫಿಸಿರುವನೆಂದು ವಿಮರ್ಶಕರ ಅಭಿಪ್ರಾಯವಾಗಿದೆ.

ಜಯದೇವನ ಮದುವೆಯ ಆಖ್ಯಾಯಿಕೆಯೂ ಮನೋವೇಧಕವಾಗಿದೆ. ಜಯದೇವನ ಊರಿನಲ್ಲಿಯೆ ಧರ್ಮನಿಷ್ಠನಾದ ಒಬ್ಬ ಬಡ ಬ್ರಾಹ್ಮಣನಿದ್ದ. ಆತನ ಹೆಸರು 'ದೇವಶರ್ಮ'. ಈ ಬ್ರಾಹ್ಮಣನಿಗೆ ಸಂತಾನವಾಗಿರಲಿಲ್ಲ. ಸಂತಾನ ಪ್ರಾಪ್ತಿಗಾಗಿ ಆತನು ಶ್ರೀ ಒಡ್ಡೀ ಜಗನ್ನಾಥನಿಗೆ ಹರಕೆಹೊತ್ತನು. ಆತನ ಅನುಗ್ರಹದಿಂದ ಹುಟ್ಟಿದ ಮಗಳನ್ನು ದೇವನಿಗೇ ಅರ್ಪಿಸಿಬಿಟ್ಟನು. ದೇವನು ಪೂಜಾರಿಯ ಕನಸಿನಲ್ಲಿ ಕಾಣಿಸಿಕೊಂಡು 'ಜಗನ್ನಾಥನಾದ ನಾನೇ ಜಯದೇವನಾಗಿ ಬಂದಿರುವೆ. ಈ ಕುಮಾರಿಯಲ್ಲಿ ಲಕ್ಷ್ಮಿಯ ಅಂಶವಿದೆ. ಅವಳನ್ನು ಜಯದೇವನಿಗೆ ಧಾರೆಯೆರೆದು ಕೊಟ್ಟು ಬಿಡಬೇಕು' ಎಂದು ಹೇಳಿದನು. ಕಡು ಬಡವನಾದ ಜಯದೇವನಿಗೆ ಈ ಮದುವೆ ಮೊದಲು ಬೇಕಾಗಿರಲಿಲ್ಲ. ಆದರೆ ಅವಳು ಆತನಿಗೆ ದೇವದತ್ತಳೆಂದೂ, ತನ್ನನ್ನೇ ಮನಸಾ ಪತಿಯಾಗಿ ನಂಬಿದ ವಧುವನ್ನು ಆವನು ಮದುವೆಯಾದನು. 'ಗೀತ ಗೋವಿಂದ'ದಲ್ಲಿ ಕಾಣಬರುವ ಪದ್ಮಾವತಿಯು ಇವಳೇ ಎಂದು ಹೇಳುವದುಂಟು.

ಜಯದೇವ ಪದ್ಮಾವತಿಯರ ಪ್ರಣಯದ ಜೋಡು ಅನ್ಯೋನ್ಯವಾದುದು. ಅಸದೃಶವಾದುದು. ಪದ್ಮಾವತಿಯ ಪತಿ ನಿಷ್ಠೆ, ಪತಿಪರಾಯಣತೆ ಆದರ್ಶವಾದವು. ಪತಿಯ ವಿಯೋಗವಾದರೆ, ಒಂದರೆಗಳಿಗೆಯಾದರೂ ಜೀವಿಸಲಾರಳೆಂಬುದು ಅವಳ ದೃಢವಾದ ಶ್ರದ್ಧೆಯಾಗಿತ್ತು. ಆ ರಾಜ್ಯದ ದೊರೆಯು ತಮ್ಮ ತೀರಿಕೊಂಡ. ಆತನ ಮಡದಿ ಸತಿ ಹೋಗುವ ಸಿದ್ಧತೆ ನಡೆಸಿದಳು. ಪತಿ ವಿಯೋಗದ ತತ್‌ಕ್ಷಣವೆ ಪತ್ನಿಯ ಪ್ರಾಣ ಪಕ್ಷಿಯು ತಟ್ಟನೆ

ಹಾರಿಹೋಗಬೇಕೆಂಬುದು ಪದ್ಮಾವತಿಯ ಶ್ರದ್ಧೆ. ಆ ಮಡದಿಯು ಸತಿ ಹೋಗುವ ವಿಳಂಬಕ್ಕೆ ಅವಳು ಅಪಹಾಸ್ಯಮಾಡಿದಳು. ರಾಜನ ಪಟ್ಟದರಸಿ ಇದರಿಂದ ಕೆರಳಿದಳು. ಪದ್ಮಾವತಿಯ ಶ್ರದ್ಧೆಯನ್ನು ಒರೆಗೆ ಹಚ್ಚಿಯೆ ನೋಡಬೇಕೆಂದು ಅವಳು ಕಪಟ ಯುಕ್ತಿಯನ್ನು ಮಾಡಿದಳು. ಜಯದೇವನು ಪರವೂರಿಗೆ ಹೋದ ಒಂದು ದಿವಸ. ಆತನು ಮರಣ ಹೊಂದಿದನೆಂಬ ಸುಳ್ಳು ಸುದ್ದಿಯನ್ನು ಅವಳು ಹರಡಿದಳು. ಪತಿಯ ಮರಣದ ಸುದ್ದಿಯು ಕಿವಿಗೆ ಮುಟ್ಟಿತೆನ್ನುವಂತೆಯೆ ಪದ್ಮಾವತಿಯು ಅಸುನೀಗಿದಳು, ನೆಲಕ್ಕುರುಳಿದಳು. ತನ್ನ ಕಪಟ ಚೇಷ್ಟೆಯು ಈ ದಾರುಣ ಕೊನೆಯನ್ನು ಕಂಡು ರಾಣಿ ಹೌಹಾರಿದಳು. ಸ್ತ್ರೀ ಹತ್ಯೆ ಘಟಿಸಿತೆಂದು ರಾಜನು ಮರುಗಿದನು. ಜಯದೇವನನ್ನು ಕೂಡಲೇ ಕರೆತರಲಾಯಿತು. ಆತನು ಶ್ರೀ ಹರಿಗೆ ಪ್ರಾರ್ಥಿಸಿಕೊಂಡು 'ಪದ್ಮಾವತಿ' ಎಂದು ಕೂಗಲು ನಿದ್ರೆಯಿಂದ ಎಚ್ಚತ್ತಂತೆ ಅವಳು ಎದ್ದು ಕುಳಿತಳು. ಪದ್ಮಾವತಿಯ ಪತಿನಿಷ್ಠೆಯ ಬಗ್ಗೆ ಇದೊಂದು ದಂತ ಕಥೆ.

ಜಯದೇವ ಪದ್ಮಾವತಿಯರ ಪರಿಣಯದ ಬಗ್ಗೆ ಇನ್ನೊಂದು ದಂತ ಕಥೆ. ಪದ್ಮಾವತಿಯು ದೇವಪೂಜೆಯ ಕಾಲಕ್ಕೆ ಒಂದು ದೇವಾಲಯದಲ್ಲಿ ನೃತ್ಯ ಸೇವೆಯನ್ನು ಸಲ್ಲಿಸುವ ಒಬ್ಬ ನರ್ತಕಿಯಾಗಿದ್ದಳು. ಜಯದೇವನು ಅವಳ ನೃತ್ಯಕ್ಕೆ ಸಂಗೀತದ ಸಾಹಚರ್ಯವನ್ನು ನೀಡುವ ಜೊತೆಗಾರ. ಇಬ್ಬರೂ ಭಕ್ತಿ ಭಾವದಿಂದ ಸಂಗೀತ–ನೃತ್ಯಗಳ ಸಂಯುಕ್ತ ಸೇವೆಯನ್ನು ಸಲ್ಲಿಸುತ್ತಿದ್ದರೆಂಬುದು ಒಂದು ಕಥೆಯಾಗಿದೆ. 'ಪದ್ಮಾವತೀ ಚರಣ ಚಾರಣ ಚಕ್ರವರ್ತಿ'–ಯೆಂಬ ಗೀತ ಗೋವಿಂದದಲ್ಲಿಯ ವರ್ಣನೆ ಜಯದೇವನಿಗೇ ಸಂಬಂಧಿಸಿರುವದೆಂದು ಕೆಲವರ ಅಭಿಪ್ರಾಯ.

ಜಯದೇವ ಕವಿಯ ಕಾಲ ಇನ್ನೂ ನಿರ್ಣೀತವಾಗಿಲ್ಲ. ಕೆಲವೊಂದು ನಂಬಲರ್ಹವಾದ ಆಧಾರಗಳಿಂದ ಜಯದೇವನ ಕಾಲವು ಹನ್ನೆರಡೇ ಶತಮಾನದ ಆದಿ ಭಾಗವಾಗಿರ-ವದೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಒಂದೆರಡು ಮುಖ್ಯವಾದ ಆಧಾರಗಳನ್ನು ಇಲ್ಲಿ ಹೇಳಬಹುದು: ಗೋವರ್ಧನ, ಚರಣ, ಉಮಾಪತಿಧರ, ಮುಂತಾದ ಕೆಲವು ಸಮಕಾಲೀನ ಕವಿಗಳ ಹೆಸರು ಗಳನ್ನು ತನ್ನ ಗುಣಾನುವಾದದಲ್ಲಿ ಜಯದೇವನು ಹೇಳಿರುವನು. ಹನ್ನೆರಡನೇ ಶತಮಾನದಲ್ಲಿ ಬಂಗಾಲದಲ್ಲಿ ಆಳಿ ಹೋದ ಲಕ್ಷ್ಮಣಸೇನನೆಂಬ ರಾಜನು ತನ್ನ ಒಡ್ಡೋಲಗದ ಗೋಡೆಯ ಮೇಲೆ ತನ್ನ ಆಸ್ಥಾನ ಕವಿಗಳ ಹೆಸರನ್ನು ಕೆತ್ತಿಸಿರುವನು. ಈ ಕವಿಗಳನ್ನೇ ತನ್ನ ಕಾವ್ಯದಲ್ಲಿ ಜಯದೇವನು ಉಲ್ಲೇಖಿಸಿರುವನು. ಇದೊಂದು ಪ್ರಮಾಣ. ಹನ್ನೆರಡನೇ ಶತಕದ ಆದಿಯಲ್ಲಿ ರಚಿತವಾದ 'ಸದುಕ್ತಿ ಕರ್ಣಾಮೃತ' ಎಂಬ ಸಂಗ್ರಹ ಕಾವ್ಯದಲ್ಲಿ ಜಯದೇವ ರಚಿತ ಪದ್ಯಗಳನ್ನು ತೆಗೆದುಕೊಂಡಿದೆ. ಇದರಂತೆಯೆ ಕ್ರಿ.ಶ. ೧೨೯೬ ರ ಶಾರ್ಙ್ಗಧರನ ಶಾಸನದಲ್ಲಿ ಗೀತಗೋವಿಂದದಲ್ಲಿಯ ದಶಾವತಾರದ ಸ್ತುತಿಯನ್ನೇ ಮಂಗಳ ಶ್ಲೋಕವಾಗಿ ತೆಗೆದುಕೊಂಡಿದೆ. ಇವೇ ಮುಂತಾದ ಆಧಾರಗಳಿಂದ ಜಯದೇವ ಕವಿಯ ಕಾಲವು ಸುಮಾರಾಗಿ ಹನ್ನೆರಡನೆಯ ಶತಮಾನವಾಗಿರುವದೆಂದು ಸರ್ವ ಸಮ್ಮತ ಅಭಿಪ್ರಾಯವಾಗಿದೆ.

ಜಯದೇವನ ಗೀತಗೋವಿಂದ ಒಂದು ಖಂಡ ಕಾವ್ಯ. ಮಾನವ ಭಾವನೆಗಳೊಡನೆ ಸಮರಸವಾಗಿರುವ ಸೃಷ್ಟಿ ಸೌಂದರ್ಯದ ವಿವಿಧ ಮುಖಗಳನ್ನು, ಇಲ್ಲವೆ ಕೋಮಲ ಭಾವನೆಯಾದ ಪ್ರಣಯದ ಅತಿ ಸೂಕ್ಷ್ಮ ಪದರುಗಳನ್ನು ಕಲಾತ್ಮಕವಾಗಿ ಚಿತ್ರಿಸುವದು ಖಂಡ ಕಾವ್ಯದ ವಸ್ತು–ವಿಷಯವಾಗಿದೆ. ಇವೆರಡರಲ್ಲಿ ಕಾಲಿದಾಸನ 'ಋತು ಸಂಹಾರ'ದಲ್ಲಿ ನಿಸರ್ಗವೇ ಕಾವ್ಯಕ್ಕೆ ಸ್ವತಂತ್ರ ಹಾಗೂ ಪ್ರಧಾನ ವಸ್ತುವಾಗಿದೆ. ಆತನ 'ಮೇಘ ದೂತ' ವೆಂಬ

ಖಂಡಕಾವ್ಯದಲ್ಲಿ ಕಲಾತ್ಮಕ ಪೀತಾಂಬರದಲ್ಲಿ ನೇಯ್ದಂತೆ, ನಿಸರ್ಗ ಹಾಗೂ ಪ್ರಣಯಗಳು ಹಾಸು ಹೊಕ್ಕಾಗಿ, ಸರಿಸಮಾನವಾಗಿ ಬೆರತು ಕೊಂಡಿವೆ. ಗೀತಗೋವಿಂದದಲ್ಲಿ ಕವಿಯು ಈ ವಿಧಾನವನ್ನೇ ಅನುಸರಿಸಿದರೂ, ವಿರಹ–ಮಿಲನಗಳೆಂಬ ಪ್ರಣಯದ ಎರಡು ಮುಖಗಳ ಪ್ರದರ್ಶನವೇ ಇಲ್ಲಿ ಪ್ರಧಾನ ವಸ್ತುವಾಗಿದೆ. ಶೃಂಗಾರವೇ ಸ್ಥಾಯೀ ಭಾವವಾಗಿದೆ.

ಪ್ರಣಯದ ಬಗೆಬಗೆಯ ರೂಪ ಹಾಗೂ ಚೇಷ್ಟೆಗಳಿಗೆ ನಿಸರ್ಗವು ಒಂದು ಸಂಕೇತವಾಗಿದೆ. ಅವುಗಳ ಆವಿರ್ಭಾವಕ್ಕೆ ನಿಸರ್ಗವು ಸಮುಚಿತವಾದ ಸನ್ನಿವೇಶಗಳನ್ನು ಒದಗಿಸುತ್ತದೆ. ರಮಣೀಯವಾದ ಚಿತ್ರಕ್ಕೆ ರಮಣೀಯವಾದ ಹಿನ್ನಲೆ ಇರುವಂತೆ, ಗೀತ ಗೋವಿಂದದಲ್ಲಿ ನಿಸರ್ಗಕ್ಕೆ ಸ್ವತಂತ್ರ ಸ್ಥಾನವಿಲ್ಲ. ಇಲ್ಲಿ ಬರುವ ನಿಸರ್ಗ ದೃಶ್ಯಗಳಿಗೂ. ವ್ಯಕ್ತವಾಗುವ ಮಾನವ ಭಾವನೆಗಳಿಗೂ ತಾಳ ಮೇಳವಿಲ್ಲ. ಈ ಕಾವ್ಯದಲ್ಲಿ ನಡೆಯುವ ಪ್ರಣಯ ಲೀಲೆಗಳ ನಾಟಕಕ್ಕೆ ನಿಗಸರ್ಗವು ಹಿಂದೆ ಇಳಿ ಬಿಟ್ಟ ಬಣ್ಣ ಬಣ್ಣದ ಒಂದು ಪಡದೆಯಂತಿದೆ. ನಿಸರ್ಗಕ್ಕಿರುವ ಈ ಗೌಣ ಸ್ಥಾನವು ಗೀತ ಗೋವಿಂದಕ್ಕೆ ಒಂದು ನ್ಯೂನತೆಯಾಗಿ ಪರಿಣಮಿಸಿಲ್ಲ. ಜಯದೇವನಿಗೆ ಅಭೀಪ್ಸಿತವಾದ ಪ್ರಣಯ ವಸ್ತುವಿನಲ್ಲಿಯೆ ಚಿತ್ತವು ಲೀನವಾಗುವಂತೆ ಇದರಿಂದ ಸಹಾಯವಾಗುತ್ತದೆ. ರಾಗ ರತಿಯ ಮಧುಮಧುರ ವ್ಯಾಪ್ಯಾನ್ನಗಳನ್ನು ನೀಡಿ ತನ್ನ ಕಾವ್ಯದಲ್ಲಿ ರಸಿಕರನ್ನು ತಲ್ಲೀನಗೊಳಿಸುವಲ್ಲಿ ಜಯದೇವ ಜಯಶಾಲಿಯಾಗಿದ್ದಾನೆ.

ಮೇಘ ದೂತದಲ್ಲಿ ಯಕ್ಷನ ವಿರಹ ವ್ಯಥೆ ಓದುಗರ ಚಿತ್ತವನ್ನು ವ್ಯಾಕುಲಗೊಳಿಸುವದು. ಗೀತಗೋವಿಂದದಲ್ಲಿ ವಿರಹವಿದೆ, ಆದರೆ ಅದು ವ್ಯಾಕುಲಗೊಳಿಸುವದಿಲ್ಲ. ಅದು ತಾತ್ಕಾಲಿಕವಾದುದು ಪರಿಹಾರ ಭಾವನೆಗಳ ಅನುಭವದಲ್ಲಿ ವೈಮರೆತು, ಅವುಗಳಿಗೆಲ್ಲ ಮೂಲಭಾವನೆಯಾಗಿರುವ ಪ್ರಣಯಭಾವದಲ್ಲಿಯೆ ಮನಸು ರಮಿಸುವದು. ಭೀತಿ, ಅಸೂಯೆ ಮುಂತಾದ ವಿಕಾರಗಳು ಆಳವಾದ ಪ್ರಣಯ ಪ್ರವಾಹದ ಮೇಲ್ಮೈಯಲ್ಲಿ ತೇಲುವ ತೆಪ್ಪವಿದ್ದಂತೆ ಮಾತ್ರ. ಪ್ರಬಲವಾಗಿ ತಾನೇ ಮುನ್ನುಗ್ಗುವ ಈ ಪ್ರೇಮ ಪ್ರವಾಹವು, ವಿಯೋಗದ ವ್ಯಥೆಯನ್ನು ಹಿಮ್ಮೆಟ್ಟಿ ಮಧುರ ಮಿಲನದ ನಿಶ್ಚಿತ ಮಟ್ಟಿಗೇನೆ ಸಂತೋಷಕರ ಪ್ರೀತಿಸಂಗಮಕ್ಕೇನೆ ರಸಿಕರನ್ನು ನೇರವಾಗಿ ಮುಟ್ಟಿಸುವದು. ಈ ಪ್ರೀತಿ ಸಂಗಮದ ಮಧುರವಾದ ಸಂಗೀತರೂಪಕವೇ ಗೀತ ಗೋವಿಂದ.

ಗೀತಗೋವಿಂದದಲ್ಲಿ ಜಯದೇವ ಕವಿಯು ಅಭಿವ್ಯಕ್ತಗೊಳಿಸಿದ ಶೃಂಗಾರದ ಭಾವನೆಗೆ ರಾಧಾಕೃಷ್ಣರ ಪ್ರಣಯ ಲೀಲೆಗಳಿಗೆ ಒಂದು, ಗೂಢವಾದ ಆಧ್ಯಾತ್ಮಿಕ ತಳಹದಿ ಇದೆ. ಭಗವಂತನನ್ನು ಸುಲಭವಾಗಿ ಒಲಿಸಿಕೊಳ್ಳುವ ಭಕ್ತಿ ಭಾವನೆ ಸರಸ್ವತೀ ನದಿಯಂತೆ ಗುಪ್ತವಾಗಿ ಹರಿದು ಬಂದು ಪ್ರಣಯ, ಹಾಗೂ ಶೃಂಗಾರಗಳೊಡನೆ ತ್ರಿವೇಣಿ ಸಂಗಮವಾಗುವದು.

ಕೆಲವು ಶರಣ ಶರಣೆಯರ ಸ್ಫೂರ್ತ ವಚನಗಳಲ್ಲಿ ಕಾಣುವ 'ಸತಿ ಪತಿಭಾವ'ವೆ ರಾಧಾ ಕೃಷ್ಣರ ವಿರಹಮಿಲನಗಳ ರೂಪಕಗಳಿಂದ ಗೀತ ಗೋವಿಂದದ ಗೀತಗಳಲ್ಲಿ ಹುದುಗಿಕೊಂಡಿದೆ. ಭಕ್ತಿ, ಸತಿ, ಈಶ ಪತಿ. ಈಶನ ದರ್ಶನ ಮಿಲನಗಳಿಗಾಗಿ ಉಂಟಾಗುವ ಹಂಬಲವೆ, ಆರ್ತ ಭಾವನೆಯೆ ಭಕ್ತಿ. ಪ್ರಾಕೃತಿಕವಾದ, ಶಾರೀರಿಕವಾದ ಭಾವಗಳಿಗೆ, ಸಂಬಂಧಗಳಿಗೆ ಅಪ್ರಾಕೃತವಾದ ಆಧ್ಯಾತ್ಮಿಕವಾದ ವೇಷಕಟ್ಟಿ ಲೌಕಿಕ ಮಾತುಗಳಲ್ಲಿ ಹೇಳುವುದೇ ಈ ಸತಿ ಪತಿ ಭಾವ. ದೇವನಿಂದ ದೂರವಾಗಿರುವದೆ ಭಕ್ತನಿಗೆ ವಿಯೋಗ ದೇವನನ್ನು ಪಡೆಯುವದೆ ಮಿಲನ.

ರಾಧಾ ಕೃಷ್ಣರ ವಿರಹ ಮಿಲನಗಳೆ ಈ ಸತಿ–ಪತಿ ಭಾವಕ್ಕೆ ಪ್ರೇರಕ, ಆದರ್ಶ. ಈ ಬಗೆಯ ಸತಿ–ಪತಿ ಭಾವಕ್ಕೆ 'ರಾಧಾ ಭಕ್ತಿ' ಅಥವಾ 'ಮಧುರ ಭಕ್ತಿ' ಯೆಂದು ಹೇಳ

ವರು. ಮಧುರ ಭಕ್ತಿಯ ಆಚರಣೆಯಲ್ಲಿ ಕೃಷ್ಣ ಭಕ್ತಳಾದ ರಾಧೆಯಲ್ಲಿ ತದ್ರೂಪರಾದ ಶ್ರೀ ರಾಮಕೃಷ್ಣ ಪರಮಹಂಸರ ಸ್ತನಗಳಲ್ಲಿ ಸ್ತ್ರೀಸಹಜವಾದ ಹಾಲು ಸುರಿಯುತ್ತಿತ್ತಂತೆ. ಪ್ರತಿ ಬಿಂಬ ರೂಪನಾದ ಜೀವನು ತನಗೆ ಬಿಂಬ ರೂಪನಾಗಿರುವ ಪರಾತ್ಮನ ದರ್ಶನ ಸಮಾಗಮಗಳಿಗಾಗಿ ಮಾಡುವ ಸಮಗ್ರ ಸಮರ್ಪಣೆಯೆ ಮಧುರ–ರಾಧಾ ಭಕ್ತಿ. ಈ ಮಧುರ ಭಕ್ತಿಯ ವಿಲಾಸಕ್ಕೆ ಲೌಕಿಕ ಪ್ರಣಯ ಶೃಂಗಾರಗಳ ರೂಪ ತೊಡಿಸಿ ಕಾವ್ಯದ ಪ್ರತಿಮೆ ಪ್ರತೀತಿಗಳಿಂದ ಸಂಗೀತದ ಸಂಯೋಜನೆಯಿಂದ, ಮಧುರ ಭಕ್ತಿಯನ್ನು ನಿರೂಪಿಸಿದ ಜಯದೇವನ ಪ್ರತಿಭೆ ಅಪ್ರತಿಮವಾದುದು. ಜಯದೇವನ ಈ ಪ್ರಬಂಧದಲ್ಲಿ ಇನ್ನೊಂದು ಚಿತ್ತಾಕರ್ಷಕ ಅಂಶವಿದೆ. ಕ್ರೋಧ, ಭೀತಿ, ಆಶೆ–ಆತುರಗಳ ಸನ್ನಿವೇಶಗಳಲ್ಲಿ ಇಲ್ಲಿಯ ಪಾತ್ರಗಳಾದ ರಾಧೆ ಕೃಷ್ಣ ಹಾಗೂ ಗೋಪಿಯರು ಆಡುವ ಮಾತುಗಳು ತುಂಬಾ ನಾಟಕೀಯವಾಗಿವೆ; ನಿತ್ಯವೂ ಕೇಳಬರುವ ನುಡಿಗಳಾಗಿವೆ. ಅವುಗಳಿಂದ ಈ ಗೀತಗಳು ನಾಟ್ಯದ ಮನೋಹಾರಿ ಮೈಮಾಟವನ್ನು ತಾಳಿವೆ.

ಜಯದೇವ ಕವಿಗೆ ತನ್ನ ಈ ಕಾವ್ಯದ ಸ್ವರೂಪ ಹಾಗೂ ಉದ್ದೇಶಗಳ ಬಗ್ಗೆ ಅರಿವು ಚನ್ನಾಗಿ ಇರುವುದು.

'ಯದಿ ಹರಿಸ್ಮರಣೆ ಸರ ಮನೊ ।
ಯದಿ ವಿಲಾಸ ಕಲಾಸುಕುತೂಹಲಮ್॥'

—ಶ್ರೀಹರಿಯ ಸ್ಮರಣೆಯಲ್ಲಿ ಮನಸ್ಸು ರಮಿಸುತ್ತಿದ್ದರೆ, ಎಂಬುದು ಒಂದು ಉದ್ದೇಶ. ಶೃಂಗಾರದ ಲೀಲೆಗಳ ಬಗ್ಗೆ ಕುತೂಹಲವಿದ್ದರೆ, ಎಂಬುದು ಇನ್ನೊಂದು ಉದ್ದೇಶ. ಇವೆರಡೂ ಉದ್ದೇಶಗಳನ್ನು ತೃಪ್ತಿಪಡಿಸಲು 'ಶೃಣು ತದಾ ಜಯದೇವ ಸರಸ್ವತೀಮ್' ಜಯದೇವ ಕವಿಯ ಮಧುರ, ಕೋಮಲ ವಾಣಿಯನ್ನು ಕೇಳಬೇಕು. –ಎಂದು ಆತ ಆತ್ಮವಿಶ್ವಾಸದಿಂದ ಹೇಳುವನು.

ಈ ರೀತಿಯಲ್ಲಿ ಗೀತ ಗೋವಿಂದವು ವಿಶಿಷ್ಟ ಬಗೆಯ ಭಕ್ತಿಕಾವ್ಯವೆಂದು ಹೆಸರಾಗಿದೆ. ಖಂಡ ಕಾವ್ಯಕ್ಕೆ ಅಗತ್ಯವಿರುವ ಒಂದು ಚಿಕ್ಕ ಕಥೆಯು ಈ ಕಾವ್ಯದ ಗೀತಗಳಿಗೆ ಏಕಸೂತ್ರತೆಯನ್ನು ತಂದು ಕೊಡುತ್ತದೆ. ಹರಿಯ ಕ್ಷಣಿಕ ಅಗಲುವಿಕೆಯಿಂದ ರಾಧೆಯು ವ್ಯಾಕುಲಳಾಗುವಳು. ವಿಯೋಗದಿಂದ ಜನಿಸುವ ವಿವಿಧ ಮನೋವಿಕಾರಗಳನ್ನು, ಭೀತಿ, ಕೋಪ, ಅಸೂಯೆ ಮುಂತಾದವುಗಳನ್ನು ಅವಳು ಅನುಭವಿಸುವಳು. ಇತ್ತ ಕಡೆಗೆ ಶ್ರೀಹರಿಯೂ ರಾಧೆಯ ಅಗಲುವಿಕೆಯಿಂದ ಅವಳಷ್ಟೇ ಚಡಪಡಿಸುತ್ತಾನೆ. ಕೊನೆಗೆ ರಾಧಾ ಕೃಷ್ಣರ ಪುನರ್ಮಿಲನವಾಗುತ್ತದೆ.

ಈ ಚಿಕ್ಕ ಕಥೆ. ಈ ಖಂಡಕಾವ್ಯಕ್ಕೆ ಆಧಾರವಾಗಿದೆ. ಹನ್ನೆರಡು ಸಣ್ಣ ಸಣ್ಣ ಸ್ವರ್ಗಗಳಲ್ಲಿ ಜಯದೇವನು ಈ ಕಥೆಯನ್ನು ವಿಸ್ತರಿಸಿ, ಮಹಾಕಾವ್ಯದ ಪ್ರತಿಷ್ಠೆಯನ್ನು ಅದಕ್ಕೆ ತಂದುಕೊಟ್ಟಿರುವನು ಗೀತಗೋವಿಂದವು ಪದ್ಯ ಹಾಗೂ ಗೀತಗಳ ಸಮ್ಮಿಶ್ರ ಕಾವ್ಯ. ಪ್ರಬಂಧವೆಂದು ಕವಿಯು ಅದನ್ನು ಕರೆದಿರುವನು. ಅದರಲ್ಲಿ ಇಪ್ಪತ್ತು ನಾಲ್ಕು ಪ್ರಬಂಧಗಳಿವೆ. ಭಾವಗಳ ಅಭಿವ್ಯಕ್ತಿಗಾಗಿ ಗೀತಗಳು ಮಾಧ್ಯಮ. ಘಟನೆಗಳ ನಿರೂಪಣೆಗಾಗಿ ಪದ್ಯಗಳು ಸಾಧನವಾಗಿವೆ. ಅಭಿಜಾತ ಕಾವ್ಯಗಳಲ್ಲಿ ಬರುವ ಛಂದೋರೂಪಗಳನ್ನೇ ಕವಿಯು ಬಳಸಿರುವನು. ತನ್ನ ಗೀತಗಳಿಗೆ ಕವಿಯು ರಾಗ ತಾಳಗಳನ್ನು ಸೂಚಿಸಿರುವನು. ಆತನು ಕೊಟ್ಟ ಕೆಲವು ರಾಗಗಳು ಇಂದು ಬಳಕೆಯಲ್ಲಿ ಇರುವದಿಲ್ಲ.

ಸಾಹಿತ್ಯದ ಸ್ವರೂಪದಲ್ಲಿ, ಗೀತ ಗೋವಿಂದವು ಮಹಾಕಾವ್ಯ, ಖಂಡ ಕಾವ್ಯ ಹಾಗೂ ನಾಟ್ಯ– ಈ ಮೂರು ಬಗೆಯ ಅಂದ ಚೆಂದಗಳನ್ನು ಅತಿ ಮನೋಜ್ಞವಾಗಿ ಸುಸಂಗತವಾಗಿ ಬಳಸಿಕೊಂಡಿದೆ. ಅದು ನಾಟ್ಯರೂಪ ಗೀತ ಕಾವ್ಯ ಇಲ್ಲವೆ ಕಾವ್ಯ ಪ್ರಧಾನನಾಟ್ಯವನ್ನು ಹಚ್ಚಾಗಿ ಹೋಲುತ್ತದೆ. ಪದ್ಯ ಹಾಗೂ ಸಂಗೀತಗಳಿಂದ ಯುಕ್ತವಾಗಿರುವ ಗ್ರಾಮೀಣ

ಯಕ್ಷಗಾನ(ಬಯಲಾಟ)ದ ಕಾವ್ಯ, ಸಂಗೀತ ನೃತ್ಯ ಹಾಗೂ ನಾಟ್ಯ– ಇವೆಲ್ಲವುಗಳನ್ನೂ ಸುಮಧುರವಾಗಿ ಸಮನ್ವಯಿಸಿಕೊಂಡ ಗೀತಗೋವಿಂದವು ತನ್ನದೇ ಆಗಿರುವ ವೈಶಿಷ್ಟ್ಯವನ್ನು ಪಡೆದುಕೊಂಡಿದೆ, ಉಳಿಸಿಕೊಂಡಿದೆ.

ಗೀತಗೋವಿಂದದ ಪರಿಚಯವಿಲ್ಲದವರಿಗೆ ಅಭಿರುಚಿಯನ್ನು ಹುಟ್ಟಿಸಲು ಅದರಲ್ಲಿ ನಿರೂಪಿಸಲ್ಪಟ್ಟಿರುವ ಪಾತ್ರಗಳ ಸ್ವಭಾವ ಚಿತ್ರವನ್ನು ಇಲ್ಲಿ ತೋರಿಸಬಹುದು. ಗೀತಗೋವಿಂದದಲ್ಲಿ ಬರುವ ವ್ಯಕ್ತಿ ಚಿತ್ರವು ಆತ್ಮೀಯವೆನಿಸುವಷ್ಟು ಸ್ವಾಭಾವಿಕವಾಗಿದೆ. ವಿವಿಧ ಭಾವಗಳ ಬಂಧುರವಾದ ಅಭಿವ್ಯಕ್ತಿಯು ಹೃದಯ ಸ್ಪರ್ಶಿಯಾಗಿದೆ ಈ ನಾಟ್ಯಕಾವ್ಯದಲ್ಲಿ.

ಶ್ರೀ ಕೃಷ್ಣ ಹಾಗೂ ರಾಧೆ ಪ್ರಿಯತಮ ಪ್ರೇಯಸಿಯರಾಗಿ ಪ್ರಧಾನ ಪಾತ್ರಗಳು. ಪ್ರಣಯ ನಾಟಕದಲ್ಲಿ ದೂತಿ, ಸಖಿಯರು ಉಪಪಾತ್ರಗಳು. ಇಲ್ಲಿ ಚಿತ್ರಿತರಾದ ಸಖೀ ದೂತಿಯರು ಕೂಡ ಒಳ್ಳೇ ಜಾಣರು. ನಾಯಕ ನಾಯಕಿಯರ ಮನೋಧರ್ಮವನ್ನು ಚೆನ್ನಾಗಿ ಬಲ್ಲವರು. ಅವರ ಬಗ್ಗೆ ಸಹಾನುಭೂತಿಯುಳ್ಳವರು. ಉಂಟಾದ ತಪ್ಪು ತಿಳುವಳಿಕೆಯನ್ನು ತೆಗೆದು ಹಾಕಿ, ಆಶೆ ಭರವಸೆಗಳನ್ನು ಉಂಟು ಮಾಡಬಲ್ಲ ಮಾತಿನ ಚತುರರು. ಸ್ತ್ರೀ ಸಹಜವಾದ ನಾಚಿಕೆಯನ್ನು ಭೀತಿ ಸಂಕೋಚಗಳನ್ನು ನಿವಾರಿಸಿ, ಮಿಲನದ ಸಾಹಸಕ್ಕೆ–ಅಭಿಸಾರಕ್ಕೆ ಧೈರ್ಯವನ್ನು ನೀಡುವವರು. ದೇವಪರಣ್ಯನಾದ ಶ್ರೀ ಕೃಷ್ಣ ಇಲ್ಲಿ ಪ್ರೇಮಿ, ಪ್ರಿಯತಮ. ತುಂಬಾ ರಸಿಕ. ಲೀಲಾಮಾನುಷನಾಗಿ ಮಾನವೀಯ ಭಾವನೆಗಳನ್ನು ವ್ಯಕ್ತಗೊಳಿಸಿದರೂ, ಲೌಕಿಕ ಪ್ರೇಮಿಗಳಂತೆ ನಟಿಸಿದರೂ, ಕವಿಯು ತನ್ನ ಕೃಷ್ಣ ಭಕ್ತಿಗೆ ಕಿಂಚಿತ್ತೂ ಕುಂದು ಬಾರದಂತೆ ಶ್ರೀ ಕೃಷ್ಣನ ಪಾತ್ರ ರಚನೆಯಲ್ಲಿ ತೋರಿಸಿರುವ ಕೌಶಲವು ಪ್ರೇಕ್ಷಣೀಯವಾಗಿದೆ. ರಾಧೆಯ ಪಾತ್ರವೂ ಇಷ್ಟೇ ಚಿತ್ರಿತವಾಗಿದೆ. ಮನೋಜ್ಞವಾಗಿದೆ. ಪ್ರೇಯಸಿಯಾದ ರಾಧೆಯು ಶ್ರೀ ಕೃಷ್ಣನಿಗೆ ಸರ್ವಾತ್ಮನಾ ಶರಣು ಹೋದವಳು, ಸರ್ವಸಮರ್ಪಣ ಮಾಡಿದ ಪರಮ ಭಕ್ತೆ. ಲೌಕಿಕರಂತೆ ಚಿತ್ರಿಸಿದ ಅವಳ ವಿರಹ ವ್ಯಥೆ ಆರ್ತ ಭಕ್ತನ ಹೃದಯದ ಹಂಬಲ. ಅವಳ ಮಿಲನ ಕೈವಲ್ಯದಲ್ಲಿಯ ಅಲೌಕಿಕವಾದ ಆತ್ಮಾನಂದ. ಲೀಲಾಮಾನುಷ ಮಾಧವನ ದೇವತ್ವದ ಪ್ರಜ್ಞೆಯಿದ್ದರೂ, ಆತನ ಮುಗ್ಧ ಮನೋಹರರೂಪಕೆ ಆತನ ಅಂಜಿಕ್ಯವಾದ ಮಾಯೆಗೆ ಮನಸೋತ ಗೋಪಿಯರು ಶ್ರೀ ಕೃಷ್ಣನ ದೇವತ್ವವನ್ನು ಮರೆತು ಬಿಡುವರು.

ವಿರಹವು ಮಿಲನದಲ್ಲಿ ಮುಕ್ತಾಯವಾಗಬೇಕಲ್ಲವೆ? ಒಂದರಗಳಿಗೆಯಾದರೂ ತನ್ನನ್ನು ಶ್ರೀ ಕೃಷ್ಣನು ಬಿಟ್ಟಿರಲಾರನೆಂಬುದು ರಾಧೆಗೆ ಗೊತ್ತು; ರಾಧೆಯನ್ನು ಆಗಲಿ ತಾನಿರಲಾರೆನೆಂಬುದು ಶ್ರೀಕೃಷ್ಣನಿಗೂ ಗೊತ್ತು. ಶ್ರೀ ಲಕ್ಷ್ಮೀ




"ನಾನು ನಿನಗೆ ತೆಂಗಿನಕಾಯಿ ಒಡೀತೀನಿ ಅಂದಿದ್ದು ನಿಜ..., ಆದ್ರೆ ಕಾಯಿ ರೇಟು ಜಾಸ್ತಿಯಾದ್ರಿಂದ ಕಡ್ಲೆ ಕಾಯನ್ನೇ ಒಡೀತಿದೀನಿ...!!"

ದೇವಿಯು ಶ್ರೀಹರಿಗೆ 'ನಿತ್ಯಾವಿಯೋಗಿನೀ' ಯಲ್ಲವೇ ? ಆದರೆ ಲೋಕಾನುಕರಣದಲ್ಲಿ ಉತ್ಕಟ ಪ್ರೇಮಿಗಳಿಗೆ ವಿರಹದ ಬಂದರಗಳಿಗೆಯೂ ಯುಗ ಯುಗವಾಗಿ ತೋರುವದು. ಹೀಗೆ ಅಗಲಿದ ಪ್ರಣಯಿಗಳ ಮಿಲನವನ್ನು ಮತ್ತೆ ಸಾಧಿಸುವವರು ದೂತಿಯರು, ಸಖಿಗಳು. ಈ ಕಾರ್ಯದಲ್ಲಿ ಅವರೆಲ್ಲರ ಪ್ರತಿಭೆ, ಸ್ವಭಾವ ಪರಿಚಯ ಮಾತಿನ ಜಾಣ್ಮೆ, ಕಾರ್ಯ ಕುಶಲತೆ ಇವುಗಳು ಕಾರ್ಯ ಸಿದ್ಧಿಗೆ ಕಾರಣವಾಗುವವು. ಪ್ರಣಯಿಗಳ ಕ್ಷಣಿಕ ಕೋಪ-ಮನಸ್ತಾಪಗಳನ್ನು ತೆಗೆದು ಹಾಕಿ, ಇಬ್ಬರಲ್ಲಿಯೂ ಮಿಲನಕ್ಕೆ ಆತುರತೆಯ ಮನೋಭಾವವನ್ನು ಸಿದ್ಧಗೊಳಿಸಬೇಕು. ಅಭಿಸಾರದ ಸಾಹಸಕ್ಕೆ ಸಿದ್ಧವಾಗಲು ಪ್ರೇಯಸಿಗೆ ಧೈರ್ಯವನ್ನು ತಂದುಕೊಡಬೇಕು. ಸಂಕೋಚ ಭಾವನೆಯ ಅಡ್ಡ ಪರದೆಯನ್ನು ಬದಿಗೆ ಸರಿಸಬೇಕು:

'ಪಶ್ಯತಿ ದಿಸಿನಿಶಿರಹಸಿ ಭವಂತಂ।
...ನಾಥಹರೆ, ಸೀದತಿ ರಾಧಾವಾಸಗೃಹೆ॥
...ತ್ವಯಿಲೀನಾ, ನೌ ವಿರಹೆ ತವದೀನಾ।

—"ನಿನ್ನ ವಿರಹದಿಂದ ಘಾಸಿಗೊಂಡ ರಾಧೆಯು (ನಿನ್ನನ್ನು ಕಾಣಲು) ರಾತ್ರಿಯಲ್ಲಿ ದಿಕ್ಕು ದಿಕ್ಕುಗಳಲ್ಲಿ ಕಣ್ಣು ಹರಿಯಿಸುವಳು. ಪ್ರಭೂ, ಹರೆ, ನಿನ್ನನ್ನೇ ನಂಬಿದ್ದ ಅವಳು ನಿನ್ನ ವಿರಹದಿಂದ ತುಂಬಾ ದುಃಖಿತಳಾಗಿರುವಳು—"ಎಂದು ರಾಧೆಯ ವ್ಯಾಕುಲತೆಯನ್ನು ಬಣ್ಣಿಸಿ ಶ್ರೀ ಕೃಷ್ಣನ ಮನಸ್ಸು ಕರಗುವಂತೆ ಮಾಡುವರು. ಬಂದೆಡೆ,

'ನಿಂದತಿ ಚಂದನ ಮಿಂದು ಕಿರಣ ಮನು।
ವಿಂದತಿ ಖೇದ ಮಧೀರವವ್॥

"ರಾಧೆ! ನಿನ್ನ ವಿರಹದಿಂದ ನಿನ್ನ ಪ್ರಿಯಕರನ ಗತಿಯು ಏನಾಗಿದೆ ಬಲ್ಲೆಯಾ? ದೇಹಕ್ಕೆ ತಣ್ಪು ನೀಡುವ ಶ್ರೀಗಂಧದ ಲೇಪವು ಚಂದ್ರ ಶೀತಲ ಕಿರಣಗಳೂ ಅವನಿಗೆ ನಿನ್ನ ವಿರಹದ ಬೇಗೆಯಿಂದ ತಾಪದಾಯಕವಾಗಿವೆ. ಅವು ಅವನಿಗೆ ಬೇಡವಾಗಿವೆ. ಆತನು ಕಂಗೆಟ್ಟಿರುವ" ಎಂದು ಹೇಳಿ ರಾಧೆಯ ಕೋಪ ಸಂತಾಪಗಳನ್ನು ಕಳಚಿ ಬಿಡುವರು. ರಾಧಾಕೃಷ್ಣರ ಸಮಾಗಮದ ಈ ದೃಶ್ಯವು ಈ ಕಾವ್ಯದಲ್ಲಿಯ ಅತ್ಯಂತ ರಸಸಪ್ರತಾದ ಸನ್ನಿವೇಶ. ಅವರಿಬ್ಬರ ದೈವಿಕ ಪ್ರೇಮದ ಮಿಲನವನ್ನು ಜಯ ದೇವ ಕವಿಯು ಅತ್ಯಂತ ಮನೋಜ್ಞವಾಗಿ, ಮಾರ್ಮಿಕವಾಗಿ ಚಿತ್ರಿಸಿ, ಶೃಂಗಾರ ರಸದ ಮೇರು ಶಿಖರಕ್ಕೆ ರಸಿಕ ಶ್ರೋತೃಗಳನ್ನು ಕರೆದೊಯ್ಯುವನು.

ವಿರಹಿಗಳಿಗೆ ಅತೀವ ಪ್ರಿಯಕರವಾದ 'ರಾಗ ರತಿಗೆ ರಾಗ' ಹರುವ ಸಂಜೆಯ ಸಮಯ ಅಭಿಸಾರಿಕೆಯಾದ ರಾಧೆಗೆ ಶ್ರೀ ಕೃಷ್ಣನು ಕಾಣಿಸಿಕೊಳ್ಳುತ್ತಾನೆ; ವಿಶ್ವಮೋಹಕ ತನ್ನ ಚತುರ ಮಾತಿನಿಂದ ರಾಧೆಯ ಕೋಪತಾಪಗಳನ್ನು ಚುದರಿಸಿ ಬಿಡುತ್ತಾನೆ. ಸಖಿಯರು ಅವಳ ಸಂಕೋಚದ ಸೆರಗನ್ನು ದೂರಸರಿಸಿ ಬಿಡುತ್ತಾರೆ. 'ರಾಧೆ! ಇದೇನು ನಿನ್ನ ರೀತಿ? ವಿರಹ ಜರ್ಜರನಾದ ಮಾಧವನು ನಿನ್ನ ಸಮಾಗಮಕ್ಕಾಗಿ ಆತುರನಾಗಿ ಬಂದಿರಲು, ನೀನು ಅವನಿಂದ ಮೋರೆ ತಿರುಗಿಸುದು ಏನು ಚೆಂದವೆ? ಛೀ ಹುಚ್ಚೀ, ಸಾಕಿನ್ನು ನಿನ್ನ ಕೋಪ. ಮಾಧವನಿಗೆ ನೀನು ಶಿಕ್ಷೆಯನ್ನೇ ಮಾಡಬೇಕಿದ್ದರೆ, ಬಿಗಿಯಾಗಿ ಬಂಧಿಸು ಅವನನ್ನು ನಿನ್ನ ತೋಳತೆಕ್ಕೆಯಲ್ಲಿ. ಘಾಸಿಗೊಳಿಸು ಅವನನ್ನು ನಿನ್ನ ನಖ—ದಂತಗಳಿಂದ?

ಸರಿ! ಸೂರ್ಯೋದಯದಿಂದ ಮಂಜು ಮಾಯವಾಗುವಂತೆ, ಮಾಧವನ ಮುಖ ದರ್ಶನದಿಂದ ರಾಧೆಯ ಕೋಪವು ಕರಗಿ ಬಯಲಾಗುವದು. ರಾಧೆಯ ಗೌರಕಾಂತಿಯ ತೋಳ ಸೆರೆಯಲ್ಲಿ ಸಿಲುಕಿದ ಮೇಘ ಶ್ಯಾಮ ಮಾಧವನನ್ನು ಜಯದೇವನು ಬಣ್ಣಿಸಿದ ಬಗೆ ಚೇತೋಹಾರಿಯಾಗಿದೆ. ಆತನ ಕವಿ ಹೃದಯದ ಕಾಣಿಕೆಯಾಗಿದೆ:

'ಯಮುನೆಯ ನೀಲ ವರ್ಣದ ತುಂಬು ಪ್ರವಾಹಕ್ಕೆ ಶುಭ್ರ ವರ್ಣದ ಬಗುಗು ಮುತ್ತಿದಂತೆ, ನೀಲ ಕಮಲಗಳ ತೋಟದಲ್ಲಿ ಪೀತ ಪರಾಗವು ಹರಡಿದಂತೆ. ಶರಚ್ಚಂದ್ರನ ಕಿರಣಗಳಿಂದ ಕರಗಿದ ಬೆಳ್ಳಿಯಂತಿರುವ ಸರೋವರದ ಕಮಲಗಳಿಗೆ ನೀಲ ಬಣ್ಣದ ದುಂಬಿ

ಗಳು ಮುತ್ತಿನಂತೆ, ಸುವರ್ಣ ಕುಂಡಲಗಳ ಕಾಂತಿ ನೀಲ ಬಣ್ಣದ ಕಣ್ಣಿಗಳನ್ನು ಕಮನೀಯವಾಗಿ ಮಾಡುವಂತೆ... ರಾಧಾ ಮಾಧವರ ಗೌರ-ನೀಲ ಕಾಂತಿಗಳ ಈ ಸಂಯೋಗವನ್ನು ಎಷ್ಟು ಬಗೆಯಿಂದ ಬಣ್ಣಿಸಿದರೂ ಜಯದೇವ ಕವಿಯ ಪ್ರತಿಭೆಗೆ ತೃಪ್ತಿಯಿಲ್ಲ. ಅಂತೆಯೆ ಬಂಗಾಲದಲ್ಲಿ ಮಾತ್ರವಲ್ಲ, ಭಾರತದಲ್ಲಿ ಜಯದೇವ ಕವಿಯು ಕವಿರಾಜ ನೆಂಬ ಕೀರ್ತಿ ಶಾಲಿಯಾಗಿದ್ದಾನೆ. ಈ ಬಿರುದು ಆತನಿಗೆ ಸರ್ವಥಾ ಸಾರ್ಥಕವಾಗಿದೆ.

ಜಯದೇವನ ಹುಟ್ಟೂರಾದ ಕೆಂದುಲೀ ಗ್ರಾಮದಲ್ಲಿ ಜಯದೇವ ಕವಿಯ ಪುಣ್ಯ ಸ್ಮರಣೆಗಾಗಿ ಬಂಗಾಲಿಗಳು ಮಾಘತಿಂಗಳ ಕೊನೆಯ ದಿನ ಮಹೋತ್ಸವವನ್ನು ಜರುಗಿಸುವರು. ಅಂದು ಗೀತ ಗೋವಿಂದದಲ್ಲಿಯ ಗೀತಗಳನ್ನು ವಾದ್ಯ ನೃತ್ಯಗಳ ಮೇಳದೊಡನೆ ಹಾಡಿ ನಲಿಯುವರು. ಆದರೆ, ಗೀತಗೋವಿಂದದ ಲೋಕ ಪ್ರಿಯತೆಯು ಬಂಗಾಲಕ್ಕೆ ಮಾತ್ರ ಸೀಮಿತವಾಗಿಲ್ಲ. ಅಖಿಲ ಭಾರತದಲ್ಲಿ ಅದು ಹರಡಿರುವದು. ಗೀತ ಗೋವಿಂದದ ಹತ್ತಾರು ಅನುಕರಣ ಕೃತಿಗಳಾಗಿವೆ. ಆ ಕಾವ್ಯಕ್ಕೆ ನಾಲ್ವತ್ತಕ್ಕೂ ಮಿಕ್ಕಿ ಸಂಸ್ಕೃತದಲ್ಲಿ ಟೀಕೆಗಳು ರಚಿತವಾಗಿದೆ. ದಕ್ಷಿಣ ಭಾರತದ ದೇವಾಲಯಗಳಲ್ಲಿ ನೃತ್ಯ ಸಂಗೀತಗಳ ಸೇವೆಗಾಗಿ ಗೀತಗೋವಿಂದದಲ್ಲಿಯ ಗೀತಗಳನ್ನೇ ಹೇಳಬೇಕೆಂದು ಕ್ರಿ.ಶ. ೧೫೦೦ರಲ್ಲಿ ಪ್ರತಾಪರುದ್ರನೆಂಬ ರಾಜನು ರಾಜಾಜ್ಞೆಯನ್ನು ಹೊರಡಿಸಿದ್ದನೆಂದು ತಿಳಿಯುತ್ತದೆ. ವೈಷ್ಣವ ಪಂಥದ ಕೃಷ್ಣ ಭಕ್ತರಲ್ಲಿ ಗೀತ ಗೋವಿಂದಕ್ಕೆ ಅಮರ ಸ್ಥಾನವಿದೆ.

ಜಯದೇವ ಕವಿಯ ಬಗ್ಗೆ ಆಖ್ಯಾಯಿಕಗಳಿರುವಂತೆ, ಗೀತ ಗೋವಿಂದ ಕಾವ್ಯದ ಬಗ್ಗೆಯೂ ಒಂದೆರಡು ದಂತ ಕಥೆಗಳಿವೆ. ಅವುಗಳಿಗೆ ಐತಿಹಾಸಿಕ ಸಾಕ್ಷ್ಯವಿರದಿದ್ದರೂ ಕವಿಯ ಲೋಕಪ್ರಿಯತೆಗೆ, ಕಾವ್ಯದ ಮಹಿಮೆ ಮಾಧುರ್ಯಗಳಿಗೆ ಈ ದಂತ ಕಥೆಗಳು ನಿದರ್ಶಕವಾಗಿವೆ.

ಗೀತ ಗೋವಿಂದದ ರಚನೆಯನ್ನು ಜಯದೇವನು ಸ್ಫೂರ್ತಿ ನಿಮಿಷಗಳಲ್ಲಿ ದಿನದಿನವೂ ಮಾಡುತ್ತಿದ್ದನು. ಹೀಗಿರಲು, ಒಂದು ದಿನ ಬರೆಯುವದನ್ನು ಅರ್ಧವಲ್ಲಿಯೆ ನಿಲ್ಲಿಸಿ ಜಯದೇವನು ಸ್ನಾನ ಗೃಹಕ್ಕೆ ಹೋದನು. ಆಗ್ಗೆ ಶ್ರೀ ಕೃಷ್ಣನು ಜಯದೇವನ ವೇಷ ತಾಳಿ ಬಂದನು. ಪತ್ನಿಯಾದ ಪದ್ಮಾವತಿ ಯಿಂದ ಕಾವ್ಯದ ಹಸ್ತ ಪ್ರತಿಯನ್ನು ಪಡೆದು ಅರ್ಧಕ್ಕೆ ಬಿಟ್ಟಿದ್ದ ಮುಂದಿನ ಪದ್ಯಗಳನ್ನು ಪೂರ್ತಿಗೊಳಿಸಿ ಕಣ್ಮರೆಯಾದನು. ಸ್ನಾನ ಮುಗಿಸಿಕೊಂಡು ಬಂದ ಜಯ ದೇವನಿಗೆ ಈ ನೂತನ ಪದ್ಯಗಳನ್ನು ನೋಡಿ ಅಚ್ಚರಿಯಾಯಿತು. ಪತ್ನಿಯ ಮಾತೂ ನಂಬಿಗೆಯಾಗಲಿಲ್ಲ. ಅದೇ ಯೋಚನೆಯಲ್ಲಿರಲು ಸ್ವಪ್ನದಲ್ಲಿ ಶ್ರೀ ಕೃಷ್ಣನು ಕಾಣಿಸಿಕೊಂಡು ನಿಜ ಸಂಗತಿಯನ್ನು ಅರುಹಿದನು. ಕೃಷ್ಣ ವಾತ್ಸಲ್ಯಕ್ಕೆ ಜಯದೇವನು ಅನಂತ ಪ್ರಣಾಮಗಳನ್ನು ಸಲ್ಲಿಸಿದನು. ಈ ದಿವ್ಯ ಅನುಭವದಿಂದ ಪ್ರಭಾವಿತರಾದ ಪತಿ-ಪತ್ನಿಯರು ಗೀತಗೋವಿಂದದ ಗೀತಗಳಿಂದ




"ನನಗ್ಯಾವದೂ ಮಂತ್ರಿ ಪದ ಬೇಡ!!??!
ಬರೀ ಪಕ್ಷದಲ್ಲಿ ಪ್ರವೇಶ ಕೊಟ್ಟರೆ ಸಾಕು!"

ಶ್ರೀ ಕೃಷ್ಣನಿಗೆ ನಿತ್ಯವೂ ಸೇವೆ ಸಲ್ಲಿಸಿದರು. ಗೀತ ಗೋವಿಂದಕ್ಕೆ ದೈವಿಕತೆಯ ಬಲವಿದೆ ಎಂಬುದೇ ಈ ಐತಿಹ್ಯದ ಆಶಯವಾಗಿರಬೇಕು.

ಜಯದೇವನ ಅಪಾರ ಲೋಕಪ್ರಿಯತೆಯು ದೇಶದ ದೊರೆಗೆ ಸಹನವಾಗಲಿಲ್ಲ. ದೊರೆಗೆ ಅಸೂಯೆ ಉಂಟಾಯಿತು. ಆತನು ತಾನೇ ಒಂದು ಸ್ವತಂತ್ರ ಗೀತಗೋವಿಂದವನ್ನು ರಚಿಸಿ, ದೇವಾಲಯಗಳಲ್ಲಿ ತನ್ನ ಗೀತಗಳನ್ನೇ ಪಠಿಸಬೇಕೆಂದು ಆಜ್ಞೆ ಮಾಡಿದನು. ರಾಜಭೀತಿಯಿಂದ ಆತನ ಗೀತಗಳ ಪಠಣವೇ ಪ್ರಾರಂಭವಾಯಿತು. ಆದರೆ, ಜಯದೇವನು ಮಾತ್ರ ತನ್ನ ಗೀತಗಳನ್ನೇ ಹೇಳುತ್ತಿದ್ದನು. ರಾಜನಿಗೆ ಕೋಪ, ಜಯ ದೇವನನ್ನು ವಿಚಾರಿಸಲು, 'ದೊರೆಯೆ! ನಿನ್ನ ಗೀತಗಳಿಗಿಂತಲೂ ನನ್ನ ಗೀತಗಳಿಂದ ದೇವನಿಗೆ ಅತ್ಯಧಿಕ ಸಂತೋಷವಾಗುವುದು. ಪರೀಕ್ಷಿಸಿ ನೋಡಬಹುದು' ಎಂದು ದೈವಕೃಪೆಯಲ್ಲಿ ಅಚಲ ಶ್ರದ್ಧೆಯಿಂದ ಜಯದೇವನು ಹೇಳಿದನು. ಪರೀಕ್ಷೆ ನಡೆಯಿತು. ಎರಡೂ ಗೀತಗಳನ್ನು ದೇವನ ಎದುರಿನಲ್ಲಿ ಇಟ್ಟರು. 'ದೇವಾ! ಇವೆರಡರಲ್ಲಿ ನಿನಗೆ ಹೆಚ್ಚು ಸಂತೋಷಕರವಾದುದನ್ನು ಎತ್ತಿ ಮೇಲಿಡು' ಎಂದು ಪ್ರಾರ್ಥಿಸಿದರು. ಕೆಲ ಸಮಯದ ನಂತರ ಗರ್ಭ ಗುಡಿಯ ಬಾಗಿಲು ತೆಗೆದು ನೋಡಲಾಗಿ, ಜಯದೇವನ ಗೀತ ಗೋವಿಂದವೆ ಇನ್ನೊಂದರ ಮೇಲೆ ಸ್ಥಾಪಿತ ವಾಗಿತ್ತು. ಅದರ ಬಗ್ಗೆ ದೇವನು ತನ್ನ ಮೆಚ್ಚುಗೆಯನ್ನು ಸ್ಪಷ್ಟವಾಗಿ ವ್ಯಕ್ತಗೊಳಿಸಿದ್ದನು. ಅದರಿಂದ ರಾಜನ ಪ್ರತಿಷ್ಠೆ ಭಂಗವಾಯಿತು. ಜಯದೇವನ ಕೀರ್ತಿಗೆ ಹೆಚ್ಚು ಕಳೆಯೇರಿತು.

ಗೀತಗೋವಿಂದದ ದೈವಿಕತೆಯ ಬಗ್ಗೆ ಇನ್ನೂ ಒಂದು ಆಖ್ಯಾಯಿಕೆ—ತರಕಾರಿ ಮಾರಿಕೊಂಡು ಜೀವಿಸುವ ಮುದುಕಿಯೊಬ್ಬಳಿದ್ದಳು. ನಿರಕ್ಷರಿಯಾಗಿದ್ದರೂ ಗೀತಗೋವಿಂದವು ಅವಳಿಗೆ ಕಂಠಪಾಠವಾಗಿತ್ತು. ಅದರಲ್ಲಿಯ ಭಕ್ತಿ ಗೀತಗಳನ್ನು ಕೃಷ್ಣ-ಭಕ್ತೆಯಾದ ಆ ವೃದ್ಧೆ ತೋಟದಲ್ಲಿ ಕೆಲಸ ಮಾಡುವಾಗ್ಗೆ ಮಧುರವಾಗಿ ಮುಕ್ತ ಕಂಠದಿಂದ ಹಾಡುತ್ತಿದ್ದಳು. ಅವಳ ಭಕ್ತಿಗೆ ಮೆಚ್ಚಿ, ಅವಳ ಮಧುರ ಕಂಠಕ್ಕೆ ಮನಸೋತು ಒಂದು ದಿನ ಶ್ರೀಕೃಷ್ಣನು ಅವಳ ಹಿಂದೆ ಅಲೆದಾಡಿದನು. ಕಂಟಿಕಂಟಿಗಳಲ್ಲಿ ಸಿಲುಕಿ, ಆತನ ಪೀತಾಂಬರವು ಚಿಂದಿ ಚಿಂದಿ ಆಯಿತು. ಮರುದಿನ ಮುಂಜಾವು ದೇಗುಲದಲ್ಲಿ ಶ್ರೀ ಕೃಷ್ಣನ ಶಿಲಾಮೂರ್ತಿಗೆ ಉಡಿಸಿದ್ದ ಬೆಲೆಯುಳ್ಳ ಪೀತಾಂಬರವು ಹರಿದು ಚಿಂದಿಯಾದ್ದನ್ನು ಕಂಡು ಪೂಜಾರಿಗಳು ರಾಜ ದಂಡನೆಯಿಂದ ಭಯಭೀತರಾದರು. ಈ ಘಟನೆಯಿಂದ ಅರಸು ಹಾಗೂ ಅರ್ಚಕರು ದಿಗಿಲುಗೊಂಡರು. ಅಂದು ರಾತ್ರಿ ಅವರಿಬ್ಬರ ಕನಸಿನಲ್ಲಿಯೂ ಶ್ರೀ ಕೃಷ್ಣನು ಕಾಣಿಸಿಕೊಂಡು ನಿಜ ಸಂಗತಿಯನ್ನು ಅರುಹಲು ಅವರ ದುಗುಡ ದೂರವಾಯಿತು. ಜಯದೇವ ಕವಿಯ ಕೀರ್ತಿ ಕಿರೀಟಕ್ಕೆ ಇನ್ನೊಂದು ಹೊಳಪಿನ ಹರಳನ್ನು ಜೋಡಿಸಿದಂತಾಯಿತು.

ಕೃಷ್ಣ ಭಕ್ತರಿಗೆ ಜಯದೇವನು ಎಷ್ಟೊಂದು ಆದರಣೀಯನಾಗಿದ್ದನು, ಆತನ ಭಕ್ತಿ ಪ್ರವಣ ಮಧುರ ಸಂಗೀತದ ಗೀತ ಗೋವಿಂದ ಕಾವ್ಯವು ಜನರ ಹೃದಯದಲಿ ಎಷ್ಟೊಂದು ಪ್ರೀತಿ ಗೌರವಗಳ ಸ್ಥಾನವನ್ನು ಪಡೆದಿತ್ತು ಎಂಬುದಕ್ಕೆ ಈ ದಂತಕಥೆಗಳು ದ್ಯೋತಕವಾಗಿವೆ. ✡

---

ಹೆಲ್ಸಿಂಕಿಯ ಮೆಜಿಸ್ಟ್ರೇಟ್ ಕೋರ್ಟಿನ ಸೇವಕಿಯೊಬ್ಬಳು ಕೆಲಸದಲ್ಲಿ ತೊಡಗಿದ್ದಾಗ ಮೊಳೆಗೆ ಸಿಕ್ಕಿ ಸ್ಕರ್ಟ್ ಹರಿದುಕೊಂಡಳು. ನ್ಯಾಯಾಲಯದಲ್ಲಿ ಹೊಸ ಸ್ಕರ್ಟ್ ಕೊಡಿಸಬೇಕೆಂದು ಬೇಡಿಕೆ ಇಟ್ಟಳು. ಅದು ತಳ್ಳಲ್ಪಟ್ಟಿತು. ಮೇಲಿನ ಕೋರ್ಟಿನಲ್ಲಿ ನಾಲ್ಕು ವರ್ಷದ ವರೆಗೆ ಸ್ಪರ್ಧಿಸಿ ಪರಿಹಾರ, ಖರ್ಚಿನ ಹಣ ಎರಡೂ ಸೇರಿ ೧೦ ಸಾವಿರ ಡಾಲರುಗಳಷ್ಟು ಹಣ ಪಡೆದಳು.

# ಎಲ್ಲರಿಗಾದ ಸಮಾಜವಾದಿ ಎಸ್. ವೆಂಕಟರಾಮ್

ಎಸ್. ಆರ್. ವಿಜಯಶಂಕರ

ಶ್ರೀ ಎಸ್. ವೆಂಕಟರಾಮ್ ತೀರಿಕೊಂಡಾಗ ನಮ್ಮ ಇಂದಿನ ರಾಜಕೀಯ ಸನ್ನಿವೇಶದಲ್ಲಿ ಏನಾದರೂ ಸಾಧಿಸುವ ಯೋಗ್ಯತೆ ಇದ್ದ ವಿರೋಧಪಕ್ಷದ ಸಮರ್ಥರೊಬ್ಬರನ್ನು ಕಳೆದು ಕೊಂಡೆವು ಎಂದು ನನಗನಿಸಿತು. ಚಿಂತನಶೀಲ ಮನಸ್ಸಿನ ಅವರು ವಿಮರ್ಶಕನೂ ವಿದ್ವಾಂಸನೂ ಆದ ಸಹೃದಯಿ ಸಾಹಿತಿಯಾಗಿದ್ದರು. ವಿರಳವಾಗಿ ಸಿಗುವ ಪ್ರಾಮಾಣಿಕ ರಾಜಕಾರಣಿಯಾಗಿದ್ದರು. ಅವರ ಭಾಷಣಗಳ ವರದಿಗಳನ್ನೂ ಅವರು ಬರೆಯುತ್ತಿದ್ದ ಲೇಖನಗಳನ್ನೂ ತಪ್ಪದೆ ಓದುತ್ತಿದ್ದ ನನಗೆ ಈ ನೆಲದ ಸ್ವಭಾವವನ್ನು ಸಮಂಜಸವಾಗಿ ಅರಿತು, ಸಮಸ್ಯೆಗಳನ್ನು ಸಮರ್ಪಕವಾಗಿ ಬಿಡಿಸಬಲ್ಲ ಯೋಗ್ಯತೆ ಅವರಿಗೆ ಇತ್ತು ಎಂದು ತೋರುತ್ತಿತ್ತು. ಅವರನ್ನು ನಾನು ಕಂಡಿದ್ದು ಕಡಿಮೆ. ಒಡನಾಟದಲ್ಲಿ ಅವರ ವ್ಯಕ್ತಿತ್ವದ ಅನೇಕ ಪದರುಗಳನ್ನು ತಿಳಿದವನೂ ನಾನಲ್ಲ. ಆದರೆ ಒಮ್ಮೆ ಅವರ ಜೊತೆ ದೀರ್ಘ ಪ್ರಯಾಣ ಮಾಡಿದ ಅನುಭವ ಮಾತ್ರ ಸದಾ ನನಗೊಂದು ಮರೆಯಲಾರದ ನೆನಪು.

ಚಿಕ್ಕಮಗಳೂರು ಕ್ಷೇತ್ರದಿಂದ ಶ್ರೀಮತಿ ಇಂದಿರಾ ಗಾಂಧಿ ಲೋಕಸಭೆಗೆ ಸ್ಪರ್ಧಿಸಿದ್ದ ಸಮಯ ಅದು. ಜಾರ್ಜ್ ಫರ್ನಾಂಡಿಸ್ ಜೊತೆ ಏನನ್ನೋ ಮಾತಾಡುವುದಕ್ಕೆ ಬಂದಿದ್ದ ವೆಂಕಟರಾಮ್ ಪುನಃ ಬೆಂಗಳೂರಿಗೆ ಹಿಂದಿರುಗುವಾಗ ನಾನೂ ಅವರೂ ಒಂದೇ ಕಾರಿನಲ್ಲಿ ಪ್ರಯಾಣಿಸಿದ್ದೆವು. ನಾನಾಗ ಮೈಸೂರಿನಲ್ಲೊಬ್ಬ ಪುಟ್ಟ ವಿದ್ಯಾರ್ಥಿ ಮುಖಂಡ. ಅವರು ಜನತಾ ಪಕ್ಷದ ಕರ್ನಾಟಕ ರಾಜ್ಯ ಕಾರ್ಯದರ್ಶಿ. ಕಾರಿನಲ್ಲಿ ನಾವಲ್ಲದೆ ಡಾ. ಯು. ಆರ್. ಅನಂತಮೂರ್ತಿ ಮತ್ತು ಬಾಂಬೆ ಲೇಬರ್ ಯೂನಿಯನ್ನಿನ ಅಧ್ಯಕ್ಷ ಶ್ರೀ ಎಸ್. ಆರ್. ರಾವ್ ಕೂಡ ಇದ್ದರು.

ಈ ದೀರ್ಘ ಪ್ರಯಾಣದ ರಾತ್ರಿಯೆಲ್ಲ ನಾವು ಕಡ್ಡಾಯವಾಗಿ ಮಾತಾಡುತ್ತಲೇ ಇರಬೇಕಾದಂಥ ಒಂದು ಪ್ರಸಂಗ ನಿರ್ಮಾಣವಾಗಿಬಿಟ್ಟಿತ್ತು. ತರೀಕೆರೆಯಲ್ಲಿ ನಾವು ಊಟಕ್ಕೆ ನಿಂತಾಗ ನಮ್ಮ ಕಾರಿನ ಡ್ರೈವರ್ ಬೇಕಾದ ಹಾಗೆ ವಿಸ್ಕಿ ಕುಡಿದುಬಿಟ್ಟಿದ್ದ. ಆಗ ರಾತ್ರಿ ಹತ್ತು ಗಂಟೆ ಕಳೆದಿತ್ತು. ವೆಂಕಟರಾಮ್ ಯಾವುದೋ ಮೀಟಿಂಗಿಗಾಗಿ ಮಾರನೇ ದಿನ ಬೆಳಿಗ್ಗೆ ಆರು ಗಂಟೆ ರೈಲಲ್ಲಿ ಬೆಂಗಳೂರಿನಿಂದ ಮದ್ರಾಸಿಗೆ ಹೋಗಲೇಬೇಕಾಗಿತ್ತು. ಹಗಲೆಲ್ಲಾ ಡ್ರೈವ್ ಮಾಡಿದ್ದ ನಮ್ಮ ಕಾರಿನ ಚಾಲಕ ತುಂಬಾ ದಣಿದಿದ್ದ. ದಣಿಕೆ ಕಡಿಮೆಯಾಗಲೆಂದು ವಿಸ್ಕಿ ಕುಡಿದ ಪರಿಣಾಮವಾಗಿ ತೂಕಡಿಸಲೂ ಪ್ರಾರಂಭಿಸಿದ.

ಶಿವಮೊಗ್ಗ–ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ಕಾರು ಓಡುತ್ತಿದ್ದಾಗ ಡ್ರೈವರ್ ಕುಡಿದ ನೆನಪಾಗಿ ನಮಗೆ ಒಂದು ರೀತಿ ಪ್ರಾಣಭಯವಾದ ಹಾಗಾಯಿತು. ಕೇಳಿದರೆ ಚಾಲಕ ವಿಶ್ರಾಂತಿ ಬೇಕು ಅನ್ನುತ್ತಾನೆ. ವೆಂಕಟರಾಮ್‌ಗೆ ಹೋಗದೆ ಉಪಾಯವಿಲ್ಲ. ಆದ್ದರಿಂದ, ಕಾರಿನೊಳಗೆ ನಾವು ಮಾತಾಡುತ್ತಾ ಇದ್ದರೆ ಮೌನ

ಇಲ್ಲದಾಗಿ, ಜೀವಂತ ಶಬ್ದಗಳಿಂದ ಡ್ರೈವರಿಗೆ ತೂಕಡಿಗೆ ಬರಲಾರದು ಎಂದು ನಿಶ್ಚಯಿಸಿದೆವು. ಆಗಾಗ ಡ್ರೈವರನ್ನೂ ಮಾತಾಡಿಸುತ್ತಾ ನಮ್ಮೊಳಗೇ ನಾವು ಮಾತಿಗೆ ತೊಡಗಿದೆವು. ಮೊದಲೇ ನಾವೆಲ್ಲ ಪಟ್ಟಾಂಗ ಪ್ರವೀಣರು. ಅದರ ಮೇಲೆ ಡಾ. ಅನಂತಮೂರ್ತಿ ಮತ್ತು ವೆಂಕಟರಾಮ್ ಬಹಳ ಪ್ರೀತಿಯ ಸ್ನೇಹಿತರು. (ಅನಂತಮೂರ್ತಿ 'ಅವಸ್ಥೆ' ಎಂಬ ತಮ್ಮ ಕಾದಂಬರಿಯನ್ನು ವೆಂಕಟರಾಮರಿಗೆ ಅರ್ಪಿಸಿದ್ದಾರೆ.) ಎಂದ ಮೇಲೆ ಮಾತಿನ ಒಂದು ತುದಿ ಇನ್ನೊಂದಕ್ಕೆ ಸೇರುತ್ತಾ ಬೆಂಗಳೂರು ಬಂದದ್ದೇ ಗೊತ್ತಾಗಲಿಲ್ಲ. ನಡುವೆ ಎಲ್ಲೋ ತುಮಕೂರಿನ ಹಿಂದೆಯೊ ಮುಂದೆಯೊ ಒಮ್ಮೆ ಚಹಾ ಕುಡಿದು, ಗೂಡಂಗಡಿಯವನನ್ನು ಎಬ್ಬಿಸಿ ಎರಡು ಪ್ಯಾಕೆಟ್ ಸಿಗರೇಟ್ ಕೊಂಡದ್ದು ಮಾತ್ರ ನೆನಪು.

ಡಾ. ಅನಂತಮೂರ್ತಿಯವರ 'ಭಾರತೀಪುರ'ದ ಮೇಲೆ ಶ್ರೀ ಎಸ್. ವೆಂಕಟರಾಮ್ 'ಸಾಕ್ಷಿ'ಯಲ್ಲಿ ಪ್ರಕಟಿಸಿದ್ದ ವಿಮರ್ಶಾ ಲೇಖನದ ಸುದ್ದಿ ತೆಗೆದಾಗ ನಮ್ಮ ಮಾತು ಭಾರತದ ಮನಃಸ್ಥಿತಿಯ ಬಗ್ಗೆ ತಿರುಗಿತು. ಮಾತಿನ ನಡುವೆ ವೆಂಕಟರಾಮ್, 'ಅಮೆರಿಕದಲ್ಲಿ ಮರ್ಲಿನ್ ಮನ್ರೋ ಆತ್ಮಹತ್ಯೆ ಮಾಡಿಕೊಂಡ ಮನಃಸ್ಥಿತಿಯೂ, ರಾಜಕುಮಾರಿಯಾಗಿದ್ದ ಮೀರಾ ಅರಮನೆ ತ್ಯಜಿಸಿ ಸಂತ ಮೀರಾಬಾಯಿಯಾದ ಮನಃಸ್ಥಿತಿಯೂ ಒಂದೇ' ಎಂದರು – ಈ ಬಗ್ಗೆ ಅವರೊಂದು ಪ್ರತ್ಯೇಕ ಲೇಖನವನ್ನೂ ಪ್ರಕಟಿಸಿದ್ದಾರೆ. ಆತ್ಮಹತ್ಯೆ ಹೇಗೆ ವಿವಿಧ ಕಾರಣಗಳಿಂದ ಸಾಧ್ಯವೋ ಹಾಗೆಯೇ ದೇವರ ಬಳಿಗೂ ನಮ್ಮ ಜನರು ಅನೇಕ ಕಾರಣಗಳಿಗಾಗಿ ಹೋಗುತ್ತಾರೆ. ಆದರೆ ಇವೆರಡೂ ಕ್ರಿಯೆಯನ್ನು ನಿಯಂತ್ರಿಸುವ ಮನಸ್ಸು 'ಪಲಾಯನವಾದ'ಕ್ಕೆ ಹತ್ತಿರವಾದ ಒಂದು ಸ್ಥಿತಿ ಎಂಬ ವಾದಸರಣಿ ಇದ್ದಂತೆ ಆಗ ನನಗೆ ತೋರಿತು.

ಅವರ ಮಾತಿನ ಹಿನ್ನೆಲೆಯಲ್ಲಿ ಆಗಾಧವಾದ ಓದಿನ ಹಾಗೂ ಪಾಂಡಿತ್ಯದ ಜ್ಞಾನವೂ ಇತ್ತು. ಆಲ್ಬರ್ಟ್ ಕಾಮೂನ 'ಮಿಥ್ ಆಫ್ ಸಿಸಿಫಸ್' ನೀತ್ಸೆ ಮತ್ತು ರಸೆಲ್‌ನ ವಾದಗಳು ಹೀಗೆ ಪ್ರಪಂಚದ ವಿವಿಧ ತತ್ವಜ್ಞಾನಿಗಳು ಬರೆದದ್ದು ವೆಂಕಟರಾಮ್ ಮಾತಾಡುತ್ತಿದ್ದ ಸಂದರ್ಭದಲ್ಲಿ ಎಳೆ ಎಳೆಯಾಗಿ ನೆನಪಾಗುತ್ತಿತ್ತು. ಆದರೆ ಅವನ್ನೆಲ್ಲ ಅಗತ್ಯ ಬಿದ್ದಾಗ ಮಾತ್ರ ಇಂಡಿಯಾದ ಮೂಲ ಚೇತನವನ್ನು ವೈಜ್ಞಾನಿಕವಾಗಿ ಅರ್ಥಮಾಡಿಕೊಳ್ಳುವುದಕ್ಕೆ ಬೇಕಾದಷ್ಟೆ ಉಪಯೋಗಿಸಿಕೊಂಡಂತೆ ತೋರಿತು. ನಮ್ಮ ನೆಲದ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವಲ್ಲಿ ದಿವಂಗತ ಡಾ. ರಾಮಮನೋಹರ ಲೋಹಿಯಾರ ನೇರ ಪ್ರಭಾವಕ್ಕೆ ಒಳಗಾದ ಚಿಂತಕನಂತೆ ಅವರು ನನಗೆ ಕಂಡರು.

ಕೇವಲ ನಾಲ್ಕನೇ ಕ್ಲಾಸಿಗೆ ತನ್ನ ಓದನ್ನು ಮುಗಿಸಿದ ವೆಂಕಟರಾಮ ಆಮೇಲೆ ಶಾಲೆಗೆ ಹೋಗಲಿಲ್ಲ. ಆದರೆ ಯಾವುದೇ ಒಬ್ಬ ಯುನಿವರ್ಸಿಟಿ ಪ್ರೊಫೆಸರನಿಗೂ ಕಡಿಮೆ ಇಲ್ಲದ ಜ್ಞಾನವನ್ನವರು ಸಂಪಾದಿಸಿದರು. ಕರ್ನಾಟಕದ ಸಮಾಜವಾದಿ ಮುಖಂಡರಲ್ಲೆಲ್ಲ ಅವರು ದೊಡ್ಡ ತಾತ್ವಿಕರು (Theorist). ನಿಜವಾದ ಅರ್ಥದಲ್ಲಿ ಕರ್ನಾಟಕದ ಸಮಾಜವಾದಿ ಪಕ್ಷದಲ್ಲಿದ್ದು ಮೇಲೆ ಬಂದ ಅನೇಕರು ವೆಂಕಟರಾಮ್ ಅವರ ಶಿಷ್ಯರು. ವೆಂಕಟರಾಮ್ ಸಾಯುತ್ತಾ ಆಸ್ಪತ್ರೆಯಲ್ಲಿ ಮಲಗಿದ್ದಾಗ, ಇಡೀ ದಿನ ಎಂಬ ಹಾಗೆ ಆಸ್ಪತ್ರೆಯಲ್ಲಿದ್ದ ಕರ್ನಾಟಕದ ಕ್ಯಾಬಿನೆಟ್ ಸಚಿವರೊಬ್ಬರು "ನನ್ನ ನಿಜವಾದ ಗುರು ಇವರು ಸಾರ್, ನನಗೆ ರಾಜಕೀಯ ಹೇಳಿಕೊಟ್ಟವರು ಇವರು. ಇಂದಿರಾ ಗಾಂಧಿ ಅಲ್ಲ," ಎಂದು ಹೇಳಿ ಕಣ್ಣೀರು ಹಾಕಿ ಅತ್ತರೆಂದು ಆಸ್ಪತ್ರೆಯಲ್ಲಿದ್ದ ಒಬ್ಬರು ನನಗೆ ಹೇಳಿದರು.

ಡಾ. ಲೋಹಿಯಾ ಕಮ್ಯುನಿಸಮ್ಮಿನ ಪ್ರಭಾವಕ್ಕೊಳಗಾಗಿಯೂ, ಅದನ್ನು ಬಿಟ್ಟು ಅಧಿಕಾರದ ವಿಕೇಂದ್ರೀಕರಣ ಇರುವ ಸಮಾಜವಾದ ತರಲು ಹೊರಟವರು. ಗಾಂಧೀಜಿಯನ್ನು ಸರಿಯಾಗಿ ಅರ್ಥಮಾಡಿಕೊಂಡು ಅಲ್ಲಿಂದ ಮುಂದಕ್ಕೆ ಇಂಡಿಯಾದಲ್ಲಿ ಹೊರಟವರು ಲೋಹಿಯಾ ಮಾತ್ರ. ಕರ್ನಾಟಕದ ಲೋಹಿಯಾ ಎಂದೇ ಪ್ರಖ್ಯಾತರಾಗಿದ್ದ ಶಾಂತವೇರಿ ಗೋಪಾಲ ಗೌಡರ ಗರಡಿಯಲ್ಲಿ ಪಳಗಿದ್ದ ಎಸ್. ವೆಂಕಟರಾಮ್ ನಮ್ಮ ಸಮಸ್ಯೆಗಳನ್ನು ಎಷ್ಟು ಚೆನ್ನಾಗಿ ಅರ್ಥ ಮಾಡಿಕೊಳ್ಳುತ್ತಿದ್ದರು ಎಂಬುದಕ್ಕೊಂದು ಪುಟ್ಟ ಉದಾಹರಣೆ ಹೇಳುತ್ತೇನೆ.

ಕಾರಿನಿಂದ ಇಳಿದು ನಾವು ಕಾಫಿ ಕುಡಿಯಲು ಹೋದದ್ದು ಒಬ್ಬ ಸಾಕನ ಅಂಗಡಿಗೆ. ರಾತ್ರಿ ಹನ್ನೆರಡು ಗಂಟೆ ಮೇಲೂ ಅವನು ಅಂಗಡಿ ಬಾಗಿಲು ತೆಗೆದಿದ್ದ. ಆ ಅಂಗಡಿ ರಾತ್ರಿಯಲ್ಲಿ ನ್ಯಾಶನಲ್ ಹೈವೇಯ ಲಾರಿ ಚಾಲಕರಿಗೆ ಚಹಾ ಕುಡಿಯಲು ಇರುವ ಸಣ್ಣ ಹೋಟೆಲು. ಹಗಲಲ್ಲಿ ಅದೇ ಸಾಕನ ಅಂಗಡಿ ಸೈಕಲ್ ರಿಪೇರಿ ಮಾಡುವ ಪುಟ್ಟ ಶಾಪ್. ವೆಂಕಟರಾಮ್ ಕರ್ನಾಟಕದ ಹಿಂದೂ-ಮುಸ್ಲಿಂ ಸಮಸ್ಯೆ ಬಗ್ಗೆ ಒಟ್ಟಾಗಿ ಒಂದು ಮಾತು ಹೇಳಿದರು.

"ನಮ್ಮ ಮುಸ್ಲಿಮರಲ್ಲಿ ಹೆಚ್ಚಿನವರು ಸ್ವತಂತ್ರ ಕಾರ್ಮಿಕರು. ಸಣ್ಣ ಸೈಕಲ್ ಶಾಪ್, ಚಹದ ಅಂಗಡಿ, ಬಾಳೆಕಾಯಿ ಬೇರ ಹೀಗೆಲ್ಲಾ ಸಣ್ಣ ಪುಟ್ಟ ವ್ಯವಹಾರ ಮಾಡುವ ಕೆಲಸಗಾರರು. ಕಷ್ಟ ಪಟ್ಟು ದುಡಿಯುವರು. ಇಂಥ ಸ್ಥಿತಿಯಿಂದಾಗಿಯೇ ಇವರಲ್ಲಿ ಹೆಚ್ಚಿನವರು, ಬಹುಶಃ ಎಲ್ಲರೂ ಯಾವುದೇ ಕಾರ್ಮಿಕ ಸಂಘಟನೆಯ ಪರಿಧಿಯೊಳಗೂ ಸೇರುವುದಿಲ್ಲ. ಆದ್ದರಿಂದ ಹೊರಗಿನ ಅವಶ್ಯಕತೆಗಳಿಗಾಗಿ ಒಂದಾಗುವುದಕ್ಕೆ ಅವರಿಗೆ ತಮ್ಮ ಧರ್ಮದ ಸಂಘಟನೆಯ ಹೊರತಾಗಿ ಬೇರೆ ಯಾವ ದಾರಿಯೂ ಇಲ್ಲ. ಹೀಗಾಗಿ ಅವರನ್ನು ಧರ್ಮವಲ್ಲದ ಬೇರೊಂದು ಸಾಮಾಜಿಕ ಸಂಘಟನೆಯಲ್ಲಿ ಸೇರಿಸುವುದು ತೀರಾ ಅಗತ್ಯ. ಅದೊಂದು ಲೇಬರ್ ಯೂನಿಯನ್ನೇ ಇರಬಹುದು. ಇನ್ನಾವುದೇ ಇರಬಹುದು. ಆಗ ಧರ್ಮ ಅವರ ಕೇವಲ ಅಂತರಂಗ ಸಮಾಧಾನಕ್ಕೆ ಮಾತ್ರ ಬೇಕಾಗುತ್ತದೆ. ಅದೇ ಅವರಿಗೆ ಭದ್ರತೆಯನ್ನು ಕೊಡುವ ಸಾಧನವಾಗುವುದಿಲ್ಲ. ಇದರ ಪ್ರತ್ಯಕ್ಷ ದರ್ಶನಕ್ಕೆ ಬೇಕಾದರೆ ಮುಸ್ಲಿಮರೇ ಹೆಚ್ಚಿರುವ ಬೀಡಿ ಕಾರ್ಮಿಕರಲ್ಲಾದ ಬದಲಾವಣೆಯನ್ನು ಗಮನಿಸಬಹುದು", ಎಂದರು.

ಆ ದಿನ ಹುಣ್ಣಿಮೆ. ಚಂದ್ರನ ಮೇಲೆ ತೆಳ್ಳಗೆ ರೂಮಲ್ಲಿ ತುಂಬಿದ ಸಿಗರೇಟಿನ ಹೊಗೆಯ ಹಾಗೆ ಒಂದೆರಡು ಮೋಡಗಳು ಹರಿದಾಡಿದವು. ಆಕಾಶದ ವೈಭವದ ವಿನ್ಯಾಸವನ್ನು ತದೇಕ ಚಿತ್ತದಿಂದ ನೋಡುತ್ತಿದ್ದ ವೆಂಕಟ



ರಾಮ್ ಕವಿ ಭಾಸನ ಒಂದು ಸಂಸ್ಕೃತ ವಾಕ್ಯವನ್ನು ಉದ್ಧರಿಸಿ, ಸುಂದರಿಯೊಬ್ಬಳ ಮುಖದ ಮೇಲೆ ಹಾರಾಡಿದ ಮುಂಗುರುಳಿನ ಹೋಲಿಕೆ ಕೊಟ್ಟರು. "ಇವೆಲ್ಲಾ ಕ್ಲೀಷೆ ಅನ್ಸುತ್ತಲ್ವಾ," ಎಂದು ಅವರೇ ಹೇಳಿಕೊಂಡು, "ಆದರೆ ಒಮ್ಮೊಮ್ಮೆ ಅದು ಏನು ಮಾಡಿದರೂ ಹಾಗೇ ಕಾಣ್ಸೋದು" ಎಂದರು. ಅಂಥ ಆಕಾಶದ ಸುಂದರ ರೂಪ ಹೊಸದೇನನ್ನೂ ಹೇಳಲು ಹೊಳೆಯಿಸುವುದೇ ಇಲ್ವಲ್ಲಾ ಎಂಬ ನೋವು ಆ ಮಾತಿನಲ್ಲಿದ್ದಂತೆ ತೋರಿತು.

ಆದಿನ ನಾವು ದಾಸ್ತೋಯೆವ್‌ಸ್ಕಿಯ ಕಾದಂಬರಿಗಳಿಂದ ಹೆಗ್ಗೋಡಿನ ರಂಗ ಮುಂದಿರವರೆಗೆ ಸಾವಿರ ಮಾತಾಡಿರಬಹುದು. ಸಾಹಿತಿಗಳಿಗೇ ಹೆಚ್ಚಾಗಿ ಲಭ್ಯವಾಗುವ ಸೂಕ್ಷ್ಮ ಸಂವೇದನಾಶೀಲ ಮನಸ್ಸು ಅವರಿಗೆ ದತ್ತವಾಗಿತ್ತು. ಆಗ ನನಗನಿಸಿದ್ದು ಇಂಥವರ ಕೈಗೆ ಈ ದೇಶದಲ್ಲಿ ಅಧಿಕಾರ ಬರುವುದಿಲ್ಲ ಎಂದು. ಏಕೆಂದರೆ ಇವರು ಅತ್ಯಂತ ಸಿಮ್ಮರವಾದಿಗಳೂ ಪ್ರಾಮಾಣಿಕರೂ ಆಗಿರುತ್ತಾರೆ ಮತ್ತು ಇವರಿಗೆ ಮೋಸ ಮಾಡಲು ತಿಳಿಯುವುದಿಲ್ಲ. ವ್ಯಕ್ತಿತ್ವವನ್ನು ಮಾರಿ ಅಧಿಕಾರ ಪಡೆಯುವ ಚಾಲಾಕನ್ನು ಕಲಿ







ವಿಟಮಿನ್ ಡಿ ಮತ್ತು ಕ್ಯಾಲ್ಶಿಯಂ
ಫಾಸ್ಫೇಟ್‌ಗಳಿಂದ ಸಮೃದ್ಧವಾದ ಅಪ್ಪಟ
ಗ್ಲೂಕೋಸ್ ಪೌಡರ್—
**ಗ್ಲ್ಯಾಕ್ಸೋ**ದವರ ಕೊಡುಗೆ

HTB-GLL-6590-KN

ಯುವುದು ಇಂಥ ಸೂಕ್ಷ್ಮ ಸಂವೇದನಾ ಶೀಲ ಮನಸ್ಸಿಗೆ ಸಾಧ್ಯವೇ ಇಲ್ಲ. ವೆಂಕಟರಾವ್ ಸಂಥವರಿಗೆ ಅಧಿಕಾರದ ಅಭಿಲಾಷೆಯೂ ಇಲ್ಲ. ಏಕೆಂದರೆ ಒಪ್ಪಂದಕ್ಕೆ ಒಡ್ಡಿಕೊಂಡು ವ್ಯಕ್ತಿತ್ವ ವಿದಳನದಲ್ಲಿ ಅವರು ಬದುಕಲಾರರು.

ಸಮಾಜವಾದಿಗಳು ಸಮಯ ಸಾಧಕರು ಎಂಬುದು ಅನೇಕರ ಅಭಿಪ್ರಾಯ. ಅವಕಾಶ ಸಿಕ್ಕಿದಾಗಲೆಲ್ಲ ಕಾಂಗ್ರೆಸ್ಸಿಗೆ ಹಾರಿ ಲಾಭಗಿಟ್ಟಿಸಿ-ಕೊಂಡ ಸಮಾಜವಾದಿಗಳ ಉದ್ದವ ಪಟ್ಟಿಯನ್ನು ನೋಡಿ ಜನರಿಗೆ ಬಹುಶಃ ಹೀಗೆ ಅನ್ನಿಸಿರಬೇಕು. ಆದರೆ ವೆಂಕಟರಾವ್ ಪ್ರಜಾಪ್ರಭುತ್ವದ ತತ್ವಗಳಿಗೆ ತಮ್ಮನ್ನು ಅರ್ಪಿಸಿಕೊಂಡು, ಸತತವಾಗಿ ವಿರೋಧ ಪಕ್ಷದ ಆತ್ಮಕ್ಕೆ ಆಕ್ಸಿಜನ್ ತುಂಬಿಸಿ ಸರಿ ಮಾಡಲು ಹೆಣಗಾಡಿದರು. ಅವರೆಂದೂ ಜಾರ್ಜ ಫರ್ನಾಂಡಿಸ್ ಹಾಗೆ ಇಂದಿರಾ ಗಾಂಧಿಯನ್ನು ವಿಪರೀತ ಬೈದವರಲ್ಲ. ಆದರೆ ಗಂಭೀರವಾಗಿ ಜನರು [ಏಕೆ ಹೀಗೆ ಶ್ರೀಮತಿ ಗಾಂಧಿಯನ್ನು ಬೆಂಬಲಿಸುತ್ತಾರೆ ಎಂಬುದನ್ನು ಆಳವಾಗಿ ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದರು. ನಮ್ಮ ಜನರ ಮನಸ್ಸನ್ನು ಮೂಲಭೂತವಾಗಿ ಅರ್ಥಮಾಡಿಕೊಂಡು, ಅವರಿಗೆ ಸರಿ ಯಾವುದು ತಪ್ಪು ಯಾವುದು ಎಂಬುದನ್ನು ಅರ್ಥವಾಗುವ ಹಾಗೆ ತಿಳಿಸಿ ಹೇಳಿಕೊಡಬೇಕು ಎನ್ನುತ್ತಿದ್ದರು.

ಸತ್ಯಾಗ್ರಹ ಕಾಲದಲ್ಲಿ ಕೂಲಿಗಳ ಮನೆಯಲ್ಲಿ ಬಗನಿ ಹೆಂಡ ಕುಡಿದು ಹೇಗೆ ಸ್ವಸ್ಥ ಮಲಗಬಲ್ಲೆವೋ ಅದೇ ಸಮಚಿತ್ತದಲ್ಲಿ ವೈಭವದ ಹೋಟೆಲೊಂದರಲ್ಲಿ ನಾವು ರಾಯಲ್ ಸಲ್ಯೂಟ್ ಕೂಡಾ ಕುಡಿಯಬಲ್ಲೆವು ಎಂದೊಮ್ಮೆ ಸೋಶಲಿಸ್ಟ ಎಸ್. ಪಿಸ್. ಕುಮಟಾ ಹೇಳಿದ್ದರು. ಈ ಮಾತು ನೆನಪಿಗೆ ಬಂದಾಗಲೆಲ್ಲ ಸಾಹಿತ್ಯ ಓದುವ ನಮ್ಮ ಅನೇಕ ಸಮಾಜವಾದಿಗಳ ವ್ಯಕ್ತಿತ್ವ ಬಹಳ ಸಂಕೀರ್ಣವಾದದ್ದೆಂದು ತೋರುತ್ತದೆ. ಬೆಕಾದಾಗ ವಿಮಾನದಲ್ಲಿ, ಫಸ್ಟ್‌ಕ್ಲಾಸ್ ರೈಲಿನಲ್ಲಿ, ಸ್ಟಾರ್ ಕಾರುಗಳಲ್ಲಿ ಓಡಾಡಿದ ವ್ಯಕ್ತಿ ವೆಂಕಟ್‌ರಾವ್. ಆದರೆ ಅವರೊಬ್ಬರೇ ಟ್ಯಾಕ್ಸಿಯಲ್ಲಿ ಪ್ರಯಾಣಿಸುವಾಗ ಎಂದೂ ಹಿಂದಿನ ಸೀಟಿನಲ್ಲಿ ಕುಳಿತವರಲ್ಲ. ಎದುರಿನ ಸೀಟಿನಲ್ಲಿ ಟ್ಯಾಕ್ಸಿ ಡ್ರೈವರ್‌ನ ಪಕ್ಕ ಕುಳಿತು ಮಾತಾಡುವುದು ಅವರ ಹವ್ಯಾಸ. ಬಾಂಬೆಯ ಟ್ಯಾಕ್ಸಿ ಡ್ರೈವರ್ ಒಬ್ಬ ಜನತಾ ಪಾರ್ಟಿಯ ಆರ್ಥಿಕ ಸಿದ್ಧಾಂತಗಳ ಬಗ್ಗೆ ಮತ್ತು ಚರಣಸಿಂಗರ ಬಗ್ಗೆ ಮಾಡಿದ ಟೀಕೆಗಳನ್ನು ಅವರು ಒಂದು ಭಾಷಣದಲ್ಲಿ ಹೇಳಿದ್ದರು. ವೆಂಕಟರಾವ್ ಎಲ್ಲಾ ತರದ ಜನರ ಜೊತೆ ಮಾತಾಡುತ್ತಿದ್ದರು. ಜನಗಳ ನೋವನ್ನು ಹತ್ತಿರದಿಂದ ನೋಡುವ ಕಾಳಜಿ ಅವರದ್ದು. ಕಾವ್ಯದಲ್ಲೂ ಅವರು ಇಷ್ಟಪಡುತ್ತಿದ್ದದ್ದು ಇಂಥ ತಿಳಿಯುವ ಅರಿಯುವ ಮಹಾಲ ಕುತೂಹಲವನ್ನು. ಪ್ರೊ. ಎಂ. ಗೋಪಾಲಕೃಷ್ಣ ಅಡಿಗರ 'ವರ್ಧಮಾನ' ಕವನವನ್ನು ಅವರು ತುಂಬಾ ಮೆಚ್ಚಿದ್ದರು. ಏಕೆಂದರೆ ಅವರೇ ಹೇಳುವಂತೆ, ಯುವ ಮನಸ್ಸು ಮತ್ತು ಶಕ್ತಿಯ ಅತ್ಯಂತ ಸಮಂಜಸವಾದ ತಿಳುವಳಿಕೆಯ ಅನುಭವ 'ವರ್ಧಮಾನ' ಕವನದಲ್ಲಿದೆ.

ಜನಗಳ ಸಾಮೂಹಿಕ ಬದುಕನ್ನು ಅಲ್ಲಿನ ಸಮಸ್ಯೆಗಳನ್ನು ತಿಳಿದು ಪರಿಹಾರ ಯೋಚಿಸುವ ಶಕ್ತಿ ಇದ್ದ ಹಾಗೆ, ಅವರಿಗೆ ವ್ಯಕ್ತಿಯೊಬ್ಬನ ಅಂತರಂಗವನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯವೂ ಇತ್ತು. ಈ ರೀತಿ ವ್ಯವಸ್ಥೆ ಮತ್ತು ವ್ಯಕ್ತಿಯ ಹೊಂದಾಣಿಕೆಯ ಮತ್ತು ಪ್ರತ್ಯೇಕತೆಯ ಸಂಬಂಧ ಕಲ್ಪನೆ ಇದ್ದುದರಿಂದಲೇ ಅವರು ದೊಡ್ಡ ತಾತ್ವಿಕರಾದರೆಂದೂ ಹೇಳಬಹುದು. ಇನ್ನೊಂದು ಉದಾಹರಣೆ ಹೇಳುವುದಾದರೆ;

ಚಿಕ್ಕಮಗಳೂರು ಚುನಾವಣಾ ಸಮಯದಲ್ಲಿ ಜಾರ್ಜ್ ಫರ್ನಾಂಡಿಸರ ಕಾರು ಹಗಲಿರುಳು ಓಡಾಡುತ್ತಿತ್ತು. ಬಿಡುವಿರದ ಕಾರಿನ ಅಷ್ಟೂ ಓಡಾಟಕ್ಕೂ ಒಬ್ಬನೇ ಡ್ರೈವರ್. ಅತ್ಯಂತ ವಿಶ್ವಾಸಾರ್ಹ ಡ್ರೈವರ್ ಎಂದು ಹೆಸರು ಪಡೆದಿದ್ದ ಆತ, ಹಿಂದೆ ಸೋಶಲಿಸ್ಟ್ ಪಾರ್ಟಿಯ ರಾಜ್ಯ ಕಛೇರಿಗಿದ್ದ ಕಾರಿನ ಚಾಲಕನಾಗಿದ್ದ. ಅವನು ಕೇವಲ ಪಾರ್ಟಿಯ ಕಾರು ಬಿಡುವುದು ಮತ್ತು ಅದಕ್ಕವನು ಸಂಬಳವನ್ನು ಪಡೆಯುತ್ತಿದ್ದ.

ಹಿಂದೆ ಸಮಾಜವಾದಿ ಚಳವಳಿಯೊಂದರಲ್ಲಿ ಜೈಲು ಕಂಡಿದ್ದ ಆತ ಶಾಂತವೇರಿ ಗೋಪಾಲ

ಗೌಡರ ಕಾಲದಲ್ಲಿ ಬೆಂಗಳೂರಿನ ಪಾರ್ಟಿ ಕಚೇರಿಯಲ್ಲಿ ಕೆಲಸ ಪಡೆದಿದ್ದ. ನಿಧಾನಕ್ಕೆ ಅವನಲ್ಲಿ ತಾನೂ ಒಂದು ಸ್ವಂತ ಕಾರನ್ನು ಬಾಡಿಗೆಗೆ ಓಡಿಸಬೇಕು ಎಂಬ ಆಸೆ ಬೆಳೆಯಿತು. ಜೆ. ಎಚ್. ಪಟೇಲ್ ಲೋಕಸಭಾ ಸದಸ್ಯರಾದಾಗ ತನ್ನ ಆಸೆ ತೋಡಿಕೊಂಡ. ಆ ಮೇಲೆ ಅನುಕ್ರಮವಾಗಿ ಮೇಲೆ ಬಂದ ಎಲ್ಲ ಸೋಶಲಿಸ್ಟ್ ಮುಖಂಡರಲ್ಲೂ ತನಗೆ ಜಾಮೀನ ನಿಂತು ಕಾರು ಕೊಳ್ಳಲು ಬ್ಯಾಂಕಿನಿಂದ ಹದಿನೈದು ಸಾವಿರ ಸಾಲ ಕೊಡಿಸಬೇಕೆಂದು ಬೇಡುತ್ತಾ ಹೋದ.

ಎಲ್ಲರೂ ಆಶ್ವಾಸನೆ ಕೊಡುತ್ತಾ ಹೋದರು. ತಾವು ಪ್ರತಿದಿನ ಓಡಾಡುವ ಕಾರಿನ ಡ್ರೈವರಿಗೆ ನಿತ್ಯ ನೋಡುವ ಮುಖಕ್ಕೆ ಆತ, ಯಾರೋ ಒಬ್ಬ ಎನ್ನುವ ಹಾಗೆ ಬರೀ ಸುಳ್ಳು ಸುಳ್ಳೇ ಆಶ್ವಾಸನೆ ಕೊಡುತ್ತಾ ಹೋದರು. ಪ್ರಾರಂಭದಲ್ಲಿ ಪಕ್ಷದವರು ಹೇಳುವುದು ನಿಜ ಎಂದು ನಂಬುತ್ತಿದ್ದ ಅವನಿಗೆ ಕೊನೆಗದು ಸುಳ್ಳು ಎಂದು ಗೊತ್ತಾದಾಗ ಬಹಳ ಭ್ರಮನಿರಸನಗೊಂಡ. ಮತ್ತೆ ಒಮ್ಮೊಮ್ಮೆ ತೀರಾ ರ್‍ಯಾಶ್ ಆಗಿ ಡ್ರೈವ್ ಮಾಡುತ್ತಿದ್ದನಂತೆ. ಆತನಿಗಾದ ಭ್ರಮನಿರಸನ ಕಾರು ಚಾಲನೆಯಲ್ಲಿ ಅವನಿಗಿದ್ದ ಅದ್ಭುತ ತನ್ಮಯತೆಯನ್ನೂ ನಾಜೂಕಿನ ಶಕ್ತಿಯನ್ನೂ ನಿಧಾನಕ್ಕೆ ಕಡಿಮೆ ಮಾಡುತ್ತಾ ಹೋಯಿತು ಎಂದ ವೆಂಕಟರಾಮ್, ಆತನ ಒಳ್ಳೆಯತನಕ್ಕೆ ತುಂಬಾ ನೋವಾಗಿದೆ. ಅವನ ಮೃದು ಭಾವನೆಗಳು ಸತ್ತಿವೆ, ಆದರೆ ಇಂದಿನ ಸ್ಪರ್ಧೆಯ ಜಗತ್ತಿನಲ್ಲಿ ವ್ಯಕ್ತಿಯ ಒಳಗನ್ನು ನೋಡುವ ತಾಳ್ಮೆ ಯಾವ ನಾಯಕನಿಗಿದೆ ಎಂದರು. ಆ ಮೇಲೆ ಭಕ್ತಿಪುರಸ್ಸರವಾಗಿ ಈಗವನು ಜಾರ್ಜನ ಕೆಲಸ ಮಾಡಿ ಆತನಲ್ಲೂ ಕಾರಿಗೆ ಸಾಲಕೊಡಿಸಲು ಕೇಳುತ್ತಾನೆ, ಪುನಃ ಹಿಂದಿನ ಅನುಭವವೇ ಆಗಿ ಇನ್ನಷ್ಟು ನಿರಾಸೆ ಹೆಚ್ಚುತ್ತದೆ ಎಂದೂ ಸೇರಿಸಿ ಪಾರ್ಟಿ ಡ್ರೈವರ್‌ನ ವಿಷಯ ಮುಗಿಸಿದರು. ವ್ಯಕ್ತಿಯೊಬ್ಬನ ಒಳಗನ್ನು ಕಂಡ, ನಿತ್ಯ ನೋಡುವ ಮುಖಕ್ಕೂ ಹುಸಿ ಆಶ್ವಾಸನೆ ಕೊಡುವ ಕ್ರೌರ್ಯದ ಬಗ್ಗೆ ಜಿಗುಪ್ಸೆ ತಾಳಿದ ರೀತಿ ನೋಡಿ, ಆ ಕ್ಷಣ

ವಿಜ್ಞಾನ ತಿಳಿದ ಒಬ್ಬ ಶ್ರೇಷ್ಠ ಕಾದಂಬರಿಕಾರನಂತೆ ಕಂಡರು.

ಈ ರೀತಿ ತಿಳಿಯುವ ಕುತೂಹಲದಿಂದ ಅರ್ಥಮಾಡಿಕೊಳ್ಳುವ, ಆಮೇಲೆ ಅದನ್ನು ವಿಶ್ಲೇಷಣೆಗೆ ಒಳಪಡಿಸುವ ಮನಸ್ಸಿನ ಪ್ರಕ್ರಿಯೆ ಡಾ. ಲೋಹಿಯಾರ ಪ್ರಭಾವಕ್ಕೆ ಒಳಗಾದವರಿಗೆಲ್ಲ ಸಾಮಾನ್ಯವಾದ ಅಂಶ. ಆದರೆ ಡಾ. ಲೋಹಿಯಾರ ಅನೇಕ ಶಿಷ್ಯರು ಅವರಿಂದ ಪ್ರಾಮಾಣಿಕತೆಯನ್ನು ಮಾತ್ರ ಕಲಿಯಲಿಲ್ಲ. ಅದೂ ವೆಂಕಟರಾಮ್ ಮಾತ್ರ ಸಂಗೀತ ಸಾಹಿತ್ಯ ಮೊದಲಾದವುಗಳಲ್ಲಿ ಆಸಕ್ತಿಯನ್ನು ಬೆಳೆಸಿಕೊಳ್ಳುವುದರೊಂದಿಗೆ ಅತ್ಯಂತ ಪ್ರಾಮಾಣಿಕ ರಾಜಕಾರಣಿಯೂ, ಉತ್ತಮ ಸಂಘಟಕನಾದ ನಾಯಕನೂ ಆಗಿದ್ದರು. ತಮ್ಮ ಪರಿಧಿಯೊಳಗೆ ಬೆಳೆಯುವ ಎಳೆ ನಾಯಕರನ್ನು ಧ್ವಂಸ ಮಾಡುವ



"ಶಾಸ್ತ್ರಿಯವರು ವಿದ್ಯುತ್ ದೀಪದ ಅಡಿ ಕುಳಿತು ಅಭ್ಯಾಸ ಮಾಡುತ್ತಿದ್ದುದು ನನಗೂ ಗೊತ್ತು!! ಆಗ ಪವರ್ ಶಾರ್ಟೇಜ್ ಇರಲಿಲ್ಲ. ಇದು ನಿಮಗೆ ಗೊತ್ತಾ !?"

ಇಂದಿನ ರಾಜಕೀಯ ಕ್ಷೇತ್ರದಲ್ಲಿ ವೆಂಕಟರಾಮ್ ತಮ್ಮ ಸುತ್ತಮುತ್ತಲಿದ್ದವರನ್ನು ನಾಯಕರಾಗಿ ಬೆಳೆಸುತ್ತಿದ್ದ ಅಪರೂಪದ ವ್ಯಕ್ತಿ.

ಜನತಾ ಪಾರ್ಟಿ ಒಡೆದಾಗ ಬಹಳ ನೊಂದ ವೆಂಕಟರಾಮ್ ತಮ್ಮ ಪ್ರೀತಿಯ ಜಾರ್ಜ್ ಫರ್ನಾಂಡಿಸ್ ಮತ್ತು ಮಧು ಲಿಮಯೆ ಜೊತೆ ಸೇರಿ ಮಾಡಿದ ಕೃತ್ಯವನ್ನು ನಿರ್ದಾಕ್ಷಿಣ್ಯವಾಗಿ ವಿರೋಧಿಸಿದರು. ಆದರೂ ಹತಾಶರಾಗದೆ ಇಂಡಿಯಾದಲ್ಲಿ ಸದ್ಯಕ್ಕೆ ಕಾಂಗ್ರೆಸ್ ಬಾಯಿಯಿಂದ ವಿರೋಧ ಪಕ್ಷವನ್ನು ಕಾರ್ಮಿಕ ಹಾಗೂ ರೈತ ಸಂಘಟನೆಯಲ್ಲಿ, ಅದರಲ್ಲೂ ಮುಖ್ಯವಾಗಿ ಹಳ್ಳಿಯ ಕಾರ್ಮಿಕರ ಸಂಘಟನೆಯ ಮೂಲಕ ಮಾತ್ರ ಉಳಿಸಬಹುದೆಂಬ ನಂಬಿಕೆಯಿಂದ, ಆ ಕಡೆ ತಮ್ಮ ಗಮನ ಹರಿಸಿದರು.

ರಾಜಕಾರಣಿ ಬುದ್ಧಿಜೀವಿಯೂ, ವಿಮರ್ಶಕ ವಿದ್ವಾಂಸನೂ ಆಗಿದ್ದ ವೆಂಕಟರಾಮ್ ಇನ್ನಿಲ್ಲ. ಈಗ 'ಅಕ್ಷರ ಪ್ರಕಾಶನ'ದಲ್ಲಿ ಅಚ್ಚಾಗುತ್ತಿರುವ ಅವರ ಹೊಸ ಪುಸ್ತಕ 'ಪರ್ಯಟನೆ' (ಅಮೇರಿಕಾ ಪ್ರವಾಸ ಕಥನ) ವೆಂಕಟರಾಮ್ ವ್ಯಕ್ತಿತ್ವವನ್ನು ಓದುಗರಿಗೆ ಇನ್ನಷ್ಟು ಪರಿಚಯಿಸಬಹುದು. ತಮ್ಮ ಸಾವಿಗೆ ಸ್ವಲ್ಪ ಸಮಯದ ಮೊದಲು ನಮ್ಮ ಪಠ್ಯ ಪುಸ್ತಕದಲ್ಲಿ ಇರುವ ತಪ್ಪುಗಳ ಬಗ್ಗೆ ಅವರು ಬರೆದ ಒಂದು ದೀರ್ಘ ಲೇಖನವನ್ನು ಎರಡು ಕಂತುಗಳಲ್ಲಿ 'ಕನ್ನಡ ಪ್ರಭ' ಪ್ರಕಟಿಸಿತು. ನಮ್ಮ ಎಲಿಮೆಂಟರಿ ಮತ್ತು ಹೈಸ್ಕೂಲು ಪಠ್ಯಪುಸ್ತಕಗಳಲ್ಲಿ ಇರುವ ತಪ್ಪುಗಳ ಬಗ್ಗೆ ವಿಧಾನ ಪರಿಷತ್ತಿನಲ್ಲಿ ಭಾಷಣ ಮಾಡಲು ಅವರು ಅಷ್ಟೂ ಪಠ್ಯ ಪುಸ್ತಕಗಳನ್ನು ಓದಿ ಅಭ್ಯಾಸ ಮಾಡಿದ್ದರು. ನಮ್ಮ ಮಕ್ಕಳಿಗೆ ಯೋಗ್ಯವಾದ, ಅಂದರೆ ಯೋಚನೆ ಮಾಡುವ ಶಕ್ತಿಯನ್ನೂ ಯಾವುದಾದರೂ ಒಂದು ಕೆಲಸ ಮಾಡುವ ಕೌಶಲವನ್ನೂ ಕಲಿಸಿಕೊಡುವ ವಿದ್ಯಾಭ್ಯಾಸ ಇರಬೇಕು ಎಂದು ಒಂದು ಸಂದರ್ಭದಲ್ಲಿ ನಾನು ಹೇಳಿದಾಗ ಅವರದನ್ನು ತುಂಬಾ ಮೆಚ್ಚಿಕೊಂಡಿದ್ದರು.

ವೆಂಕಟರಾಮ್ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದುದು ಸರಕಾರಕ್ಕೆ ಏನನ್ನಾದರೂ ಹೇಳಲು ಬೆಲೆಯುಳ್ಳ ಒಂದು ವೇದಿಕೆಯನ್ನು ಪಡೆಯುವುದಕ್ಕೆ ಮಾತ್ರ. ಅವರ ನಿಜವಾದ ಜೀವವಿದ್ದುದು ಕಾರ್ಮಿಕರ ನಡುವೆಯೆ. ಆದರೂ ಅವರು ಜಾರ್ಜ್ ಫರ್ನಾಂಡಿಸರಂಥ ಜನನಾಯಕ ಅಲ್ಲ. ಕೇವಲ ತಳದಲ್ಲಿದ್ದು ಕಡ್ಡಿಕಟ್ಟುತ್ತಿದ್ದ ಸೂಕ್ಷ್ಮ ಸಂಘಟಕ. ಆದ್ದರಿಂದಲೇ ರಾಜಕೀಯ ಗೊತ್ತಿದ್ದವರಿಗೆ, ರಾಜಕೀಯ ತತ್ವಗಳನ್ನು ಅಭ್ಯಾಸ ಮಾಡುವವರಿಗೆ ವೆಂಕಟರಾಮ್ ಬರೆದದ್ದು, ಬದುಕಿದ್ದು ಮರೆಯಲಾರದ ನೆನಪು. ●



"ನೀನು, ವಿವಾಹವಾದಂದಿನಿಂದ ಈ ತನಕ ಒಂದು ರೀತಿಯ ಭಯ ವಾತಾವರಣ ಸೃಷ್ಟಿಸಿ, ನಿನ್ನ ಹೆಂಡತಿಯ ಸ್ವಾತಂತ್ರ್ಯ ಅಪಹರಿಸಿ, ಅವಳನ್ನೂ ನಿನ್ನ ಕೈಗೊಂಬೆಯಾಗಿಸಿರುವೆಯೆಂದು, ನಿನ್ನ ಮೇಲೆ ಆಪಾದನೆಯಿದೆ..." ಎಂದರು ನ್ಯಾಯಾಧೀಶರು.

ತನ್ನನ್ನು ರಕ್ಷಿಸಿಕೊಳ್ಳುವ ಧ್ವನಿಯಲ್ಲಿ ಆಪಾದಿತ ಹೇಳಿದ: "ಸಾರ್, ಅದು... ಹಾಗಲ್ಲಾ..."

"ನಿನ್ನ ಅಪರಾಧಕ್ಕೆ ಸಮಜಾಯಿಷಿ ಬೇಕಾಗಿಲ್ಲ. ಅವಳನ್ನು ಕೈಗೊಂಬೆಯನ್ನಾಗಿ ಮಾಡಿಕೊಂಡ ನಿನ್ನ ಚಮತ್ಕಾರವನ್ನು ಮಾತ್ರ ಹೇಳಿದರೆ ಸಾಕು..." ಎಂದು ನಡುವೆಯೇ ಬಾಯಿ ಹಾಕಿದರು ನ್ಯಾಯಾಧೀಶರು. —ಎ. ವೆಂಕಟೇಶ

# ಪದಾರ್ಥ ಚಿಂತಾಮಣಿ

– ೧೭ –

ದೇಶದಿಂದ ದೇಶಕ್ಕೆ ಪದಾರ್ಥಗಳ ವಿನಿಮಯ ಆಗುವಾಗ ಅವುಗಳ ಹೆಸರುಗಳೂ ವಿನಿಮಯ ಹೊಂದುತ್ತವೆ ಹೇಗೋ ಹಾಗೆ ಭಾವನೆ, ಕಲ್ಪನೆಗಳ ವಿನಿಮಯದೊಡನೆ ಅವುಗಳಿಗೆ ಸಂಬಂಧಿಸಿದ ಪದಗಳೂ ಸಾಗುವುದು ಸಾಮಾನ್ಯ. ಭಾರತದ ಒಂದು ದರ್ಶನ ಮತ್ತು ಅದಕ್ಕೆ ಸಂಬಂಧಿಸಿದ ಶಾರೀರಿಕ, ಮಾನಸಿಕ ಸಾಧನೆಗಳಿಗೆ ಸಂಸ್ಕೃತದಲ್ಲಿರುವ **ಯೋಗ** ಎಂಬ ಹೆಸರು ಇಂದು ಜಗತ್ತಿನ ಅನೇಕ ಭಾಷೆಗಳಿಗೆಲ್ಲ ಇದ್ದಕ್ಕಿದ್ದಂತೆ ಸೇರಿಕೊಂಡಿದೆ. ಇದು ತೀರ ಈಚೆಗಿನ ಉದಾಹರಣೆಯಾಯಿತು. ಇದ್ದಕ್ಕಿದ್ದಂತೆ ಹೋಗದೆ ಸ್ವೀಕಾರ ಮಾಡುವವರ ನಾಲಗೆಗೆ ಸರಿಹೊಂದುವಂತೆ ಬದಲಾಗುವುದೂ ಆದರಿಂದ ಸಹಸಾ ಇದು ಎಲ್ಲಿಂದ ಬಂತೆಂಬುದು ತಿಳಿಯದಿರುವುದೂ ಉಂಟು. ಭಾರತದ **ಯೋಗಕ್ಕೆ** ಸಂಬಂಧಪಟ್ಟ ಇನ್ನೊಂದು ಶಬ್ದ **ಧ್ಯಾನ.** ಧ್ಯಾನದ ಕಲ್ಪನೆ ಬಹುಶಃ ಬೌದ್ಧಧರ್ಮದ ಸಂಗಡ ಜಪಾನಿಗೆ ಹೋಯಿತು. ಅಲ್ಲಿ ಅದು ನಾಲಗೆಗೆ ಸರಿ ಹೊಂದುವಂತೆ Zen (ಜೆನ್) ಬದಲಾಯಿತು. ಸಂಗಡಲೇ ಧ್ಯಾನವನ್ನು ಕುರಿತು ವಿಶಿಷ್ಟ ಜಪಾನಿ ಅನುಭವ, ಪ್ರಯೋಗಗಳನ್ನು ಅರಗಿಸಿಕೊಂಡು ಅದರ ಅರ್ಥ ಭಾರತದ ಧ್ಯಾನಕಿಂತ ಅಷ್ಟಿಷ್ಟು ಬದಲಾಯಿತು. ಇಂದು ಜಪಾನಿ **ಜೆನ್** ಪಾಶ್ಚಾತ್ಯರನ್ನೂ ಆಕರ್ಷಿಸಿ ಅದು ಜಪಾನಿ ಹೆಸರಿನೊಡನೆ ಅನೇಕ ಪಾಶ್ಚಾತ್ಯ ಭಾಷೆಗಳಿಗೆ ಸಂಕ್ರಮಣ ಹೊಂದಿದೆ. ಈಗ ಧ್ಯಾನದ ಜಪಾನಿ ಸಂಪ್ರದಾಯವನ್ನು ನಿರ್ದೇಶಿಸಲು ನಾವೇ ಆದರೂ **ಜೆನ್** ಪದವನ್ನೇ ಬಳಸಬೇಕಾದ ಪ್ರಮೇಯ ಇದೆ.

ಅಂಕಗಣಿತ ಮತ್ತು ಬೀಜಗಣಿತ ರಂಗಗಳಲ್ಲಿ ಭಾರತೀಯರು ೧೨ನೇ ಶತಮಾನದ ವರೆಗೂ ಇತರರಿಗಿಂತ ಮುಂದಿದ್ದರು. ಇವೆರಡು ಶಾಸ್ತ್ರಗಳನ್ನು ಅರಬರು ಮೊದಲು ಭಾರತೀಯರಿಂದ ಕಲಿತು ಯುರೋಪಿಯನ್ನರಿಗೆ ದಾಟಿಸಿದರು. ಅಂಕಗಣಿತಕ್ಕೆ ಅರಬರು **ಹಿಂದ್ ಸಾ** (ಹಿಂದುಗಳದು) ಎಂದೇ ಹೆಸರು ಕೊಟ್ಟಿದ್ದಾರೆ. ಗಣಿತಶಾಸ್ತ್ರಕ್ಕೆ ಭಾರತೀಯರ ಹಿರಿಯ ಕೊಡುಗೆ ಎನಿಸಿದ **ಶೂನ್ಯ**ವನ್ನು ಅರಬರು ತಮ್ಮ ಭಾಷೆಗೆ **ಸಿಫರ್** (ಖಾಲಿ) ಎಂದು ಅನುವಾದ ಮಾಡಿದ್ದನ್ನೇ ಪಾಶ್ಚಾತ್ಯರು Zero ಎಂದು ರೂಪಾಂತರಿಸಿ ತೆಗೆದುಕೊಂಡರು.

ಆದರೆ ಈ ವ್ಯವಹಾರದಲ್ಲಿ ನಾವು ಯಾವಾಗಲೂ ಕೊಡುವವರೇ ಆಗಿದ್ದೆವೆಂದೆನಿಸುವುದು ವೃಥಾಭಿಮಾನವಾದಿತು. ಜಾಮಿತಿ ಅಥವಾ ರೇಖಾಗಣಿತದಲ್ಲಿ ಮತ್ತು ಖಗೋಲ–ಜ್ಯೋತಿಃಶಾಸ್ತ್ರಗಳಲ್ಲಿ ನಾವು ಗ್ರೀಕರಿಂದ ಕಲಿತದ್ದೇ ಬಹಳ. ಅದಕ್ಕೆ ನಮ್ಮ ೫ನೇ ಶತಮಾನಾನಂತರದ ಬರವಣಿಗೆಗಳಲ್ಲಿ ಬೇಕಾದಷ್ಟು ಕುರುಹುಗಳು ಇವೆ. **ಕೇಂದ್ರ** ಶಬ್ದ ಸಂಸ್ಕೃತವೇ ಎಂದು ಭ್ರಮಿಸುವಷ್ಟು ರೂಢಿಯಾಗಿದೆ. ಆದರೂ ಅದು ಗ್ರೀಕ್ **ಕೇಂತ್ರಾನ್** (Kentron) ಅನ್ನು ಇದ್ದಕ್ಕಿದ್ದಂತೆ ಎತ್ತಿಕೊಂಡದ್ದು. ವರಾಹಮಿಹಿರನ ಬೃಹಜ್ಜಾತಕದಲ್ಲಿ ಇದು ಮೊದಲು ಕಾಣಿಸಿಕೊಳ್ಳುತ್ತದೆ. ಫಲಜ್ಯೋತಿಷದಲ್ಲಿ ಅನೇಕ ವಿಚಾರಗಳನ್ನು ಗ್ರೀಕರಿಂದ ನಾವು ತೆಗೆದುಕೊಂಡದ್ದಕ್ಕೆ **ಕೇಮದ್ರುಮ** (ಗ್ರೀಕ್ Kenodromos) ಫಣಫರ (ಗ್ರೀಕ್ epanaphora) ಎಂಬ ಯೋಗಗಳ ಹೆಸರುಗಳು ಸಾಕ್ಷಿಯಾಗಿವೆ. ಇವಲ್ಲದೆ ಗ್ರಹಗಳಿಗೆಲ್ಲ ಭಾರತೀಯ ಹೆಸರುಗಳಿದ್ದರೂ ಆರ್ಯಭಟನೂ ವರಾಹಮಿಹಿರನೂ ಪರ್ಯಾಯಪದಗಳಾಗಿ ಗ್ರೀಕ್, ಹೆಸರುಗಳನ್ನೂ ಬಳಸಿದ್ದಾರೆ. ಉದಾಹರಣೆಗೆ **ಬೃಹಸ್ಪತಿಗೆ** **ಜೀವ** (ಗ್ರೀಕ್ Zeus). ಶನಿಗೆ **ಕೋಣ** (ಗ್ರೀಕ್ Kronos) ಶಬ್ದಗಳು. ಫಲಜ್ಯೋತಿಷಕ್ಕೆ **ಹೋರಾಶಾಸ್ತ್ರ** ಎಂಬ ಹೆಸರಿದೆ. ಈ **ಹೋರಾ**ವನ್ನು **ಅಹೋರಾತ್ರ**ದ ಸಮಾಹಾರವೆಂದು ಕೆಲವರು ಸಾಧಿಸಿದರೂ ಅದು ಗ್ರೀಕ್ **ಹೋರಾ** ( = ತಾಸು) ಎಂದೇ ಭಾಷಾತಜ್ಞರ ಮತ.

— **ಪಾವೆಂ.**

# ನಗೆಮಲ್ಲಿಗೆ

"ವಾಪಸ್ ಬರೋವಾಗ ಇಲಿಗಳಿಗೋಸ್ಕರ ಏನಾದ್ರೂ ಒಂದಿಷ್ಟು ತೊಗೊಂಡ್ಬನ್ನಿ...ಮರೀಬೇಡಿ..." ಕಚೇರಿಗೆ ಹೊರಟಿದ್ದ ಪತಿಗೆ ಕೂಗಿ ಹೇಳಿದಳು ಹೆಂಡತಿ.

"ಏನು? ಇಲಿಗಳಿಗಾಗಿ ಏನಾದ್ರೂ ಒಂದಿಷ್ಟು ತರಬೇಕಾ? ತರೋಲ್ಲಾ. ಮನೇಲಿರೋದನ್ನೇ ತಿಂದ್ಕೊಂಡಿರೋ ಹಾಗಿದ್ರೆ ಇರ್ಲಿ. ಇಲ್ದೇ ಹೋದ್ರೆ ಹಾಳಾಗಿ ಹೋಗ್ಲಿ......ಅವಕ್ಬೇರೇ ಖರ್ಚ್ಯಾಕೆ?" ಎನ್ನುತ್ತ ಸೈಕಲ್ ಏರಿದ ಪತಿರಾಯ.

*

ಆದೇ ತಾನೇ ಮದುವೆ ಮುಗಿಸಿಕೊಂಡು ಸಾರೋಟನಲ್ಲಿ ಹೆಂಡತಿಯೊಂದಿಗೆ ಕುದುರೆ ಗಾಡಿಯಲ್ಲಿ ಊರಿಗೆ ಹೊರಟಿದ್ದ ಸರದಾರ. ಅರ್ಧ ದಾರಿ ಸಾಗುತ್ತಲೇ ಕುದುರೆ ಮೊಂಡಾಟ ಮಾಡತೊಡಗಿತು. ಸರದಾರ ಸಿಟ್ಟಿನಿಂದ 'ಒಂದು' ಎಂದ. ಕುದುರೆ ಮತ್ತೆ ಮೊದಲಿನಂತೆ ಓಡತೊಡಗಿತು. ಆದರೆ ತುಸು ದೂರ ಓಡಿ ಮತ್ತೆ ಮೊಂಡಾಟಕ್ಕೆ ತೊಡಗಿದಾಗ ಆತ ಮತ್ತೆ 'ಎರಡು' ಎಂದ. ಕುದುರೆ ಮತ್ತೆ ಓಡಿತು-ಒಂದೆರಡು ಮೈಲಿನ ನಂತರ ಅದರ ಮೊಂಡಾಟ ಪುನಃ ಪ್ರಾರಂಭವಾದಾಗ 'ಮೂರು' ಎಂದು ಕೂಗಿದವನೇ ಬಂದೂಕು ಗುರಿಯಿಟ್ಟು ಹಾರಿಸಿದ. ಕುದುರೆ ಸತ್ತು ಬಿತ್ತು.

ಮನೆ ತಲಪಿದ ಒಂದೆರಡು ದಿನಗಳ ನಂತರ ಆಕೆ ಯಾವುದೋ ಒಂದು ಕಾರಣಕ್ಕಾಗಿ ಮೊಂಡಾಟ ಹಿಡಿದಳು. ಆತ ಸಿಟ್ಟಿನಿಂದ 'ಒಂದು' ಎಂದು ಕೂಗಿದ.

ಮುಂದೆ ಐವತ್ತು ವರ್ಷ ಅವರು ಸುಖಿಗಳಾಗಿ ಬಾಳಿದರು.

*

"ನಾನು ಮಾಡೋ ಕೆಲಸದ ಬಗ್ಗೆ, ಆಡೋ ಮಾತಿನ ಬಗ್ಗೆ ನೀವು ಲಕ್ಷ್ಯವಹಿಸೋದೇ ಇಲ್ಲ. ಆ ಕುರಿತು ವಿಚಾರಾನೂ ಮಾಡೋದಿಲ್ಲ" ಪತ್ನಿ ದೂರಿದಳು

"ಸುಳ್ಳು" ಎಂದ ಪತಿ. "ನಾನು ನಿನ್ನೆ ರಾತ್ರಿಯಿಡೀ ವಿಚಾರಾ ಮಾಡ್ತಾನೇ ಇದ್ದೆ. ನಿನ್ನೆ ನೀನು ಮಾಡಿದ ಪಲ್ಯದಲ್ಲಿ ಏನೇನು ಹಾಕಿದ್ದಿ ಎಂದು."

*

ಪತಿಯ ಮೇಲೆ ಸಿಟ್ಟು ಹೆಚ್ಚಾಗಿ ಆತನನ್ನೇ ಹೊಡೆಯಲು ಹೋದಳು ಆಕೆ. ಪಾಪ, ಹೆದರಿಕೊಂಡು ಆತ ಒಂದು ಸೋಫಾದ ಹಿಂದಡಗಿ ಕುಳಿತ. "ಹೇಡಿ, ಹೆದರಪುಕ್ಕ-ನಡೆ ಇಲ್ಲಿಂದ-ಹುಂ" ಎಂದಬ್ಬರಿಸಿದಳು ಹೆಂಡತಿ.

"ನಾನು ಈ ಮನೆಯ ಯಜಮಾನ. ಹೊರಗ್ಯಾಕೆ ಹೋಗ್ಲಿ? ನನಗೆ ಮನಸ್ಸು ಬಂದಲ್ಲಿ ಕೂಡ್ತೇನೆ" ಎಂದ ಆತ.

*

"ಈಗಿನ ಫ್ಯಾಷನ್ ಎಷ್ಟು ಹದ್ದು ಮೀರಿದೆ ಅಂತೀರಿ. ಗಂಡ ಹೆಂಡತೀರಿಬ್ರೂ ಪ್ಯಾಂಟ್ ಹಾಕ್ತವೆ. ಒಂದೇ ಬಣ್ಣದ್ದು. ಇಬ್ರೂ ಕೂದಲು ಬೆಳೆಸಿ ಒಂದೇ ಸಮ ಕತ್ತರಿಸಿರ್ತವೆ. ಹಿಂದಿನಿಂದ ನೋಡಿಬಿಟ್ರೆ ಯಾರು ಗಂಡ, ಯಾರು ಹೆಂಡ್ತಿ ಅನ್ನೋದೇ ಗೊತ್ತಾಗಲ್ಲ ಕಮಲಮ್ಮ...ಛೀ-ಬಹಳಾ ಕಷ್ಟ ಗುರುತಿಸೋದು..."

"ಕಷ್ಟ ಯಾಕೆ ಗೌರಮ್ಮ. ಯಾರು ಮಾತಾಡ್ದ್ರೆ ಕೇಳ್ತಾ ತಲೆ ಹಾಕ್ತಾ ಹೋಗ್ತಿರ್ತಾರೋ ಅದೇ ಗಂಡು. ಅಷ್ಟೇ..."

*

"ನಿನ್ನ ಮುಖ ನೋಡೀದ್ರೆ ಕೆಟ್ಟನಿಸ್ತದಪ್ಪಾ-ಎಷ್ಟು ನಗ ನಗತಾ ಇರ್ತೀಯಾ... ಆದ್ರೆ..."

"ಅದ್ರೇನಾಯ್ತೇ? ನಾನು ನಗತಾ ಇದ್ರೆ ಅದಕ್ಯಾಕೆ ಅಷ್ಟು ಕೆಟ್ಟನಿಸಿಕೊಳ್ತಿ? ಅಂಥದ್ದೇನಾಯ್ತೇಗ?"

"ಏನೂ ಆಗಿಲ್ಲ, ಆಗೋದರಲ್ಲಿದೆ. ನಿನ್ನೆ ನನ್ನಾಕೆ ಒಂದು ರೇಶ್ಮೆ ಸೀರೆ ೫೫೦ ರೂಪಾಯಿಗೆ ಖರೀದಿಸಿದಾಳೆ. ಇವೊತ್ತು ಮಧ್ಯಾಹ್ನ ನಿಮ್ಮನೇಗೆ ಅದನ್ನುಟ್ಟು ಹೋಗೋಳಿದಾಳೆ..."

▪

ಆಸ್ಪತ್ರೆಯಲ್ಲಿ ಸಾಯುವ ಸ್ಥಿತಿಯಲ್ಲಿ ಮಲಗಿದ್ದ ಆಕೆ ತನ್ನ ಗಂಡನಿಗೆ ಹೇಳಿದಳು: "ರಿ...ನಾನು ಸತ್ತುಹೋದ್ರೆ ನನ್ನ ಬಟ್ಟೆಗಳನ್ನ ನಿಮ್ಮ ಎರಡನೇ ಹೆಂಡತಿಗೆ ಹಾಕ್ಕೊಳೋಕೆ ಕೊಡಬೇಡಿ......ನನ್ನ ಬ್ಲೌಸ್‌ಗಳನ್ನ ಅವಳಿಗೆ ಮುಟ್ಟೋಕೂ ಬಿಡಬೇಡಿ..."

"ಹುಂ. ಆಗ್ಲಿ. ಕಾಳಜಿ ಮಾಡಬೇಡಾ ಕಣೆ... ಹಾಗೆ ನೋಡಿದ್ರೆ ಆಕೆಗೆ ನಿನ್ನ ಬಟ್ಟೆಗಳು-ಬ್ಲೌಸ್‌ಗಳು ಮೈಗಾಗೋದೇ ಇಲ್ಲ. ಆಕೆ ನಿನ್ನ ಎರಡು ಪಟ್ಟು ದಪ್ಪ."

▪

ಮೆಜಿಸ್ಟ್ರೇಟ್: ರಾತ್ರಿ ಎರಡು ಗಂಟೆ ಹೊತ್ತಿನಲ್ಲಿ ನೀವೆಲ್ಲಿ ಹೊರಟದ್ರಿ?

ಆಪಾದಿತ: ಭಾಷಣ ಕೇಳಲಿಕ್ಕೆ.

ಮೆಜಿಸ್ಟ್ರೇಟ್: ಭಾಷಣ ಕೇಳಲಿಕ್ಕಾ? ಅರೆ, ರಾತ್ರಿ ಎರಡರ ಹೊತ್ತಿಗೆ?

ಆಪಾದಿತ: ನಿಮಗೆ ನನ್ನಾಕೆಯ ಪರಿಚಯ ಇಲ್ಲಾ ಸಾರ್. ಆಕೆಗೆ ಭಾಷಣ ಮಾಡೋದೂ ಅಂದ್ರೆ ಆಕೆ ಇದಕ್ಕಿಂತ ಹೆಚ್ಚು ಹೊತ್ತು ಕಾದು ಕೂಡಲಿಕ್ಕೆ ತಯಾರು...

▪

ಪತ್ರಿಕೆಯೊಂದರಲ್ಲಿ ವಾರ ಭವಿಷ್ಯ.

ಮೊದಲ ವಾರ: ನೀವು ಯುವಕರಾಗಿದ್ದರೆ ಈ ವಾರದಲ್ಲಿ ನಿಮ್ಮ ಜೀವನದಲ್ಲಿ ಓರ್ವ ಯುವತಿ ಪ್ರವೇಶಿಸುತ್ತಾಳೆ. ಆಕೆಯಿಂದ ನಿಮ್ಮ ಜೀವನ ಸಂತೋಷಮಯವಾಗಲಿದೆ, ಸುಖಮಯವಾಗಲಿದೆ.

ಎರಡನೆ ವಾರ: ಈ ವಾರವಿಡೀ ಸುಖ



"ನಂದು ಮೂರು ಬ್ಯಾಂಡ್ ಇತ್ತು. ನೆನ್ನೆ 'ಬಜೆಟ್ ನ್ಯೂಸ್' ಕೇಳಿದ್ಮೇಲೆ ಒಂದ್ ಬ್ಯಾಂಡ್ ಕಿತ್ತಾಕ್ಬಿಟ್ಟೆ."

ಸಂತೋಷದಲ್ಲಿ ತೇಲಾಡುವಿರಿ. ಏಳೂ ದಿನಗಳೂ ರಸಮಯ ಕ್ಷಣಗಳಿಂದ ಕೂಡಿವೆ. ಆರ್ಥಿಕವಾಗಿಯೂ ಭಾಗ್ಯಶಾಲಿಗಳು.

ಮೂರನೆ ವಾರ: ಈ ವಾರದಲ್ಲಿ ನೀವು ತುಂಬ ಚಿಂತೆಯಿಂದ ಕೂಡಿರುತ್ತೀರಿ. ಇದಕ್ಕೆ ಕಾರಣ ನಿಮಗೆ ಕಳೆದ ಕೆಲ ವಾರಗಳಿಂದ ಯಾರೋ ಸುಳ್ಳು ಹೇಳುತ್ತಲಿದ್ದಾರೆ...

▪

ಒಬ್ಬ ಭವಿಷ್ಯವಾದಿ ಬರಿ ಉಂಗುರ ನೋಡಿ ಭವಿಷ್ಯ ಹೇಳುತ್ತಿದ್ದ. ಒಂದು ದಿನ ಆತನ ಮಿತ್ರ "ಏನಯ್ಯಾ, ಈಗ ಬಹಳ ಚೆನ್ನಾಗಿರಬಹುದಲ್ಲ ನಿನ್ನ ಆದಾಯ..." ಎಂದು ಕೇಳಿದ.

"ಏನು ಆದಾಯವೋ ಮಹರಾಯಾ ಬೇಡ ಆ ಸುದ್ದಿ."

"ಯಾಕೋ?"

"ಏನ್ಹೇಳ್ಲಿ? ಭವಿಷ್ಯ ಕೇಳಿದ ಮೇಲೆ ದಕ್ಷಿಣೆ ಕೊಡಿ ಅಂದ್ರೆ ಮತ್ತೆ ಉಂಗುರಾನೇ ತೋರಿಸ್ತಾರೆ..."

# "ಅಮ್ಮಾ, ತುಂಬಾ ಉರೀತಾಯಿದೆ, ತುರಿಸ್ತಾಯಿದೆ, ನೋಡಬಾರಮ್ಮ."

ನೈಸಿಲ್
ಬಳಸಿರಿ.
ಶೀಘ್ರ ಉಪಶಮನಕ್ಕಾಗಿ
ತ್ವಚೆ ಉರಿತದ ಪಾಡರ್.




2 ಬಗೆಯ
ಡಬ್ಬಿಗಳಲ್ಲಿ ಲಭ್ಯ
'ನೀಲಿ' ಮತ್ತು
'ಚಂದನ'.

**ನೈಸಿಲ್ ತನ್ನಿರಿ ತ್ವಚೆ ಉರಿತವನ್ನು ಮರೆಯಿರಿ.**



ಔಷಧಿಯುಕ್ತ ನೈಸಿಲ್:
1. ಹೆಚ್ಚಿನ ಬಿಸಿಯುಸಿರನ್ನು ತಡೆಯುತ್ತದೆ.
2. ಬೆವರನ್ನು ಹೀರಿಕೊಳ್ಳುತ್ತದೆ.
3. ದುರ್ವಾಸನೆ ಕೊಡುವ ಕ್ರಿಮಿಗಳನ್ನು ನಾಶಮಾಡುತ್ತದೆ.
4. ತ್ವಚೆಯನ್ನು ಸಂತವಿಸುತ್ತದೆ.

CASGLN-4 152 KAN

ಇಲ್ಲಿ ಇಂಗ್ಲೀಷು ಬಾರದ ಭಾರತೀಯರೂ ಇದ್ದಾರೆ
ಕಂದಾಚಾರದ 'ಬ್ರಿಟಿಶ್ ಸ್ವಾಮಿ'ಗಳೂ ಇದ್ದಾರೆ

# ಇಂಗ್ಲಂಡಿನಲ್ಲೊಂದು ಇಣುಕು ನೋಟ

**ಪುಂಡಿಕ್ಕಾ ಗಣಪಯ್ಯ ಭಟ್ಟ**

"ವಿಚ್ ಪಾಸ್ ಪೋರ್ಟ್ ಯು ಆರ್ ಹ್ಯಾವಿಂಗ್ ?"

"ಇಂಡಿಯನ್,"

"ದೆನ್ ಯು ಕಂ ಟುಮಾರೊ ವಿದ್ ರಿಟರ್ನ್ ಟಿಕೆಟ್ ಎಂಡ್ ಮನಿ ಫಾರ್ ಯುವರ್ ಎಕ್ಸ್‌ಪೆನ್ಸಸ್ ಇನ್ ಇಂಗ್ಲಂಡ್." ಅಥೆನ್ಸಿನ ಬ್ರಿಟಿಷ್ ರಾಯಭಾರೀ ಕಚೇರಿಗೆ ಇಂಗ್ಲಂಡಿನ ವಿಸಾಕ್ಕಾಗಿ ಹೋದಾಗ ಅಲ್ಲಿನ ಅಧಿಕಾರಿಯೊಬ್ಬರೊಂದಿಗೆ ನಡೆದ ಸಂಭಾಷಣೆಯ ತುಣುಕು ಇದು. ಅವರಾಜ್ಞೆಯನ್ನು ಶಿರಸಾ ವಹಿಸಿ ಸರ್ವಸನ್ನದ್ಧನಾಗಿ ಮರುದಿನ ರಾಯಭಾರಿ ಕಚೇರಿಯ ಮೆಟ್ಟಲೇರಿದೆ. ನನ್ನ ಕುಲಗೋತ್ರ, ಪೂರ್ವೋತ್ತರಗಳನ್ನೆಲ್ಲ ಜಾಲಾಡಿಸಿ ಕೊನೆಗೆ, ಇಂಗ್ಲಂಡಿನ ಸೌತಾಂಪ್ಟನ್ ವಿಶ್ವವಿದ್ಯಾಲಯದವರು ಅಲ್ಲಿನ ಪುರಾತತ್ವ ಉತ್ಖನನ ಒಂದರಲ್ಲಿ ಭಾಗವಹಿಸುವಂತೆ ಕಳಿಸಿದ್ದ ಕರೆಪತ್ರದ ಕೂಲಂಕಷ ಪರಿಶೀಲನೆಯ ನಂತರ ನನಗೆ ವೀಸಾ ಪ್ರದಾನ ಮಾಡಲಾಯಿತು.

ಭಾರತೀಯರಿಗೆ ಇಂಗ್ಲೆಂಡಿನ ವೀಸಾ ಎಂದರೆ ಕನಸಿನ ಗಂಟೇ ಸರಿ. ಇಂಗ್ಲೆಂಡಿಗೆ ಸಾಗುವವರೆಲ್ಲ ಅಲ್ಲಿ ಧ್ವಜ ಊರಲೆಂದೇ ತೆರಳುವವರೆಂಬ ಬ್ರಿಟಿಷ್ ಸರಕಾರದ ಭಾವನೆ ಇದಕ್ಕೆ ಕಾರಣ. ಇದು ಬಹುಮಟ್ಟಿಗೆ ಸತ್ಯ ಕೂಡ. ಈ ಸಂಬಂಧದಲ್ಲಿ ಇನ್ನೊಂದು ಘಟನೆಯನ್ನು ಮಿತ್ರರೋರ್ವರು ಇತ್ತೀಚೆಗೆ ನನಗೆ ಹೇಳಿದರು. ಪಂಜಾ



ಬಿಯೊಬ್ಬ ದಿಲ್ಲಿಯ ಬ್ರಿಟಿಶ್ ದೂತಾವಾಸದಲ್ಲಿ ಪ್ರವಾಸಿ ವೀಸಾಕ್ಕಾಗಿ ಅರ್ಜಿ ಗುಜರಾಯಿಸಿದ್ದನಂತೆ. ಆತನ ಪ್ರವಾಸೋದ್ದೇಶ(?)ವನ್ನು ಚೆನ್ನಾಗಿ ಅರ್ಥಮಾಡಿಕೊಂಡ ವೀಸಾ ಅಧಿಕಾರಿಗಳು ಆತನೊಡನೆ, "ನೀನು ಕಾಶ್ಮೀರವನ್ನು ಸಂದರ್ಶಿಸಿದ್ದಿಯಾ?" ಎಂದು ಪ್ರಶ್ನಿಸಿದಾಗ ಆತನಿಂದ "ಇಲ್ಲ" ಎಂಬ ಉತ್ತರ ಬರಲು, "ಹಾಗಾದರೆ, ಮೊದಲು ನಿನ್ನ ದೇಶದಲ್ಲೇ ಇರುವ ಕಾಶ್ಮೀರವನ್ನು ಸಂದರ್ಶಿಸಿ ಬಾ. ನಂತರ ಇಂಗ್ಲೆಂಡ್ ಪ್ರವಾಸ ಕೈಗೊಳ್ಳುವಿಯಂತೆ" ಎಂದು ಸಾಗ ಹಾಕಿದರಂತೆ. ಇದು ಕೇವಲ ಅಂತೆ ಕಂತೆಗಳ ಮಾತೋ ಅಥವಾ ಸತ್ಯ ಸಂಗತಿಯೋ ನಾನರಿಯೆ; ಆದರೆ ಇಂಗ್ಲೆಂಡಿನ ವೀಸಾ ಗಿಟ್ಟಿಸುವಲ್ಲಿನ ಕಷ್ಟಕ್ಕೊಂದು ಉದಾಹರಣೆ ಮಾತ್ರ ನಿಜ.

## ಕೊಂಕಣ ಸುತ್ತಿ ಮೈಲಾರಕ್ಕೆ

ಸೂಟ್‌ಕೇಸುಧಾರಿಯಾಗಿ ಲಂಡನ್ನಿನ ಗೇಟ್‌ವಿಕ್ ವಿಮಾನ ನಿಲ್ದಾಣದಲ್ಲಿ ನಾನು ನೆಲ ಕಂಡಾಗ ಮುಂಜಾನೆ ಆರು. ನಿಲ್ದಾಣದಲ್ಲಿ ನಕ್ಷತ್ರಕರಂತೆ ಕಾದಿದ್ದ ವಲಸೆ ನಿಯಂತ್ರಣಾಧಿಕಾರಿಗಳ ಯಕ್ಷಪ್ರಶ್ನೆಗಳಿಗೆ ಸಮಾಧಾನ ನೀಡಿ ಹೊರಬಂದಾಗ ಪುನರ್ಜನ್ಮ ಪಡೆದ ಅನುಭವ. ನನ್ನ ಗುರಿ ದಕ್ಷಿಣ ಇಂಗ್ಲೆಂಡಿನ ಸೌತಾಂಪ್ಟನ್. ಇಂಗ್ಲೆಂಡಿನ ಜಿಯಾಗ್ರಫಿಯದು ನನಗೆ ಭೂಪಟ ಜ್ಞಾನ ಮಾತ್ರ. ಗೇಟ್‌ವಿಕ್ಕಿನಿಂದ ಲಂಡನ್ನಿನ ವಿಕ್ಟೋರಿಯಾ ಮೂಲಕ ಅಥವಾ ಮಯೂ ಹವೆಂಟ್ ಸೌತಾಂಪ್ಟನ್ನಿಗೆ ಪಯಣಿಸಬಹುದೆಂಬ ಪ್ರವಾಸಿ ಮಾಹಿತಿ ದೊರೆಯಿತು. ಅದಾವ ಭೂತ ನನ್ನ ತಲೆ ಹೊಕ್ಕಿತ್ತೋ, ಹವೆಂಟ್ ಮೂಲಕ ದಾರಿಯನ್ನಾರಿಸಿದೆ. ಸರಿ, ಅಲ್ಲಿಂದ ನನ್ನ ದಂಡ(!)ಯಾತ್ರೆ ಶುರು.

ಗೇಟ್‌ವಿಕ್ಕಿನಿಂದ ನಾನೇರಿದ ರೈಲಿಗೆ ಲಿಟಲ್ ಹಾಂಟನ್ ಎಂಬಲ್ಲಿ ಟಾಟಾ ಹೇಳಬೇಕಾಯಿತು. ಅಲ್ಲಿಂದ ನನ್ನನ್ನು ಹೊತ್ತ ರೈಲು ಹವೆಂಟಿನಲ್ಲಿ ಕೊನೆಗೊಂಡಿತು. ಹವೆಂಟಿನಿಂದ ಕೋಸ್‌ಹಾಂ ಎಂಬಲ್ಲಿಗೆ ಬಸ್ಸಿನಲ್ಲಿ ಪಯಣಿಸಿ ಅಲ್ಲಿಂದ ಸೌತಾಂಪ್ಟನ್ನಿಗೆ ಪುನಃ ರೈಲು ಹಿಡಿಯಬೇಕೆಂಬ ಮಾಹಿತಿ ನನ್ನ ಜಂಘಾಬಲ ಉಡುಗಿಸದಿರಲಿಲ್ಲ. ಹೊಟ್ಟೆ ಹಾಡುತ್ತಿತ್ತು. ಛಲ ಬಿಡದ ತ್ರಿವಿಕ್ರಮನಂತೆ ಸೂಟ್‌ಕೇಸನ್ನು (ಶವವನ್ನಲ್ಲ) ಹೆಗಲಿಗೇರಿಸಿ ರೈಲ್ವೆ ನಿಲ್ದಾಣದಿಂದ ಹೊರಬಂದು ಅರ್ಧ ತಾಸು ಹಣ ಕಾದು ಬಸ್ಸಡರಿ ಕೋಸ್‌ಹಾಂ ಸೇರಿದೆ. ಅಲ್ಲಿಂದ ಮತ್ತೊಂದು ರೈಲಿನೊಳಗೆ ತೂರಿ ಅಂತೂ ಇಂತೂ ಸೌತಾಂಪ್ಟನ್ ತಲುಪಿದೆ. ಗೇಟ್‌ವಿಕ್ಕಿನಿಂದ ಎಂಟು ಗಂಟೆಗೆ ಆರಂಭವಾದ ನನ್ನ ದಂಡಯಾತ್ರೆ ಸೌತಾಂಪ್ಟನ್ನಿನಲ್ಲಿ ಕೊನೆಗೊಂಡಾಗ ಮಟ ಮಟ ಮಧ್ಯಾಹ್ನ ೧೧ ಗಂಟೆ. ಲಂಡನ್ನಿನ ವಿಕ್ಟೋರಿಯಾ ಮೂಲಕ ಪಯಣಿಸುತ್ತಿದ್ದರೆ ಕೇವಲ ಎರಡೂವರೆ ತಾಸಿನೊಳಗೆ ಗುರಿ ಸೇರುತ್ತಿದ್ದೆ ಎಂದರಿತಾಗ ಪೆಚ್ಚಾದೆ.



## ಸ್ವಯಂಪಾಕ

ಸೌತಾಂಪ್ಟನ್ನಿನಲ್ಲಿ ತಂಗಿದ್ದಷ್ಟು ಕಾಲ ನಾನು ವಾಸಿಸುತ್ತಿದ್ದದ್ದು ಆರು ಮಂದಿ ಬ್ರಿಟಿಶ್ ವಿದ್ಯಾರ್ಥಿಗಳೊಂದಿಗೆ, ಈ ಪೈಕಿ ಇಬ್ಬರು ಹುಡುಗಿಯರು. ನಮಗೆಲ್ಲ ಒಂದೇ ಅಡಿಗೆ ಮನೆ, ಸ್ನಾನಗೃಹ. ಆದ್ದರಿಂದ ಎಲ್ಲವೂ ಸರದಿ ಪ್ರಕಾರ. ಅಡಿಗೆ ಮನೆಯಲ್ಲಿ ಸ್ವಯಂಪಾಕಕ್ಕೆ ಸರ್ವ ಸಲಕರಣೆಗಳೂ ಇದ್ದುದರಿಂದ ಎಲ್ಲರೂ ಸ್ವಯಂಪಾಕಿಗಳೆ. ಆದರೆ ಸೇರಿದ ಎರಡೇ ದಿನಗಳಲ್ಲಿ ಸ್ವಯಂಪಾಕಕ್ಕೆ ನಾನು ಪೂರ್ಣವಿರಾಮ ಹಾಕಬೇಕಾಗಿ ಬಂದುದು ನನ್ನ ಗ್ರಹಚಾರ!

ಸೇರಿದ ಮರುದಿನವೇ ಭಾರತೀಯ ದಿನಸಿ ಅಂಗಡಿಯೊಂದರಿಂದ ಅಡುಗೆಗೆ ಬೇಕಾದ ಸಾಮಗ್ರಿಗಳನ್ನೆಲ್ಲ ಖರೀದಿಸಿ ತಂದೆ. ಸಂಜೆ ಏಳುಗಂಟೆಯ ಸಮಯ. ಪಾತ್ರೆಯಲ್ಲಿ ಈರುಳ್ಳಿ, ಟೊಮೇಟೊ, ಮೆಣಸು, ಹಾಗೂ ಸಾಂಬಾರ ಪುಡಿಗಳ ಮಿಶ್ರಣವನ್ನು ಬೇಯಲು ಇಟ್ಟೆ. ಅನೇಕ ದಿನಗಳಿಂದ ಸಪ್ಪೆಯೂಟ ಉಂಡು ನಾಲಿಗೆಯ ರುಚಿ ಕೆಟ್ಟಿದ್ದುದರಿಂದ ಮೆಣಸಿನ ಪುಡಿಯನ್ನೇನೋ ಸ್ವಲ್ಪ ಹೆಚ್ಚಾಗಿಯೇ ತೂರಿದ್ದೆ. ಇನ್ನೇನು ರುಚಿಕರ ಸಾಂಬಾರು ತಯಾರಾದಂತಾಯ್ತು ಎಂದುಕೊಂಡು ಹಜಾರದಲ್ಲಿ ಟಿ. ವಿ. ವೀಕ್ಷಿಸುತ್ತಿದ್ದ ಆರು ಮಂದಿಯೊಳಗೆ ಏಳನೆಯವನಾದೆ. ಸುಮಾರು ಐದು ನಿಮಿಷ ಕಳೆದಿರಬೇಕು. ನಮ್ಮ ಪೈಕಿ ಚುರುಕು ಮೂಗಿನ ಮಾರ್ಗರೇಟ್‌ಳಿಂದ, "ಈಸ್ ಸಮ್‌ಥಿಂಗ್ ಬರ್ನಿಂಗ್ ಇನ್‌ಸೈಡ್?" ಎಂಬ ಪ್ರಶ್ನೆ. ಖಾರದಡುಗೆಯ ಕನಸಿನಲ್ಲಿದ್ದ ನನಗಾವ ವಾಸನೆಯೂ ಬಡಿಯಲಿಲ್ಲ. ಇನ್ನೊಂದೈದು ನಿಮಿಷದಲ್ಲಿ ಮೆಣಸಿನ ಘಾಟು ಹಜಾರ ಸೇರಿ ಒಬ್ಬೊಬ್ಬರಾಗಿ ಕೆಮ್ಮತೊಡಗಿದರು. ಪ್ರಾಯಶಃ ಇಂತಹ ವಾಸನೆ ಇವರ ನಾಸಿಕ ಪ್ರವೇಶಮಾಡಿದ್ದು ಇದೇ ಪ್ರಥಮವಿರಬೇಕು. ಆದರೆ ಈ ಘಾಟು ನನ್ನ ಮೇಲಾವ ಪರಿಣಾಮವನ್ನೂ ಬೀರದೇ ನಾನು ಸ್ಥಿತಪ್ರಜ್ಞನಂತೆ ಕುಳಿತಿದ್ದೆ. ಕೊಂಚ ಹೊತ್ತಿನಲ್ಲೇ ಕೆಮ್ಮಿನ ಆರ್ಭಟ ಜೋರಾಗಿ ಎಲ್ಲರ ಮೂಗು ಕಣ್ಣುಗಳಿಂದಲೂ ಥೇಮ್ಸ್ ಜಲ (ಭಾರತದಲ್ಲಿ ಗಂಗಾಜಲ, ಇಂಗ್ಲೆಂಡಿನಲ್ಲಿ ಥೇಮ್ಸ್ ಜಲ!) ಹರಿಯಲಾರಂಭಿಸಿದಾಗ ಅಪಘಾತದ ಅರಿವು ಆಯ್ತು. ದ.ರ್ಶನ ತೆಗೆದುಕೊಂಡವನಂತೆ ಸಟ್ಟಗೆ ಪಾಕಗೃಹ ಪ್ರವೇಶಿಸಿದ ನಾನು ಮೊದಲು ಮಾಡಿದ ಕಾರ್ಯ ಪಾತ್ರೆಗೆ ಒಂದು ತಪ್ಪಲೆ ನೀರು ಸುರಿದದ್ದು. ಆಮೇಲೆ ನನ್ನ ನಳಪಾಕ ಬಚ್ಚಲು ಪಾಲಾಯ್ತೆಂದು ಬೇರೆ ಹೇಳಬೇಕಾಗಿಲ್ಲ ತಾನೆ? ಇಲ್ಲಿಗೆ 'ನನ್ನ ಇಂಡಿಯನ್ ಕುಕಿಂಗ್' ಕನಸಿನ ಕೊನೆ.

## ಹುಟ್ಟುಗುಣ

ಸೌತಾಂಪ್ಟನ್ನಿನ ಜನಸಂಖ್ಯೆ ಸುಮಾರು ೨॥ ಲಕ್ಷ. ಈ ಪೈಕಿ ಸುಮಾರು ಐದಾರು ಸಾವಿರ ಮಂದಿ



ಭಾರತೀಯರಂತೆ! ಇಲ್ಲಿನ ಸಂಚಾರ ವ್ಯವಸ್ಥೆಯನ್ನಂತೂ ಇವರೇ ಕಂಟ್ರೋಲ್ ಮಾಡಿದಂತೆನಿಸುತ್ತದೆ. ಬಸ್ ಸಿಬ್ಬಂದಿ – ಡ್ರೈವರ್, ಕಂಡಕ್ಟರ್, ಕಂಟ್ರೋಲರ್- ಎಲ್ಲ ಭಾರತೀಯರೆ. ಆದರೆ ಭಾರತಕ್ಕೆ ಬೈ ಬೈ ಹೇಳಿ ಬ್ರಿಟಿಶ್ ಪ್ರಜೆಗಳಾದರೂ ಈ ಮಂದಿ ಭಾರತೀಯತ್ವವನ್ನು ಬಿಡದಿರುವುದು ಹೆಮ್ಮೆಯ(!) ಸಂಗತಿಯೇ ಸರಿ. ಇವರ ಭಾರತೀಯತ್ವದ ಸ್ವಾನುಭವ ಆದದ್ದು ಈ ರೀತಿ.

ಸೌತಾಂಪ್ಟನ್ನಿನ್ ವಿಶ್ವವಿದ್ಯಾಲಯದಿಂದ ಬಸ್ ಸ್ಟ್ಯಾಂಡಿಗೆ ಹೋಗಲು ೧೧ನೇ ನಂಬರಿನ ಬಸ್ಸನ್ನಡರಿ ಮಾಳಿಗೆ ಏರಿದೆ. ನನ್ನ ಹೊರತು ನಾಲ್ಕೈದು ಮಂದಿ ಪ್ರಯಾಣಿಕರಿದ್ದರಷ್ಟೇ. ಕಂಡಕ್ಟರ್ ಪೇಟಾ, ದಾಡಿ ಧಾರಿ ದೃಢದೇಹಿ ಸರದಾರ್ಜಿ. ಟಿಕೇಟು ಹಂಚುತ್ತ ನನ್ನ ಬಳಿ ಬಂದ. "ಬಸ್ಟ್ಯಾಂಡಿಗೆಷ್ಟು ಚಾರ್ಜು?" ಎಂಬ ನನ್ನ ಇಂಡಿಯನ್ ಇಂಗ್ಲಿಷು ಪ್ರಶ್ನೆಯಿಂದ ಈ ಆಸಾಮಿ ಇಂಗ್ಲಂಡಿಗೆ ಹೊಸಬ, ಭಾರತೀಯ ಎಂಬ ಸತ್ಯ ಆತನಿಗೆ ತಟ್ಟನೆ ಹೊಳೆದಿರಬೇಕು. ಅಲ್ಲದೇ ನನ್ನ ಮುಖದಲ್ಲಿ ಅಪ್ಪಟ ಭಾರತೀಯ ಕಳೆ ಬೇರೆ. ಮೂವತ್ತೈದು ಪೆನ್ಸ್ ಎಂದುತ್ತರಿಸುತ್ತಾ ನಾನಿತ್ತ ಐವತ್ತು ಪೆನ್ಸ್ ನಾಣ್ಯ ಪಡೆದು ಪ್ರಾಮಾಣಿಕವಾಗಿ ೧೫ ಪೆನ್ಸ್ ಚಿಲ್ಲರೆ ಹಿಂತಿರು

ಗಿಸಿದ. ಆದರೆ ಚಿಲ್ಲರೆ ಜೊತೆ ಟಿಕೆಟು ನಿರೀಕ್ಷಿಸಿದ್ದ ನನಗೆ ಆತನಿಂದ ದೊರೆತದ್ದು ೩೨ ಹಲ್ಲು ತೋರುತ್ತಿದ್ದ ಕಾಲ್ಗೆಟ್ ನಗೆ. ಟಿಕೇಟು ಊಂ–ಹೂಂ. ಪೆಕರನಂತೆ ಮರುನಗೆ ಬೀರುವುದರ ಹೊರತು ಅನ್ಯ ದಾರಿ ಕಾಣದಾದೆ. ಇಳಿವಾಗ ಟಿಕೇಟು ಚೆಕಿಂಗ್ ಇಲ್ಲದಿರಲಿ ಎಂಬ ನನ್ನ ಮೂಕ ಪ್ರಾರ್ಥನೆ ಫಲಿಸಿದ್ದು ಪುಣ್ಯ. ಹುಟ್ಟು ಗುಣ ಘಟ್ಟ ಹತ್ತಿದರೂ ಬಿಡದು ಎಂಬ ಗಾದೆ ಮಾತಿನ ಸತ್ಯವನ್ನು ಇಂಗ್ಲೆಂಡಿಗೆ ಹೋಗಿ ಅರಿತೆ.

## ಹರೇಕೃಷ್ಣ

ಮಧ್ಯಾಹ್ನದ ಸಮಯ. ಸೂರ್ಯ ನೆತ್ತಿಯ ಮೇಲಿದ್ದ. ಲಂಡನ್ನಿನ ಕೆನ್ಸಿಂಗ್‌ಟನ್ ಸ್ಟ್ರೀಟಿನಲ್ಲಿ ನಾನೂ ನನ್ನ ಇನ್‌ಸ್ಟಂಟ್ ಅಮೇರಿಕನ್ ಮಿತ್ರನೂ ಸಾಗುತ್ತಿದ್ದೆವು. ಮಾರ್ಗದ ಬದಿಯಲ್ಲಿ ನಿಂತಿದ್ದ ಹದಿಹರೆಯದ ಬ್ರಿಟಿಶ್ ತರುಣಿಯೊಬ್ಬಾಕೆ ನನ್ನನ್ನು ನೋಡಿ ಹಲ್ಲು ಕಿಸಿಯಲು ಇದಾವ ಗ್ರಹಚಾರ ವಕ್ರಿಸಿತಪ್ಪಾ ಎಂದು ಗಾಬರಿಗೊಂಡ ನನ್ನ ಕೈಗೆ ಆಗ ಇತ್ತಿದ್ದು ಒಂದು ಚಿಕ್ಕ ಮುದ್ರಿತ ಕಾರ್ಡು. ಆ ಕಾರ್ಡ-ನ್ನೋದುತ್ತಿದ್ದಂತೆ ಮರುಭೂಮಿಯಲ್ಲಿ ಅಲೆಯುತ್ತಿದ್ದವನಿಗೆ ಓಯಸಿಸ್ ಕಂಡಂತಾಯಿತು: 'ಮಧ್ಯಾಹ್ನ ೧ ಮತ್ತು ಸಂಜೆ ೫–೩೦ಕ್ಕೆ ೧೦, ಸೋಹೋ ರಸ್ತೆಯಲ್ಲಿರುವ ರಾಧಾ ಟೆಂಪಲ್ಲಿನಲ್ಲಿ ಶುದ್ಧ ಶಾಕಾಹಾರಿ ಭಾರತೀಯ ಭೋಜನಕ್ಕೆ ಈ ದಿನ ಹಾಗೂ ಪ್ರತಿದಿನ ನಿಮಗೆ ಆದರದ ಆಮಂತ್ರಣ.' ಅದಾಗಲೇ ಗಂಟೆ ಒಂದಾಗಿದ್ದುದರಿಂದ ಸಂಜೆಯ ಭೋಜನಕ್ಕೆ ಹೋಗುವುದಾಗಿ ಮನದಲ್ಲೆ ನಿರ್ಧರಿಸಿದೆ.

ಭಾರತೀಯ ಊಟವನ್ನು ಸವಿಯುವ ಆಸೆಯಿಂದ ಬಾಯಲ್ಲಿ ನೀರೂರಿಸುತ್ತ ನಾನು ರಾಧಾ ಟೆಂಪಲ್ ಸೇರಿದಾಗ ಸಂಜೆ ೫–೩೦. ಇದು ಲಂಡನ್ನಿನಲ್ಲಿ ಹರೇಕೃಷ್ಣ ಪಂಥದವರ ಕೇಂದ್ರ, ಒಂದು ಮಾಳಿಗೆಯ ಸೌಧ. ಮಾಳಿಗೆ ಏರಿದ ನನ್ನನ್ನು ಎದುರುಗೊಂಡಾತ ನುಣ್ಣನೆ ತಲೆಯ ಕಾವಿಧಾರಿ ವಿದೇಶಿ ಭಾಗವತ ಬಂಧು. ಪಾದರಕ್ಷೆಗಳನ್ನು ಕಳಚಿಡಿ ಎಂಬ ಆಜ್ಞಾಪನೆಯಿಂದ ಒಮ್ಮೆ ತಬ್ಬಿಬ್ಬಾದೆ. ವಾರದಿಂದ ತೊಳೆಯದೆ ಧರಿಸುತ್ತಿದ್ದ ಕಾಲುಚೀಲಗಳ ಕೆಟ್ಟ ವಾಸನೆ ಒಮ್ಮೆ ಅನೇಕ ರಂಪರೂ ಕಳಚದೆ ವಿಧಿಯಿರಲಿಲ್ಲ. ನನ್ನಂತೆ ಕೆಲ ಬ್ರಿಟಿಶ್ ಸಭ್ಯರೂ ಊಟದ ಸ್ಯಾಂಪಲ್ ನೋಡುವ ಸದಿಚ್ಛೆಯಿಂದ ಬಂದು ಸೇರಿದ್ದರು. ಕಾಲ್ತೊಳೆದು ಶುಚಿರ್ಭೂತರಾದ ನಮ್ಮನ್ನು ದೊಡ್ಡ ಹಜಾರ ಒಂದರಲ್ಲಿ ಕೂಡಿಸಲಾಯಿತು. ಜಮಖಾನೆ ಚೂರುಗಳನ್ನು ಹಾಸಿದ್ದ ನೆಲದಲ್ಲಿ ಕೂರಲು ನಮಗಪ್ಪಣೆ. ಊಟದಾಸೆಯಿಂದ ಬಂದ ನಾನು ಬಲಿಪಶುವಿನಂತೆ ಅವರೊಯ್ದತ್ತ ನಡೆಯದೆ ವಿಧಿಯಿರಲಿಲ್ಲ. ಹಜಾರದ ಒಂದು ಬದಿಯಲ್ಲಿ ಮಾನವ ಗಾತ್ರದ ಕೃಷ್ಣನ ವಿಗ್ರಹ. ಸರಿ, ಅಲ್ಲಿಂದ ಭಜನೆ ಶುರು. ಒಂದು ತಾಸು ಸಂದರೂ ಭಜನೆಗೆ ಕೊನೆಯಿಲ್ಲ. ಭೋಜನದಾಸೆಯಿಂದ ಬಂದ ಅನೇಕ ಬ್ರಿಟಿಶರು ನೆಲದ ಮೇಲೆ ಕೂತು ಕಾಲು ಜೋಮು ಹಿಡಿದ ದೆಸೆಯಿಂದ ಒಬ್ಬೊಬ್ಬರಾಗಿ ಕದಲತೊಡಗಿದರು. ಆದರೆ ನಾನು ಮಾತ್ರ ಶಿಲಾಮೂರ್ತಿಯಾಗಿದ್ದೆ. ಭಜನೆ ಸಾಗಿದ್ದಂತೆ ಒಂದಿಬ್ಬರು ಅಸ್ತವ್ಯಸ್ತ ಸೀರೆಧಾರೀ ಸೇಶಿನಿಯರೂ ಅವರನ್ನನುಸರಿಸಿ ಎಲ್ಲರೂ ಎದ್ದು ನಿಂತು ಮೈಮೇಲೆ ಬಂದವರಂತೆ ಕುಣಿಯಲಾರಂಭಿಸಿದರು. ಒಂದೊಮ್ಮೆ ನನಗೆ ಗಾಬರಿಯಾದರೂ ಈ ವಿಚಿತ್ರ ಕುಣಿತವಲ್ಲಿ ಪಾಲ್ಗೊಳ್ಳದೆ ಅನ್ಯ ಮಾರ್ಗವಿರಲಿಲ್ಲ. ಊರಲ್ಲಿ ಕಲಿತಿದ್ದ ಯಕ್ಷಗಾನ ಕುಣಿತ ಇಲ್ಲಿ ಸ್ವಲ್ಪ ಸಹಾಯಕ್ಕೆ ಬಂತು ಎನ್ನಿ. ಅಂತೂ ನೃತ್ಯ ಸಹಿತ ಕೊನೆಗೊಂಡಾಗ ಗಂಟೆ ೭–೩೦. ಊಟದ ರುಚಿ ನೋಡದ ಹೊರತು ಕದಲಲಾರೆ ಎಂದು ಪಟ್ಟು ಹಿಡಿದು ಕೂತಿದ್ದೆ.

ಎಂಟು ಗಂಟೆಗೆ ಭೋಜನಾರಂಭ. ಊಟ ಪರವಾಗಿಲ್ಲ ಎನಿಸಿತು. ಊಟ ಮುಂದುವರಿಯುತ್ತಿದ್ದಂತೆ ಪ್ರತಿ ಅತಿಥಿಯ ಜೊತೆ ಒಬ್ಬೊಬ್ಬ ಹರೇಕೃಷ್ಣ [illegible] ಆರಂಭಿಸಿದ. ಈ ಸಂದರ್ಭ ಈ ಮುಂದಿಯ [illegible] ವಾಯಿತು ನನಗೆ! "ನಿಮ್ಮ ಶಾಕಾಹಾರದ ಊಟ

ಶವೇನು, ಧಾರ್ಮಿಕ ದೃಷ್ಟಿಯೇ, ಅಥವಾ ಆರೋಗ್ಯ ಪುಷ್ಟಿಯೇ, ಭಗವದ್ಗೀತೆಯಲ್ಲಿ ಶಾಕಾಹಾರದ ಕುರಿತು ಎಲ್ಲೂ ಹೇಳಿದಂತಿಲ್ಲವಲ್ಲ" ಎಂಬ ನನ್ನ ಪ್ರಶ್ನೆಗೆ ನನ್ನ ಬಳಿ ಕುಳಿತಿದ್ದ ಸ್ವಾಮಿ, "ಭಗವದ್ಗೀತೆಯಲ್ಲಿ ಈ ಕುರಿತು ಖಂಡಿತ ಹೇಳಿದೆ, 'ಪತ್ರ ಪುಷ್ಪ ಫಲಂ ತೋಯಂ...' ಎಂಬ ಶ್ಲೋಕ ಗಮನಿಸಿ! ಇಲ್ಲಿ ದೇವರಿಗೆ ಸಸ್ಯಗಳ ಅರ್ಪಣೆ ಕುರಿತು ಮಾತ್ರ ಹೇಳಿದೆ. ಮಾಂಸದ ಕುರಿತು ಹೇಳಿಲ್ಲ. ಇದರರ್ಥ ಮಾಂಸ ನಿಷಿದ್ಧ" ಎಂದು ತ್ತರಿಸಿದ. ಭಲೆ ವ್ಯಾಖ್ಯಾನವೆ ಎಂದುಕೊಂಡೆ. ಆ ಸ್ವಾಮಿ ಮುಂದುವರಿಸುತ್ತಾ, "ಕೃಷ್ಣನೊಬ್ಬನೆ ದೇವರು, ರಾಮ ಶಿವ ಗಣೇಶ ಇವರೆಲ್ಲ ಎರಡನೇ ದರ್ಜೆಯ ದೇವತೆಗಳು, ಭಾರತೀಯರಿಗೆ ಧಾರ್ಮಿಕ ವಿಚಾರಗಳ ಕುರಿತು ಎಳ್ಳಷ್ಟೂ ಜ್ಞಾನವಿಲ್ಲ. ಭಕ್ತಿಮಾರ್ಗ ಮರೆತುದರಿಂದಲೇ ಭಾರತೀಯರು ಬಡತನ, ರೋಗ ರುಜಿನಗಳಿಂದ ನರಳುತ್ತಿರುವುದು" ಎಂದು ಮುಂತಾಗಿ ಜರೆಯತೊಡಗಿದ. ಈ ಮಾತುಗಳಿಗೆಲ್ಲ ನಾನು ತೃಪ್ತನಾಗಿ ಕೂರದೆ ವಿಧಿಯಿರಲಿಲ್ಲ. ಅಂತೂ ಈ ಮಂದಿಯ ಕಂಠ ಶೋಷಣೆಯಿಂದ ಪಾರಾಗಿ ಹೊರ ಬಂದಾಗ ಗಡಿಯಾರ ೧೦ ತೋರಿಸುತ್ತಿತ್ತು. ಉಂಡ ಊಟ ಕರಗಿತ್ತು. ಉದರ ತಾಳ ಹಾಕುತ್ತಿತ್ತು.

## ಮೋಸದ ಮಶೀನು

ಲಂಡನ್ನಿನ ವಿಕ್ಟೋರಿಯಾ ಸ್ಟೇಶನ್ನಿನ ಮುಖ್ಯ ದ್ವಾರ ಪ್ರವೇಶಿಸಿದಾಗ ದುರ್ದೈವವಶಾತ್ ನನ್ನ ಕಣ್ಣಿಗೆ ಬಿದ್ದುದು ಬಲಬದಿಯ ಮೂಲೆಯೊಂದರಲ್ಲಿಟ್ಟಿರುವ ಸ್ವಯಂಚಾಲಿತ ಭಾವಚಿತ್ರಗ್ರಾಹಕ. '೫೦ ಪೆನ್ನಿಗೆ ೫ ನಿಮಿಷದೊಳಗೆ ನಿಮ್ಮ ಪಾಸ್‌ಪೋರ್ಟ್ ಸೈಜಿನ ನಾಲ್ಕು ಭಾವಚಿತ್ರಗಳನ್ನು ಪಡೆಯಿರಿ' ಎಂಬ ಬರಹ ನನ್ನನ್ನಾಕರ್ಷಿಸಿತು. ಮುದ್ರಿತ ವಿವರಣೆಯನ್ನು ಕಂಠಪಾಠ ಮಾಡಿಕೊಂಡು ಯಂತ್ರದೊಳಗೆ ಸೇರಿದೆ. ಭಾವಚಿತ್ರಗ್ರಾಹಿಗೆ ಮುಖ ಮಾಡಿ ಕುಳಿತು ನಿರ್ದಿಷ್ಟಪಡಿಸಿದ ತೂತಿನೊಳಕ್ಕೆ ೧೦ ಪೆನ್ನಿನ ನಾಲ್ಕು ನಾಣ್ಯಗಳನ್ನು ತೂರಿದೆ. ಐದು ನಿಮಿಷಗಳ ಕಾಲ ಪೋಸು ಕೊಟ್ಟು ಶಿಲಾವಿಗ್ರಹದಂತೆ ಕುಳಿತಿದ್ದರೂ ಯಂತ್ರ ಮಹಾಶಯನಿಗೆ ನನ್ನ



ಇರುವಿಕೆ ಅರಿವಾದ ಯಾವ ಸೂಚನೆಯೂ ಕಾಣಿಸಲಿಲ್ಲ. ಎದ್ದು ನಿಂತೆ; ತಕ್ಷಣ ಝುಮಕ್ ಎಂದು ಫ್ಲಾಷ್ ಬೆಳಗಿ ನಂದಿತು. ಇದಾವ ಗ್ರಹಚಾರ ಎಂದು ಗಾಬರಿಯಾಗಿ ಪುನಃ ೫ ನಿಮಿಷ ಕಾಲ ಪೀಠದಲ್ಲಿ ಬೇರಿಳಿಸಿದೆ. ಪುನಃ ಮೊದಲಿನದೇ ಅವಸ್ಥೆ. ಇನ್ನು ಹೆಚ್ಚು ಕಾಲ ಕುಳಿತರೆ ನೋಡುಗರ ನಗೆಗೆ ಗುರಿಯಾಗಬಹುದೇನೋ ಎಂದು ಬೆದರಿ ಹೊರಬಂದು ಭಾವಚಿತ್ರ ಹೊರಡುವುದನ್ನು ನಿರೀಕ್ಷಿಸುತ್ತ ಚಾತಕ ಪಕ್ಷಿಯಂತೆ ಕಾದೆ. ಊಂ-ಹೂಂ. ತಟ್ಟನೆ ನೆನಪಾದ್ದು ನಮ್ಮ ಕೆಲ ಬಸ್‌ಸ್ಟಾಂಡುಗಳಲ್ಲಿ ಇಟ್ಟಿರುವ ಹಲವು ಸಲ ಕಳಾಪ್ರಹಾರಕ್ಕೆ ಮಣಿಯುವ ಭಾರಮಾಪೀ ಯಂತ್ರಗಳು. ಆದದ್ದಾಗಲಿ ಎಂದು ಯಂತ್ರ ಮಹಾಶಯನಿಗೊಂದು ಗುದ್ದೇರಿಸಿದೆ. ಏನಾಶ್ಚರ್ಯ! ತೂತೊಂದರಿಂದ ಭಾವಚಿತ್ರಗಳು ಹೊರಬರಲಾರಂಭಿಸಿದವು! ಆದರೆ ಹೊರಬಂದದ್ದು ಭಾವಚಿತ್ರವಲ್ಲ; ಪಾಸ್‌ಪೋರ್ಟ್ ಸೈಜಿನ ನಾಲ್ಕು ಭಾವಚಿತ್ರಗಳು ಹಿಡಿಸಬಲ್ಲ ಬಿಳಿಹಾಳೆ ಮಾತ್ರ. ಮಧ್ಯದಲ್ಲೊಂದು ಕಡೆ ನನ್ನ ಉದರ ಪ್ರದೇಶದ ಪಾಸ್‌ಪೋರ್ಟ್ ಸೈಜಿನ ಚಿತ್ರ! ನಾನು ನಿಂತಿದ್ದಾಗ ಫ್ಲಾಷ್ ಬೆಳಗಿದ್ದರ ಅರ್ಥ ಈಗ 'ಫ್ಲಾಷ್' ಆಯಿತು. ಆ ಹಾಳೆಯನ್ನು ಕ.ಬು. ಪಾಲುಮಾಡಿ, ಮೋಸಗಾರ ಮಂದಿ ಇಂಗ್ಲೆಂಡಿನಲ್ಲಿ ಅಪರೂಪವಾದರೂ ಮೋಸಮಾಡುವ

ಮಶೀನುಗಳಿವೆಯಲ್ಲ ಎಂದು ಸಮಾಧಾನ (?) ಪಡುತ್ತ ರೈಲು ಹಿಡಿಯಲು ನಡೆದೆ.

## ಇಬ್ರಾಹಿಂ ಮತ್ತು ಇಂಗ್ಲೀಷು

ಲಂಡನ್, ಲಿವರ್‌ಪೂಲ್, ಮೆಂಚೆಸ್ಟರ್‌ಗಳಂತೆ ಸೌತಾಂಪ್ಟನ್ ಕೂಡ ಇಂಗ್ಲೆಂಡಿನಲ್ಲಿ ಭಾರತೀಯರ ಒಂದು ಕೇಂದ್ರ. ಇಲ್ಲಿ ಐದಾರು ಸಾವಿರ ಭಾರತೀಯರಿದ್ದಾರಂತೆ! ಈ ಭಾರತೀಯ ಮಂದಿ ಬ್ರಿಟಿಷ್ ಸಮಾಜದಲ್ಲಿ ಹೇಗೆ ಹೊಂದಿಕೊಂಡು ಬಾಳುತ್ತಿದ್ದಾರೆ ಎಂಬುದಕ್ಕೆ ಒಂದು ಚಿಕ್ಕ ನಿದರ್ಶನ ದೊರೆತುದು ಇಲ್ಲಿನ ಒಂದು ಭಾರತೀಯ ಶಾಕಾಹಾರೀ ಉಪಾಹಾರಗೃಹ ಮೋತಿಮಹಲಿನಲ್ಲಿ.

ಸೌತಾಂಪ್ಟನ್ನಿನಲ್ಲಿ ನಾನಿದ್ದಷ್ಟು ಕಾಲ ಸಾಧಾರಣ ಪ್ರತಿದಿನ ಭಾರತೀಯ ತಿನಿಸುಗಳ ಆಸೆಯಿಂದ ಮೋತಿಮಹಲ್ ಸಂದರ್ಶಿಸುತ್ತಿದ್ದೆ. ಇದರ ಮಾಲಿಕ ಬಂಗಾಲಿ. ಗೋವಾದ ಗೋನ್ಸಾಲ್ವಿಸ್ ಎಂಬಾತ ಇಲ್ಲಿ ಮ್ಯಾನೇಜರ್. ನಿತ್ಯದರ್ಶನದಿಂದ ಪರಿಚಯ ನಿಕಟವಾಗಿ ಹೋಟೆಲಿನ ಪಾಕಗೃಹದೊಳಗೆ ಪ್ರವೇಶಿಸುವಷ್ಟು ಸ್ನೇಹ ಬೆಳೆದಿತ್ತು. ಅಲ್ಲಿ ಇಬ್ರಾಹಿಂ ಹಾಗೂ ಹುಮಾಯೂನ್ ಎಂಬಿಬ್ಬರು ಭಾರತೀಯ ಮುಸ್ಲಿಂ ಬಂಧುಗಳು ಶಾಕಾಹಾರ ನಿರ್ಮಾಣ ಪ್ರವೀಣರು! ಈ ಇಬ್ಬರೊಂದಿಗೆ ಮಾತಾಡಲೆತ್ನಿಸಿದ ನನಗೆ ಆಶ್ಚರ್ಯ ಕಾದಿತ್ತು. ಇಬ್ಬರಿಗೂ ಇಂಗ್ಲೀಷ್ ಭಾಷೆಯ ಗಂಧಗಾಳಿಯೂ ಇಲ್ಲ. ಬಂಗಾಲಿ ಮತ್ತು ಹಿಂದಿ ಇವೆರಡೇ ಇವರ ಭಾಷಾ ಕೋಶದಲ್ಲಿ. ಇಬ್ಬರೂ ಇಂಗ್ಲೆಂಡಿಗೆ ಬಂದು ೧೮ ವರ್ಷಗಳಾಯಿತಂತೆ! ಆದರೆ ಇಂಗ್ಲಿಷ್ ಮಾತ್ರ ಇವರಿಂದ ಇನ್ನೂ ೧೮ ಜನ್ಮ ದೂರದಲ್ಲಿದೆಯೇನೊ! ಇಂಗ್ಲೀಷ್ ಬಾರದೆ ಈ ಮಂದಿ ಹೇಗೆ ವ್ಯವಹರಿಸುತ್ತಾರೆ ಎಂಬ ನನ್ನ ಪ್ರಶ್ನೆಗೆ ಇವರ ವ್ಯವಹಾರ ಮಾತುಕತೆ, ಸ್ನೇಹ ಇವೆಲ್ಲ ಭಾರತೀಯರೊಂದಿಗೆ ಮಾತ್ರ ಎಂದುತ್ತರಿಸಿದ ಗೋನ್ಸಾಲ್ವಿಸ್, ಇವರ ಪಾಲಿಗೆ ಬ್ರಿಟಿಶರೆಂದರೆ ದೂರದಿಂದ ಮಾತ್ರ ನೋಡಿ ಆನಂದಿಸ (?) ತಕ್ಕ ಜೀವಿಗಳು ಅಷ್ಟೇ. ಇಬ್ರಾಹಿಂ, ಹುಮಾಯೂನ್ ಒಂದು ಚಿಕ್ಕ ಸ್ಯಾಂಪಲ್ ಮಾತ್ರ. ಈ ತರಹದ ಭಾರತೀಯರು ಇಂಗ್ಲೆಡಿನಲ್ಲಿ ಸಾವಿರಾರು ಮಂದಿಯಂತೆ. ಈ ವಿಚಾರ 'ವಿಚಿತ್ರ ಆದರೂ ನಿಜ' ಎಂಬ ಕಾಲಮ್ಮಿನಲ್ಲಿ ಖಂಡಿತ. ಪ್ರಕಟಯೋಗ್ಯ ಭಲೆ, ಅಂತೂ ಈ ಮಂದಿ ದೇಶ ಬಿಟ್ಟರೂ ಭಾಷೆ ಬಿಟ್ಟಿಲ್ಲ!

ವಿದೇಶ ಸೇರಿದೊಡನೆ ಮಧುರ ಅನುಭವಗಳುಂಟಾಗುವುದೆಂದು ಹಲವರ ಭಾವನೆ; ಆದರೆ ಅದು ತಪ್ಪು ಕಲ್ಪನೆ ಎನ್ನದೆ ವಿಧಿಯಿಲ್ಲ. ಹಲ ಬಾರಿ ಅನುಭವಿಸಿದಾಗ ಕಹಿ ಎನಿಸಿದರೂ ಅವುಗಳನ್ನಿಂದು ಮೆಲುಕು ಹಾಕಿದಾಗ ಸಿಹಿ ಎನಿಸುವುದೂ ನಿಜ. ಅನುಭವವು ಸವಿಯಲ್ಲ ಅದರ ನೆನಪೇ ಸವಿಯು ತಾನೆ? ✡



"ಹಾಂ- ನೀವೆಲ್ಲ ಈಗ ಲಕ್ಷ್ಯವಿಟ್ಟು ಕೇಳಿ. ಇನ್ನು ಹತ್ತು ನಿಮಿಷದಲ್ಲಿ 'ನಾನು ಮ್ಯಾನೇಜರ್ ಆದರೆ...' ಎಂಬ ಬಗ್ಗೆ ನಾಲ್ಕು ಪುಟದ ನಿಬಂಧ ಬರೆಯಿರಿ. ಬೇಗ ಪ್ರಾರಂಭಿಸಿ," ಅಂದರು ಗುರುಗಳು.

ಒಬ್ಬ ನನ್ನು ಬಿಡು ಮಿಕ್ಕವರೆಲ್ಲ ಬರೆಯತೊಡಗಿದರು "ಯಾಕೋ-ಬರೀವೆ ಸುಮ್ನೆ ಕೂತಿದ್ದೀಯಾ?"

"ಸೆಕ್ರೆಟರಿಗಾಗಿ ಕಾಯ್ತಿದೀನಿ ಸರ್," ಎಂದ ಆತ.



## ಅವನಿಗೆ 3 ತಿಂಗಳಾದಾಗ, ಹಾಲು ಒಂದೇ ಸಾಕಾಗುವುದಿಲ್ಲ

# ನಿಮ್ಮ ಮಗುವಿಗೆ ಬೇಕು ಫೆರೆಕ್ಸ್

## ಮಗುವಿನ ಆದರ್ಶ ಘನ ಆಹಾರ

### 3 ತಿಂಗಳು—ಘನ ಆಹಾರ ಕೊಡಲು ಸಮಯ.

3 ತಿಂಗಳಾದಾಗ, ಮಗುವಿನ ಬೆಳೆಯುತ್ತಿರುವ ಬೇಡಿಕೆಗಳಿಗೆ ಹಾಲು ಒಂದೇ ಸಾಕಾಗುವದಿಲ್ಲ. ಮಗು ನಲಿದಾಡುತ್ತದೆ ಮತ್ತು ತ್ವರಿತಗತಿಯಿಂದ ಬೆಳೆಯುತ್ತದೆ. ಹಾಲು ಒದಗಿಸುವದಕ್ಕಿಂತ ಹೆಚ್ಚು ಕ್ಯಾಲೊರಿಗಳು ಮತ್ತು ಕಬ್ಬಿಣ ಸತ್ವ ಬೇಕಾಗುತ್ತವೆ. ನಿಮ್ಮ ಮಗುವಿಗೆ ದ್ರವರೂಪಿ ಆಹಾರ ಕಡಿಮೆಗೊಳಿಸುವಂತಹ, ಕೇಂದ್ರೀಕೃತ ರೂಪದಲ್ಲಿ ಹೆಚ್ಚು ಕ್ಯಾಲೊರಿ ಕೊಡುವಂತಹ ಮತ್ತು ಅಗಿದು ತಿನ್ನಲು ಕಲಿಸುವಂತಹ ಘನ ಆಹಾರದ ಅವಶ್ಯಕತೆ ಇರುತ್ತದೆ.

### ಡಾಕ್ಟರರು ಫೆರೆಕ್ಸ್ ಶಿಫಾರಸು ಮಾಡುತ್ತಾರೆ, ಏಕೆ?

ಕ್ರಮೇಣ ಘನ ಆಹಾರವನ್ನು ಪ್ರಾರಂಭಿಸಲಿಕ್ಕಾಗಿ ವಿಶೇಷವಾಗಿ ತಯಾರಿಸಿದ ಘನ ಆಹಾರ ಫೆರೆಕ್ಸ್. ಇದರಲ್ಲಿ ಕಾರ್ಬೊಹೈಡ್ರೇಟ್ಸ್, ಫ್ಯಾಟ್ಸ್, ಕ್ಯಾಲ್ಸಿಯಮ್, ಫಾಸ್ಫರಸ್ ಹಾಗೂ ವಿಟಮಿನ್‌ಗಳಿವೆ. ಫೆರೆಕ್ಸ್‌ನಲ್ಲಿ ಮಗುವಿನ ಬೆಳವಣಿಗೆಗೆ ಅಗತ್ಯವಾದ ಕಬ್ಬಿಣ ಸತ್ವವೂ ತುಂಬಿದೆ. ಈ ಕಾರಣಗಳಿಂದ, ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಫೆರೆಕ್ಸ್ ಆದರ್ಶ ಘನ ಆಹಾರವಾಗಿದೆ.

**ಉಚಿತ!** ಮಗುವಿನ ಮೊದಲ ವರ್ಷದ ಕುರಿತಾದ ಪುಸ್ತಿಕೆ. ಇದರ ಪ್ರತಿಯನ್ನು ಉಚಿತವಾಗಿ ಪಡೆಯಲು, ಅಂಚೆವೆಚ್ಚಕ್ಕಾಗಿ 50 ಪೈಸೆ ಸ್ಟ್ಯಾಂಪಿನೊಂದಿಗೆ ಬರೆಯಿರಿ:
**ಪಿ. ಓ. ಬಾಕ್ಸ್ ನಂ. 19119,**
**(FAR 93 T)**
ಬೊಂಬಾಯಿ-400 025.




**ಡಾಕ್ಟರರು ಶಿಫಾರಸು ಮಾಡುತ್ತಾರೆ—ಫೆರೆಕ್ಸ್**
**ಮಗುವಿನ ಆದರ್ಶ ಘನ ಆಹಾರ— ಶೀಘ್ರ ಸರ್ವಾಂಗೀಣ ಬೆಳವಣಿಗೆಗಾಗಿ**

CASGLF-10-163 Kan

ಕೃಷ್ಣವಿವರಗಳು ವಿಶ್ವದ ಲೋಲಕಗಳೆ ?

# ವಿಶ್ವವನ್ನು ನಿಯಂತ್ರಿಸುವುದು ಯಾವುದು?

ವಿ. ಎ. ಕುಲಕರ್ಣಿ

ಪ್ರೊಫೆಸರ್ ಕೊರಿಝರೇವ್ ಅವರು ಕಾಲದ ಸಮಸ್ಯೆಯನ್ನು ಬಿಡಿಸಲು ೨೦ ವರುಷಗಳಿಗಿಂತಲೂ ಮಿಕ್ಕಿ ಹೆಣಗುತ್ತಿದ್ದಾರೆ. ಇಷ್ಟು ವರುಷಗಳುದ್ದಕ್ಕೂ ಅವರು ಈ ವಿಷಯದ ಸ್ಪಷ್ಟ ನಿರಾಕರಣೆಗಳನ್ನು ಹಾಗೂ ಛದ್ಮವೇಷದ ಸಂದೇಹಗಳನ್ನು ದೃಢ ನಿಶ್ಚಯದಿಂದ ಎದುರಿಸುತ್ತ ಬಂದಿದ್ದಾರೆ. ಇದು ಅವರನ್ನು ವಿಚಲಿತರನ್ನಾಗಿ ಮಾಡುತ್ತಿದೇನೋ ನಿಜ, ಆದರೆ ಚಂದ್ರನ ವಿಷಯದಲ್ಲಿ ಅವರೊಮ್ಮೆ ಯಶಸ್ವಿಯಾದಂತೆ ಇಲ್ಲಿಯೂ ಸಾಧಿಸುವ ದೃಢ ವಿಶ್ವಾಸ ತಳೆದಿದ್ದಾರೆ.

ಸಂಪೂರ್ಣ ವಿಕಾಸಗೊಂಡಿರುವ ಚಂದ್ರ ಮೃತಕಾಯವೆಂದೇ ನಂಬಲಾಗಿತ್ತು. ಆದರೆ ಚಂದ್ರನ ಮೇಲೆ ಜ್ವಾಲಾಮುಖಿಯ ಚಟುವಟಿಕೆಗಳು ಶಕ್ಯ ಎಂದು ಕೊರಿಝರೇವ್ ಒಮ್ಮೆಲೇ ಸಾರಿದರು. ಆಗ ಅವರು ಅಪಹಾಸ್ಯಕ್ಕೆ ಗುರಿಯಾಗಬೇಕಾಯಿತು. ಆದರೂ ದೂರದರ್ಶಕಕ್ಕೆ ಅಂಟಿಕೊಂಡೇ ಕುಳಿತು ಹಲವಾರು ರಾತ್ರಿಗಳನ್ನು ಅಪಾರ ವೀಕ್ಷಣೆಯಲ್ಲಿ ಕಳೆದ ಪ್ರೊಫೆಸರ್ ಕೊರಿಝರೇವ್ ಕೊನೆಗೂ ೧೯೫೮ ರಲ್ಲಿ ಚಂದ್ರನ ಆಲ್ಫೊನ್ಸಸ್ ಕುಳಿಯಲ್ಲಿ ಜ್ವಾಲಾಮುಖಿ ಚಿಮ್ಮುವುದನ್ನು ಗುರುತಿಸಿಯೇಬಿಟ್ಟರು.

ಡಾ. ಕೊರಿಝರೇವ್ ನನ್ನೆದುರು ಆಶ್ಚರ್ಯಕರವಾದ ಪ್ರಯೋಗವೊಂದನ್ನು ಮಾಡಿ ತೋರಿಸಿದರು. ಪ್ರದಕ್ಷಿಣಾಕಾರವಾಗಿ ತಿರುಗುತ್ತಿದ್ದ ಬುಗುರಿಯನ್ನು ತಕ್ಕಡಿಯ ಒಂದು ತುದಿಗೆ ಸೇತು ಹಾಕಿದರು. ಅದರ ಇನ್ನೊಂದು ತುದಿಗೆ ಹಾಕಿದ ಎರಡು ಚಿಕ್ಕ ತೂಕಗಳು ಬುಗುರಿಯ ಸಮತೂಕವನ್ನು ಕಾಯ್ದುಕೊಂಡವು. ಮಧ್ಯದ ಸೂಚಿಯು ಶೂನ್ಯಕ್ಕೆ ಸ್ಥಿರವಾಗಿ ನಿಂತಾಗ, ವಿಜ್ಞಾನಿಯು ತಕ್ಕಡಿಯ ತಳಕ್ಕೆ ಜೋಡಿಸಿದ ಸ್ವಿಚ್ ಒತ್ತಿ ವಿದ್ಯುತ್ ಕಂಪನವನ್ನು ಆರಂಭಿಸಿದರು. ಪರಿಭ್ರಮಿಸುತ್ತಿದ್ದ ಬುಗುರಿಯ ಈ ಕಂಪನವನ್ನು ಶೋಷಿಸಿಕೊಳ್ಳುವಂತೆ ಮಾಡಲು ಪ್ರತಿಯೊಂದು ವಿಷಯವನ್ನು ಗಣನೆಗೆ ತೆಗೆದುಕೊಳ್ಳಲಾಗಿತ್ತು.

ಸೂಚಿಯು ಅಲ್ಲಾಡಲಿಲ್ಲ. ನಾನು ನಿರಾಶೆಯಿಂದ ಪ್ರೊಫೆಸರರೆಡೆಗೆ ನೋಡಿದೆ. ಅವರು

(ಆಲ್ಬರ್ಟ್ ವ್ಯಾಲೆಂಟಿನೋವ್ ಅವರ ಲೇಖನದ ಸಂಕ್ಷಿಪ್ತ ರೂಪ)

ಶುಷ್ಕ ಮುಗುಳ್ನಗೆಯೊಂದಿಗೆ ಬುಗುರಿಯನ್ನು ತೆಗೆದು ಅದನ್ನು ವಿರುದ್ಧ ದಿಶೆಯಲ್ಲಿ, ಅಂದರೆ ಅಪ್ರದಕ್ಷಿಣಾಕಾರವಾಗಿ ತಿರುಗಿಸಿ ಪುನಃ ಮೊದಲಿನಂತೆ ನೇತು ಹಾಕಿದರು. ಸೂಚಿಯು ಕೂಡಲೇ ಬಲಕ್ಕೆ ಒಲಿದು ೯೦ ಗ್ರಾಮ್ ತೂಕದ ಬುಗುರಿಯು ೪ ಮಿಲಿಗ್ರಾಮ್‌ನಷ್ಟು ಕಡಿಮೆಯಾದುದನ್ನು ತೋರಿಸಿತು. ಈ ಮೌಲ್ಯವು ಚಿಕ್ಕದಾಗಿದ್ದರೂ ಸುಸ್ಪಷ್ಟವಾಗಿತ್ತು.

"ನಾವು ತಿಳಿದಿರುವ ಯಾವ ಭೌತಿಕ ನಿಯಮಗಳೂ ಈ ಘಟನೆಯನ್ನು ವಿವರಿಸಲಾರವು," ಡಾ. ಕೊರಿಖರೇವ್ ಹೇಳಿದರು.

"ಇದಕ್ಕೆ ನಿಮ್ಮ ವಿವರಣೆ ಏನು?"

ಎರಡನೆಯ ಸಂದರ್ಭದಲ್ಲಿ ಬುಗುರಿಯು ಅಪ್ರದಕ್ಷಿಣಾಕಾರವಾಗಿ ಅರ್ಥಾತ್, ಭೂಮಿಯ ಮೇಲಿನ ಕಾಲಪಥದ ವಿರುದ್ಧ ದಿಕ್ಕಿನಲ್ಲಿ ತಿರುಗುತ್ತದೆ. ಆದ್ದರಿಂದ ಭೂ ಕಾಲವು ತನ್ನ ಅಸಹಜವಾದ ಗತಿಯನ್ನು ತಡೆಗಟ್ಟಿ ಬುಗುರಿಯ ಮೇಲೆ ಪರಿಣಾಮವನ್ನು ಚಲಾಯಿಸುತ್ತದೆ. ಹೆಚ್ಚಿನ ಶಕ್ತಿಗಳು ಹುಟ್ಟುತ್ತವೆ; ಅವುಗಳನ್ನು ಅಳೆಯಲು ಸಾಧ್ಯ.

ಅವುಗಳನ್ನು ಅಳೆಯಬಹುದಾದ್ದರಿಂದಲೇ ಅವು ಅಸ್ತಿತ್ವದಲ್ಲಿ ಇವೆ ಎಂದಾಯಿತು. ಆದ್ದರಿಂದ ಕಾಲವು ಗಂಟೆಗಳಲ್ಲಿ ಅಳೆಯಬಹುದಾದ ಎರಡು ಘಟನೆಗಳ ಮಧ್ಯಂತರವಲ್ಲ; ಆದರೆ ಅದು ಎಲ್ಲ ನೈಸರ್ಗಿಕ ಪ್ರಕ್ರಿಯೆಗಳಲ್ಲಿ ಸಕ್ರಿಯ ಪಾತ್ರ ವಹಿಸಬಲ್ಲ ಭೌತಿಕ ಅಂಶವಾಗಿದೆ.

ಇದನ್ನು ಗ್ರಹಿಸುವದು ತುಂಬಾ ಕಷ್ಟ. ಏಕೆಂದರೆ ಇಂಥ ಲೋಕೋತ್ತರಗಳಿಗೆ ಪ್ರತಿರೂಪವಾದ ವಿದ್ಯಮಾನಗಳು ನಿತ್ಯ ಜೀವನದಲ್ಲಿ ನಮಗೆ ಕಾಣಿಸುತ್ತಿಲ್ಲ. ಅಲ್ಲದೆ ಗ್ರಹಣಶಕ್ತಿಯ ಪ್ರಮುಖ 'ಆತಂಕವೆಂದರೆ ಮನುಷ್ಯನ ವೈಚಾರಿಕ ಜಡತೆ. ಆದುದರಿಂದಲೇ ಕಾಲದ ಮಹತ್ವವನ್ನು ಆಳವಾಗಿ ಅರಿಯುವ ನಮ್ಮ ಬಹುಕಾಲದ ತಾರ್ಕಿಕ ಯತ್ನಗಳು ಇಂದಿನವರೆಗೂ ವಿಫಲವಾಗಿವೆ.

ಕಾಲವು ಈ ವಿಶ್ವದ, ಅನುಷಂಗಿಕವಾಗಿ ನಮ್ಮ ಭೂಗ್ರಹದ, ಎಲ್ಲ ಪ್ರಕ್ರಿಯೆಗಳ ಅತ್ಯವಶ್ಯ ಅವಿಭಾಜ್ಯ ಅಂಗವಾಗಿದೆ ಎಂದು ಡಾ. ಕೊರಿಖರೇವ್ ಒತ್ತಿ ಹೇಳುತ್ತಾರೆ. ಎಲ್ಲ ಸ್ವಾಭಾವಿಕ ಪ್ರಕ್ರಿಯೆಗಳು ಕಾಲದ ಬಿಡುಗಡೆಯಿಂದಾಗಲಿ ಇಲ್ಲವೆ ಕಾಲದ ಶೋಷಣೆಯಿಂದಾಗಲಿ ಕೂಡಿಕೊಂಡಿರುತ್ತವೆ.

ತಕ್ಕಡಿಯ ಆಚೆ ಈಗ ಡಾ. ಕೊರಿಖರೇವ್ ಬಿಸಿ ನೀರು ತುಂಬಿದ ಸಾಮಾನ್ಯ ಥರ್ಮಾಸ್ ಫ್ಲಾಸ್ಕನ್ನು ಇರಿಸಿದರು. ಬಿರಡೆಯಲ್ಲಿಯ ರಂಧ್ರದೊಳಗಿಂದ ಪ್ರೊಫೆಸರರು 'ಒಂದು ತೆಳುವಾದ ಕೊಳವೆಯನ್ನು ಒಳಸೇರಿಸಿದರು.

ಆ ಕೊಳವೆಯ ಮೂಲಕ ಥರ್ಮಾಸ್ ಫ್ಲಾಸ್ಕಿನೊಳಗೆ ತಣ್ಣೀರನ್ನು ಬೆರೆಸುತ್ತ, "ಈಗ ಗಮನಿಸಿರಿ," ಎಂದರು. ದೂರದಿಂದ ಥರ್ಮಾಸ್ ಫ್ಲಾಸ್ಕ್ ತಕ್ಕಡಿಯ ಮೇಲೆ ಯಾವ ವಿಶೇಷ ಪರಿಣಾಮವನ್ನು ಮಾಡದಿರುವಂತೆ ಅನಿಸಿತು. ಆದರೂ ತಕ್ಕಡಿಯ ಸೂಚಿಯು ಎರಡು ಗೆರೆಗಳಷ್ಟು ಚಲಿಸಿತು. ಅಂದರೆ ಇಂಥದೊಂದು ಪ್ರಭಾವ ಅಸ್ತಿತ್ವದಲ್ಲಿ ಇರಲೇಬೇಕೆಂದಾಯಿತು.

"ನಾವೀಗ ಚಹಾ ಕುಡಿಯುವ," ಎಂದು ನುಡಿದ ಪ್ರೊಫೆಸರರು ಈ ವಿರೋಧಾಭಾಸಮಯ ವಿದ್ಯಮಾನಗಳಲ್ಲಿ ಮುಳುಗಿದ ನನ್ನ ಯೋಚನೆಗಳನ್ನು ಕಡಿದುಹಾಕಿದರು.

ಡಾ. ಕೊರಿಖರೇವ್ ನನ್ನೆದುರು ಒಂದು ಗ್ಲಾಸನ್ನಿಟ್ಟು ಅದರಲ್ಲಿ ಬಿಸಿ ಚಹವನ್ನು ಸುರುವಿದರು. ತಮಗಾಗಿಯೂ ಹಾಗೆಯೇ ಸುರುವಿಕೊಂಡು ಅದರಲ್ಲಿ ಮಾತ್ರ ಎರಡು ಕರಣೆ ಸಕ್ಕರೆ ಹಾಕಿಕೊಂಡರು. ತರುವಾಯ ಪ್ರೊಫೆಸರರು ಫ್ಲಾಸ್ಕನ್ನು ತೆಗೆದು ಅದರ ಸ್ಥಳದಲ್ಲಿ ತಮ್ಮ ಗ್ಲಾಸನ್ನು ಇರಿಸಿದರು. ತಕ್ಕಡಿಯ ಸೂಚಿ ಥಟ್ಟನೆ ಚಲಿಸಿತು.

"ನಿಮ್ಮ ಚಹ ಕೂಡ ಬಿಸಿಯಾಗಿದೆ. ಕೇವಲ ಹೆಚ್ಚಿನ ಸಕ್ಕರೆಯನ್ನು ನೀವು ಹಾಕಿಕೊಂಡಿಲ್ಲವಷ್ಟೇ. ಈಗ ತಕ್ಕಡಿಯ ಆಚೆಗೆ ನಿಮ್ಮ ಗ್ಲಾಸು ಇಡಿರಿ," ಎಂದವರು ಹೇಳಿದರು.

ಎರಡೂ ಗ್ಲಾಸುಗಳು ಒಂದೇ ತೆರನಾಗಿದ್ದವು. ಆದರೆ ನನ್ನ ಗ್ಲಾಸಿನಿಂದ ಆ ಸೂಚಿಯ ಮೇಲೆ ಯಾವ ಪರಿಣಾಮವೂ ಆಗಲಿಲ್ಲ.

"ಪರಿಸರಕ್ಕೆ ಉಷ್ಣತೆಯ ಬಿಡುಗಡೆ ಮಾಡುವ ಸ್ವಾಭಾವಿಕ ಕ್ರಿಯೆಯ ವಿನಾ ಬೇರಾವ ಪ್ರಕ್ರಿಯೆಗಳೂ ನಿಮ್ಮ ಗ್ಲಾಸಿನಲ್ಲಿ ಸಾಗುತ್ತಿಲ್ಲ," ಡಾ. ಕೊರಿಖರೇವ್ ವಿವರಿಸತೊಡಗಿದರು. "ಅದರಂತೆ ಬಿಸಿ ನೀರು ಇರುವ ಫ್ಲಾಸ್ಕಿನಲ್ಲಿ ಕೂಡ ಯಾವ ಕ್ರಿಯೆಯೂ ನಡೆಯಲಿಲ್ಲ. ಆದರೆ ನಾನು ಫ್ಲಾಸ್ಕಿನಲ್ಲಿ ತಣ್ಣೀರು ಇಲ್ಲವೆ ಗ್ಲಾಸಿನಲ್ಲಿ ಸಕ್ಕರೆ ಮುದ್ದೆ ಹಾಕಿದಾಕ್ಷಣ ವ್ಯವಸ್ಥೆಯ ಸಮಸ್ಥಿತಿ ಕೆದಡಲ್ಪಟ್ಟಿತು. ಮತ್ತು ಆ ವ್ಯವಸ್ಥೆಯು ತನ್ನ ಸಮತೆಯನ್ನು ಮರಳಿ ಪಡೆಯುವವರೆಗೂ ದೃಷ್ಟಾಂತವಾಗಿ ಫ್ಲಾಸ್ಕಿನೊಳಗಿನ ಇಡೀ ನೀರಿನ ಗಾತ್ರದ ಉಷ್ಣತಾಮಾನ ಒಂದೇ ಆಗುವವರೆಗೂ ಅಥವಾ ಸಕ್ಕರೆಯ ಕರಣೆ ಗ್ಲಾಸಿನಲ್ಲಿ ಸಂಪೂರ್ಣ ಕರಗುವ ವರೆಗೂ ವ್ಯವಸ್ಥೆಯು ಕಾಲವನ್ನು ಬಿಡುಗಡೆ ಮಾಡುತ್ತದೆ. ಇಲ್ಲವೆ ಅದನ್ನು ಒತ್ತಾಗಿರಿಸುತ್ತದೆ. ಈ ಕಾಲವೇ ಬುಗುರಿಯ ಮೇಲೆ 'ಪೆಚ್ಚಿನ' ಪರಿಣಾಮವನ್ನು ಚಲಾಯಿಸುತ್ತದೆ. ಬೇರೆ ಸತ್ಯಾಂಶಗಳಿಂದಲೂ ಇದನ್ನು ದೃಢಪಡಿಸಲಾಗಿದೆ."

ಈ ಸತ್ಯಾಂಶಗಳು ಕೆಳಗಿನಂತಿವೆ: ಕಾಲವು ಕಾರಣ ಹಾಗೂ ಪರಿಣಾಮ ಸಂಬಂಧದೊಂದಿಗೆ ಯಾವುದೊಂದು ವ್ಯವಸ್ಥೆಯ ಮೇಲೆ ಕಾರ್ಯಪ್ರವೃತ್ತವಾದರೆ ಕೇವಲ ತೂಕದಷ್ಟೇ ಅಲ್ಲ, ದ್ರವ್ಯದ ಇನ್ನಿತರ ಭೌತಿಕ ಲಕ್ಷಣಗಳೂ ವ್ಯತ್ಯಾಸಗೊಳ್ಳಬೇಕು. ಇದು ಹೀಗಾಗುವುದು ಗೊತ್ತಾಗಿದೆ. ತಂಪು ಬಿಸಿ ನೀರುಗಳು ಬೆರೆಯುತ್ತಿರುವ ಥರ್ಮಾಸ್ ಫ್ಲಾಸ್ಕಿನ ಇಲ್ಲವೆ ಕರಗುವ ಕ್ರಿಯೆ ಸಾಗುತ್ತಿರುವ ಭಟ್ಟಿ ಇಳಿಸುವ ಪಾತ್ರೆಯ ಸಾಮೀಪ್ಯದಲ್ಲಿ ಸ್ಫಟಿಕ ಫಲಕಗಳ ಆಂದೋಲನದ ಕಂಪನಾಂಕ ಬದಲಾಗುವ ಹಾಗೂ ವಿದ್ಯುತ್ ವಾಹಕತ್ವ ಮತ್ತು ಕೆಲವು ವಸ್ತುಗಳ ಗಾತ್ರ ಕುಗ್ಗುವ ಸತ್ಯಾಂಶಗಳು ಅತಿ ಸೂಕ್ಷ್ಮ ಪ್ರಯೋಗಗಳಿಂದ ದೃಢಪಡಿಸಲ್ಪಟ್ಟಿವೆ.

'ಮರಳಿಬಾರದ' ಪ್ರಕ್ರಿಯೆಗಳೊಂದಿಗೆ, ಬೇರೆ ಶಬ್ದಗಳಲ್ಲಿ ಹೇಳಬೇಕಾದರೆ ತನ್ನ ಸಮತೆಯನ್ನು ಇನ್ನೂ ಪಡೆಯದ ವ್ಯವಸ್ಥೆಯೊಂದಿಗೆ,



ಪಶುವೈದ್ಯ: ಓಹ್! ಇದು ನಿಮ್ಮ ಮಗೂನಾ? ಅದಕ್ಕೇನೂ ಆಗಿಲ್ಲ; ಬೇಗ ಮದುವೆ ಮಾಡಿ ಬಿಟ್ಟರೆ ಎಲ್ಲಾ ಸರಿಹೋಗುತ್ತೆ.

ಮಾತ್ರ ಕಾಲದ ಬಿಡುಗಡೆಯು ಸಹಕರಿಸುತ್ತದೆ ಎಂಬುದು ವಿಜ್ಞಾನಿಯ ತೀರ್ಮಾನ. ಆದರೆ ಅದನ್ನು ಸಿದ್ಧಾಂತ ಮಾಡಿ ತೋರಿಸುವದು ಹೇಗೆ?

ಅಪನಂಬಿಕೆಯುಳ್ಳವರಿಗಾಗಿ ಒಂದು ನಿರ್ಣಾಯಕ ಪ್ರಯೋಗ ಅವಶ್ಯವಿತ್ತು. ನಾವು ನಕ್ಷತ್ರಗಳನ್ನು ನೋಡುವುದು ಅವುಗಳ ಸದ್ಯದ ನೆಲೆಯಿಂದಲ್ಲ. ಆದರೆ ಹತ್ತಾರು ಅಥವಾ ನೂರಾರು ವರುಷಗಳ ಹಿಂದಿನ – ನಿಖರವಾಗಿ ಹೇಳಬೇಕಾದರೆ – ಅವುಗಳಿಂದ ಹೊರಟ ಪ್ರಕಾಶ ನಮ್ಮ ಗ್ರಹವನ್ನು ತಲುಪುವ ಕಾಲದಷ್ಟು ಹಿಂದಿನ ನೆಲೆಯಿಂದ ಎಂಬುದು ತಿಳಿದ ವಿಷಯ. ಆದರೆ ಕಾಲ ಒಂದನ್ನೇ ಗಣನೆಗೆ ತೆಗೆದುಕೊಂಡಾಗ ಇರುವ ವಿಷಯುಗಳು ಬೇರೆಯೇ. ಪ್ರಕಾಶದಂತೆ ಕಾಲವು ವಿಶ್ವದ ತುಂಬೆಲ್ಲ ಪಸರಿಸಲಾರದ್ದರಿಂದ ಅದು ಒಮ್ಮೆಲೆ ವಿಶ್ವದ ತುಂಬ ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಎಲ್ಲ ಪ್ರಕ್ರಿಯೆಗಳ ಹಾಗೂ ಭೌತಿಕ ವಸ್ತುಗಳ ಮೇಲೆ ಅದರ ಪ್ರಭಾವ ತತ್‌ಕ್ಷಣ ಕಂಡುಬರುತ್ತದೆ.

ಇನ್ನೂ ಸರಳವಾಗಿ ಹೇಳಬೇಕೆಂದರೆ ಕಾಲದ ಲಕ್ಷಣಗಳನ್ನು ಉಪಯೋಗಿಸಿ ವಿಶ್ವದ ಯಾವುದೇ ಬಿಂದುವಿನಿಂದ ತತ್‌ಕ್ಷಣ ಸುದ್ದಿಯನ್ನು ಪಡೆಯಬಹುದು ಅಥವಾ ಅದನ್ನು ಬೇರಾವುದೇ ಬಿಂದುವಿಗೆ ಕೂಡಲೇ ರವಾನಿಸಬಹುದು. ಆಗ ಮಾತ್ರ ವಿಶಿಷ್ಟ ಸಾಪೇಕ್ಷತಾ ತತ್ವದೊಂದಿಗೆ ವಿರೋಧ ಬರಲಾರದು. ಗೊತ್ತಾದ ಒಂದು ಕ್ಷಣದಲ್ಲಿ ನಕ್ಷತ್ರದ ನೆಲೆಯನ್ನು ಗುಣಿಸುವದಾದಲ್ಲಿ ದೂರದರ್ಶಕವನ್ನು ಆಕಾಶದ ಕಡೆಗೆ ನಿರ್ದೇಶಿಸಿದಾಗ ಕಣ್ಣಿಗೆ ಕಾಣುವಂತಹದು ಅಲ್ಲಿರದಿದ್ದರೂ, ಬುಗುರೆಯ ತೂಕದಲ್ಲಾದ ಬದಲಾವಣೆಯ ಊಹೆಯು ದೃಢಪಡಿಸಲ್ಪಡುವುದು. ಪ್ರೊಸಿಯಾನ್ ನಕ್ಷತ್ರದ ಖಚಿತ ನೆಲೆಯನ್ನು ಗೊತ್ತುಪಡಿಸಿದ್ದು ಹೀಗೆಯೇ.

ಡಾ. ಕೊರಿಝರೇವ್ ಅವರ ಪ್ರಯೋಗಗಳನ್ನು ಮಾಸ್ಕೋದಲ್ಲಿ ಪರೀಕ್ಷೆಗೆ ಒಳಪಡಿಸಲಾಯಿತು. ಫಲಿತಾಂಶಗಳು ಸರಿ ಹೊಂದಿದವು. ಆದರೂ ಗೊತ್ತಿರುವ ಶ್ರೇಷ್ಠ ಯಂತ್ರಶಾಸ್ತ್ರ ನಿಯಮಗಳು ಈ ಪ್ರಯೋಗಗಳ ಸ್ಪಷ್ಟೀಕರಣಕ್ಕೆ ಅಸಮರ್ಥವಾಗಿರುವುದರಿಂದ ಇಲ್ಲಿ ಕಾಲದ ಪ್ರಭಾವದ ಪ್ರಶ್ನೆಯೇ ಉದ್ಭವಿಸುವದಿಲ್ಲ ಎಂದು ಸಾಧಾರಣವಾಗಿ ವಿರೋಧಿಸುವ ವಿಜ್ಞಾನಿಗಳಿದ್ದಾರೆ. ಮನುಷ್ಯನ ತಿಳುವಳಿಕೆ ಹುಟ್ಟಿದಂದಿನಿಂದಲೂ ಇಲ್ಲಿಯ ವರೆಗೆ ಅವನ ಊಹೆಗೆ ನಿಲುಕಿದ ಕಾಲದ ಸರ್ವ ಗುಣಲಕ್ಷಣಗಳನ್ನೂ ಅದರ ಪ್ರತ್ಯೇಕ ವೈಶಿಷ್ಟ್ಯಗಳನ್ನೂ ಭೂಮಿಯ ಮೇಲಿನ ಪ್ರಯೋಗಾಲಯದಲ್ಲಿ ಗೊತ್ತುಹಚ್ಚಲು ಶಕ್ಯವಿದೆ. ಆದರೆ ಕಾಲವು ವಿಶ್ವದಲ್ಲಿ ತನ್ನದೇ ಆದ ವಿಶಿಷ್ಟ ಪಾತ್ರವನ್ನು ಹೊಂದಿದೆಯಲ್ಲದೆ ಎಲ್ಲೆಡೆಗೂ ತನ್ನ ಗುಣಲಕ್ಷಣಗಳನ್ನು ವಿಶೇಷ ರೀತಿಯಲ್ಲಿ ತೋರಿಸುತ್ತದೆ. ಎಂದು ಡಾ. ಕೊರಿಝರೇವ್ ಖಚಿತವಾಗಿ ನಂಬುತ್ತಾರೆ.

ಜರ್ಮನಿಯ ಭೌತ ವಿಜ್ಞಾನಿ ಕ್ಲಾಸಿಯಸ್ ಉಷ್ಣಬಲ ಕ್ರಿಯಾಶಾಸ್ತ್ರ (Thermo-dynamics)ದ ಎರಡನೇ ತತ್ವವನ್ನು ಸೂತ್ರಬದ್ಧವಾಗಿಸಿ ಹಾಗೂ ಅದನ್ನು ಇಡೀ ವಿಶ್ವಕ್ಕೆ ಅನ್ವಯಿಸಿ, ನಕ್ಷತ್ರಗಳು ನಿಧಾನವಾಗಿ ತಮ್ಮ ಉಷ್ಣತೆಯನ್ನು ಸುತ್ತಲಿನ ಆಕಾಶಕ್ಕೆ ಬಿಟ್ಟುಕೊಡುತ್ತ ನಿರ್ನಾಮವಾಗುತ್ತವೆಂದು ತೀರ್ಮಾನಿಸಿದ.

ಅವರ ಈ ಸಿದ್ಧಾಂತವನ್ನು ಅನೇಕ ವಿಜ್ಞಾನಿಗಳು ವಿರೋಧಿಸಿದರು. ಕ್ಲಾಸಿಯಸ್ಸನ ಸಿದ್ಧಾಂತವನ್ನು ಅವೈಜ್ಞಾನಿಕ ಎಂದೂ ಕರೆದರು. ಈ ವಿಶ್ವವು ಬದುಕಿ ಉಳಿಯುತ್ತದೆಯೋ ನಿರ್ನಾಮವಾಗುತ್ತದೆಯೋ ಎಂಬುದನ್ನು ಸ್ಪಷ್ಟಪಡಿಸುವ ಮೊದಲು ನಕ್ಷತ್ರಗಳು ಪ್ರಕಾಶಿಸುವ ಕಾರಣವನ್ನು ಶೋಧಿಸಬೇಕು.

ಸೂರ್ಯಾಂತರ್ಗತ ಉಷ್ಣತೆಯು ಉಷ್ಣಬೀಜಾಣು ಪ್ರಕ್ರಿಯೆಗೆ ಬೇಕಾಗುವ ಉಷ್ಣತೆಗಿಂತ ತೀರ ಕೆಳಮಟ್ಟದಲ್ಲಿ ಇರುತ್ತದೆಂದು ಪ್ರಯೋಗಗಳಿಂದ ಹಾಗೂ ಗಣಿತದ ಲೆಕ್ಕಾಚಾರಗಳಿಂದ ತಿಳಿದುಬಂದಿದೆ. ಆದ್ದರಿಂದ ನಕ್ಷತ್ರಗಳೆಂದರೆ ಉಷ್ಣ ಬೀಜಾಣುಗಳ ರಿಯಾಕ್ಟರುಗಳು ಎಂದು ಸೂಚಿಸುವ ಸಿದ್ಧಾಂತವು ಈಗ ಚರ್ಚಾಸ್ಪದವಾಗಿದೆ. ವಿಶ್ವ ನಿಯಮಗಳ ಒಳಗುಟ್ಟು ಯಾವುದು

ಎಂಬುದನ್ನು ಕುರಿತು ಡಾ. ಕೊರಿಖರೇವ್ ಆಲೋಚಿಸತೊಡಗಿದರು. ನಕ್ಷತ್ರಗಳಿಗೆ ತಮ್ಮದೇ ಆದ ಶಕ್ತಿಮೂಲ ಇರುವುದಿಲ್ಲವೆಂದೂ ಅವು ಬಾಹ್ಯಾಕಾಶದಿಂದ ಪಡೆಯುವ ಶಕ್ತಿಯಿಂದ ಉಷ್ಣತೆ ಹಾಗೂ ಪ್ರಕಾಶವನ್ನು ಚದುರಿಸಲು ಮಾತ್ರ ಇರುತ್ತವೆಂದೂ ೧೯೫೩ ರಲ್ಲಿ ತೀರ್ಮಾನಿಸಿದರು. ಆದರೆ ಆ ಶಕ್ತಿ ಬರುವದು ಎಲ್ಲಿಂದ?

ನಿಸ್ಸಂದಿಗ್ಧವಾಗಿಯೂ ಅದು ಸುತ್ತಲಿನ ಆಕಾಶದಿಂದ ಬರುತ್ತದೆ. ಆದರೂ ಆಕಾಶವೇ ಶಕ್ತಿಮೂಲವಾಗಲಾರದು. ಅದು ಜಡವಾದುದು. ಆದರೆ ಆಕಾಶವನ್ನು ಕಾಲದಿಂದ ಬೇರ್ಪಡಿಸಲು ಬರುವಂತಿಲ್ಲ. ಈ ವಿಚಾರವೇ ಕಾಲದ ಬಗ್ಗೆ ಚಿಂತಿಸಲು ಡಾ. ಕೊಂಖರೇವ್‌ರನ್ನು ಪ್ರಚೋದಿಸಿತು.

ಈ ಪ್ರಶ್ನೆಗೆ ಪ್ರಥಮ ಪರಿಹಾರ ಸಿಕ್ಕದ್ದು ವಿಶ್ವಗುರುತ್ವಾಕರ್ಷಣ ನಿಯಮದಿಂದ ಬಂಧಿಸಲ್ಪಟ್ಟ ಹಾಗೂ ಭಿನ್ನ ಸಮುದಾಯಕ್ಕೆ ಸೇರಿದ ಜೋಡು ನಕ್ಷತ್ರಗಳಿಂದ. ಆದರೆ ವಿಸ್ಮಯಕಾರಕ ಅಂಶವೆಂದರೆ ಬೇರೆ ಬೇರೆ ಗುಂಪುಗಳಿಗೆ ಸೇರಿದ ನಕ್ಷತ್ರಗಳನ್ನು ಬಿಡಿಯಾಗಿ ನೋಡಿದಾಗ ಅವು ಭಿನ್ನವಾಗಿ ಕಾಣುತ್ತವೆ; ಅದನ್ನೇ ಜೋಡಿಯಾಗಿ ತೆಗೆದುಕೊಂಡಾಗ ಕಾಂತಿ, ವರ್ಣಸೂಚಿ ಇತ್ಯಾದಿ ವಿಷಯಗಳಲ್ಲಿ ವಿಲಕ್ಷಣ ಸಾದೃಶ್ಯಗಳನ್ನು ತೋರುತ್ತವೆ. ಪ್ರಮುಖವಾದ ನಕ್ಷತ್ರವು ನೆರೆಯ ನಕ್ಷತ್ರದ ಮೇಲೆ ತನ್ನ ಪ್ರಭಾವವನ್ನು ಬೀರುತ್ತ ಅದರ ಗುಣಧರ್ಮಗಳನ್ನೇ ಬದಲಿಸಬಹುದೆಂಬ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ. ಆದರೆ 'ಜೋಡಿ' ನಕ್ಷತ್ರಗಳ ದೂರವನ್ನು ಗಣನೆಗೆ ತೆಗೆದುಕೊಂಡಾಗ ಬಲನಕ್ಷತ್ರದ ಮೂಲಕ ಉಂಟಾಗುವ ಸಾಮಾನ್ಯ ಪರಿಣಾಮದ ಸಂಭಾವ್ಯವನ್ನೇ ಅಲ್ಲಗಳೆಯಲಾಗಿದೆ. ಬಹುಶಃ ಈ ಸಮಸ್ಯೆಯ ಪರಿಹಾರವು 'ಕಾಲ'ದಲ್ಲಿ ಅಡಗಿರಬಹುದೇ? ಎಂದು ಡಾ. ಕೋರಿಖರೇವ್ ತಮ್ಮನ್ನೇ ಕೇಳಿಕೊಂಡರು.

ನಮ್ಮ ಭೂಗ್ರಹದ ಮೇಲೆಯೇ ಉತ್ತರವನ್ನು ಅರಸಲು ಈ ವಿಜ್ಞಾನಿಗಳು ನಿಶ್ಚಯಿಸಿದರು. ಪೃಥ್ವಿ–ಚಂದ್ರ ವ್ಯವಸ್ಥೆಯು ನಿಜವಾಗಿ ಗ್ರಹ ಜೋಡಿಯೇ. ಚಂದ್ರನು ತನ್ನ ಆಂತರಿಕ ಶಕ್ತಿಯನ್ನು ತನ್ನಷ್ಟಕ್ಕೆ ತಾನೇ ಕಾಯ್ದುಕೊಳ್ಳಲಾರ; ಇದನ್ನು ಗಣಿತಾತ್ಮಕ ಎಣಿಕೆಗಳಿಂದ ಸಿದ್ಧಮಾಡಲಾಗಿದೆ. ಆದರೆ ಕಾಲದ ಮೂಲಕ ಭೂಮಿಯು ತನ್ನ ಉಪಗ್ರಹದ ಮೇಲೆ ಪ್ರಭಾವ ಬೀರುತ್ತಿದ್ದರೆ...? ಈ ವಿಚಾರಧಾರೆಯಲ್ಲಿಯೇ ಆವರ ಚಂದ್ರ ಜ್ವಾಲಾಮುಖೀ ಚಟುವಟಿಕೆಯ ಊಹೆ ಹುಟ್ಟಿದ್ದು ಹಾಗೂ ಆ ನಂತರದಲ್ಲಿ ಪ್ರಚಂಡವಾದ ದೃಢೀಕರಣವನ್ನು ಪಡೆದದ್ದು.

ತಮ್ಮ ಈ ಅನುಮಾನವನ್ನು ಪುಷ್ಟೀಕರಿಸುವಂಥ ಪುರಾವೆ ವಿಶ್ವದಲ್ಲಿ ಎಲ್ಲಿಯಾದರೂ ಸಿಟುಕೀತೇ ಎಂದು ಡಾ. ಕೊರಿಖರೇವ್ ಸಂಶೋಧನೆಯನ್ನು ಮುಂದುವರಿಸಿದರು. ಅತಿ ಸಾಂದ್ರವಾದ, ಪ್ರಚಂಡ ಗುರುತ್ವಾಕರ್ಷಣ ಕ್ಷೇತ್ರವುಳ್ಳ ಹಾಗೂ ವಿಜ್ಞಾನಿಗಳಿಂದ 'ಕೃಷ್ಣ ವಿವರ'ಗಳು ಎಂದು ಕರೆಯಲ್ಪಡುವ ನಕ್ಷತ್ರಗಳು ಇವರ



"ಈ ರೀತಿ ಖುರ್ಚಿಯ ಮೇಲೆ ಅವರನ್ನು ಕೂರಿಸಿದ ಮೇಲೆ, ಅವರ ಅಕ್ಕ್ಕೆ ಕಾಂತಿ ಏರಿತು, ನಮ್ಮನ್ನ ಪೀಡಿಸುವ ಭೂತ ಇಲ್ಲದಂತಾಯ್ತು !"

ಲಕ್ಷ್ಮವನ್ನು ಸೆಳೆದವು. ಈ ನಕ್ಷತ್ರಗಳ ವೈಶಿಷ್ಟ್ಯವೆಂದರೆ ತಮ್ಮೆಡೆಗೆ ಸಮೀಪಿಸಿದ ಏನನ್ನೂ ಅದರ ಕುರುಹು ಸಹಿತ ಉಳಿಯದಂತೆ ಸೆಳೆದುಕೊಂಡು ಅದೃಶ್ಯಗೊಳಿಸಿಬಿಡುವುದು. ಶಕ್ತಿಯುತವಾದ 'ಕ್ಷ' ಕಿರಣಗಳ ನಿಸ್ಸರಣದಿಂದ ಅವುಗಳ ಅಸ್ತಿತ್ವ ಮಾತ್ರ ಗೊತ್ತಾಗಿದೆ.

ಕೃಷ್ಣ ವಿವರಗಳು ಏನನ್ನು ಪೋಲುತ್ತದೆ? ಇವು ಕಸವನ್ನು ಶೇಖರಿಸುವ ವಿಶ್ವದ 'ಉಚ್ಛಿಷ್ಟ ಹರಿ' ಗಳಂತೆ ವರ್ತಿಸುವುದಾಗಿ ಹಲವು ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಅನುಷಂಗಿಕವಾಗಿ, ಎಲ್ಲ ದ್ರವ್ಯರಾಶಿಯೂ ಕೊನೆಗೊಮ್ಮೆ ಕೃಷ ವಿವರಗಳಿಂದ ಶೋಷಿಸಲ್ಪಟ್ಟು ಈ ವಿಶ್ವದ ಅಸ್ತಿತ್ವವೇ ಇಲ್ಲದಂತಾಗುವುದು.

ಈಗಾಗಲಿ ಇನ್ನು ಮುಂದೆಯಾಗಲಿ 'ಕೃಷ್ಣ ವಿವರ'ಗಳ ಈ ಶೋಷಣೆ ಪೂರ್ತಿಗೊಂಡು ಪುನಃ ವಿರುದ್ಧ ದಿಶೆಯಲ್ಲಿ ಈ ಪ್ರಕ್ರಿಯೆಯು ಸಾಗುವುದು; ಅಂದರೆ ಎಲ್ಲ ದ್ರವ್ಯರಾಶಿಯೂ ಹೊರಚೆಲ್ಲುವುದು ಎಂದು ಕೆಲವರು ತರ್ಕಿಸುತ್ತಾರೆ: ಆದರೆ ಆಗ ಈ ಕೃಷ್ಣ ವಿವರಗಳೇ ಇಲ್ಲದಿರಬಹುದಲ್ಲ? ಎಂದು ವಾದಿಸುವವರೂ ಉಂಟು.

ಅವು ಇವೆ; ಇರಲೇಬೇಕು ಎಂದು ಡಾ. ಕೊರಿಖರೇವ್ ಹೇಳುತ್ತಾರೆ. ಕ್ಷ ಕಿರಣ ನಿಸ್ಸರಣ ಮೂಲ ಸೈಗ್ನಸ್ ಕ್ಷ-೧ ದ ಸುತ್ತಲೂ ಶಾಸ್ತ್ರ ಸಮ್ಮತವಲ್ಲದ ಕಾಲದ ಸಾಂದ್ರತೆಯನ್ನು ಉಪಕರಣಗಳು ತೋರಿಸಿವೆ; ಇದನ್ನು ಖಗೋಳ ಶಾಸ್ತ್ರಜ್ಞರು 'ಸಂದೇಹಾಸ್ಪದ' ಎಂದು ತಿಳಿಯುತ್ತಿದ್ದರೂ ಇದು 'ಕೃಷ್ಣ ವಿವರ'ವಾಗಿರಬಹುದು. ಆದರೆ ಅದು ಇಡೀ ದ್ರವ್ಯರಾಶಿಯನ್ನು ಅಲಭ್ಯವಾಗುವಂತೆ ಅದೃಶ್ಯವಾಗಿರಿಸುವ ಪಾತಾಳವಲ್ಲ ಎಂದು ಈ ಪ್ರೊಫೆಸರರು ಹೇಳುತ್ತಾರೆ.

ಈ ವಿಶ್ವಕ್ಕೆ ಮಾನವನ ಊಹೆಯನ್ನು ಮೀರಿದ ಕ್ಲಿಷ್ಟ ರಚನೆ ಇದೆ. ಅದು ತನ್ನ ಅನಂತ ಬದುಕಿನ ಗತಿಯನ್ನು ತಾನೇ ರೂಪಿಸಿಕೊಂಡಿದೆ, ಕಾಲವು ಆಕಾಶಕ್ಕೆ ಶಕ್ತಿಯನ್ನು ಕಳಿಸುವ, ಶಕ್ತಿಯು ಕಾಲದ ಮುಖಾಂತರ ಸರ್ವತ್ರ ಪರಿಚಲನೆಗೆ ದ್ರವ್ಯವನ್ನು ಮರಳಿ ಪಡೆಯುವ ನಿಯಂತ್ರಕಗಳು ಈ 'ಕೃಷ್ಣ ವಿವರ'ಗಳು. ಹೀಗೆ ಈ ಲೋಕವು ವಿಶ್ವದ ನಿತ್ಯ ನೂತನ ಸ್ಥಿತಿಯನ್ನು ಕಾಯ್ದುಕೊಳ್ಳುತ್ತ ಕಾರ್ಯ ಮಾಡುತ್ತಿದೆ. ✿

(ಕೃಪೆ: ಸೋವಿಯತ್ ಸಮಾಚಾರ ಇಲಾಖೆ, ಮದ್ರಾಸ್)

---

ದಿ ಕೈಲಾಸಂ ಅವರನ್ನು ತನ್ನ ವಿವಾಹಕ್ಕೆ ಆಮಂತ್ರಿಸಲು ಬಂದಿದ್ದ ನವ ಕವಿಯೊಬ್ಬ, ನನ್ನದು ಪ್ರೇಮ ವಿವಾಹ, ಅಂತರ್ ಜಾತೀಯ ವಿವಾಹ ಕೂಡ- ಆದ್ದರಿಂದ ತಾವು ಆಗಮಿಸಲೇಬೇಕೆಂದು ನನ್ನ ನಮ್ರ ವಿನಂತಿ. ಜೊತೆಗೆ ಮುಹೂರ್ತದ ನಂತರ, ಅರತಕ್ಷತೆಯ ಬದಲಾಗಿ ಕವಿ ಸಮ್ಮೇಳನವೊಂದನ್ನು ವ್ಯವಸ್ಥೆ ಮಾಡಲಾಗಿದೆ. ಆ ನಲುವಾಗಿಯಾದರೂ..." ಎಂದ.

"ತಮ್ಮ ವಿವಾಹಕ್ಕೆ ಶುಭಾಶಯಗಳು,"— ನಡುವೆ ಬಾಯಿ ಹಾಕಿದ ಕೈಲಾಸಂ ನುಡಿದರು," ತಮ್ಮ ದಾಂಪತ್ಯ ಜೀವನಕ್ಕೆ ಹಾರೈಕೆಗಳು. ಆದರೆ, ಕವಿ ಸಮ್ಮೇಳನಕ್ಕೆ ಬರಲಾಗುವುದಿಲ್ಲ, ಕ್ಷಮಿಸಿ. ಏಕೆಂದರೆ ನಾನೆಂದೂ 'ಶೋಕಗೀತೆ' ಬರೆದಿಲ್ಲ.

* * *

ಪ್ರೇತಾತ್ಮವೊಂದು ಸ್ವರ್ಗವನ್ನು ಪ್ರವೇಶಿಸಬಯಸಿ, ಸ್ವರ್ಗದ ಬಾಗಿಲು ತಟ್ಟಿತು ಬಾಗಿಲು ತೆರೆದ ಕಾವಲುಗಾರ ಪ್ರಶ್ನಿಸಿದ: "ನೀನು ಅವಿವಾಹಿತನೇ ?"

"ಇಲ್ಲ. ನನಗೆ ಮದುವೆಯಾಗಿತ್ತು."

"ಹಾಗಾದರೆ, ಬಾ ಒಳಗೆ, ನಿನಗೆ ಈಗಾಗಲೆ ನರಕದ ಅನುಭವವಾಗಿದೆ."

—ಎ. ವೆಂಕಟೇಶಪ್ಪ

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.**

೧. **ಅನುಭೂತಿ**
(ಅ) ಮಂಕು ಮಾಡುವುದು (ಆ) ಅಸಾಧಾರಣವಾದ ಅನುಭವ (ಇ) ಸಂಪತ್ತು (ಈ) ಸೌಜನ್ಯ

೨. **ಅನುಷ್ಠಾನ**
(ಅ) ಆಚರಣೆ (ಆ) ಅಲುಗಾಡದಿರುವುದು (ಇ) ಬೆನ್ನಟ್ಟುವುದು (ಈ) ಕ್ಷುಲ್ಲಕ ಬುದ್ಧಿ

೩. **ಪಳೆಯುಳಿಕೆ**
(ಅ) ಗಾದೆ (ಆ) ಮುಪ್ಪು (ಇ) ಪುರಾತನ ಕಾಲದ ಪ್ರಾಣಿ ಅವಶೇಷ (ಈ) ಅತಿಯಾದ ಸಲುಗೆ

೪. **ಪಳಮೆ**
(ಅ) ಬೀಳುವುದು (ಆ) ತುಂಬಿ (ಇ) ಕೋಗಿಲೆ (ಈ) ಪುರಾತನದ್ದು

೫. **ಪಾಂಡುರ**
(ಅ) ಒಬ್ಬ ದೇವರು (ಆ) ಬಿಳಿ ಛಾಯೆಯುಳ್ಳ (ಇ) ತುಂಬಾ ಓದಿದ (ಈ) ಕ್ಷೇತ್ರ ಪುರೋಹಿತ

೬. **ದ್ಯೋತಕ**
(ಅ) ಜನ್ಮಪತ್ರಿಕೆ (ಆ) ನೇತಾಡುವ (ಇ) ಸೂಚಿಸುವ (ಈ) ನಮಸ್ಕರಿಸುವ

೭. **ದೂಪೆ**
(ಅ) ಹೊಗೆ (ಆ) ತಿಂಡಿಪೋತ (ಇ) ರಾಶಿ (ಈ) ಗೋರಿ

೮. **ದೂರ್ವೆ**
(ಅ) ಗರಿಕೆ ಹುಲ್ಲು (ಆ) ನಿಂದೆ (ಇ) ಬಾಗಿಲು (ಈ) ಸಮಾಧಿ

೯. **ಕಿತ್ತಿ**
(ಅ) ಮೇಲ್ಪಂಕ್ತಿ ಹಾಕಿದ ಬರಹ (ಆ) ಅಧಿಕ ಪ್ರಸಂಗ (ಇ) ಪುಸ್ತಕ (ಈ) ನಾಶ

೧೦. **ಕಿತವ**
(ಅ) ಹೆಸರುವಾಸಿ (ಆ) ವಂಚಕ (ಇ) ಚಿಕ್ಕಪ (ಈ) ಬರಹಗಾರ

೧೧. **ಖುಲಾಸೆ**
(ಅ) ಬಾಯಿ ಚಪಲ (ಆ) ಸಂತೋಷ (ಇ) ಬಿಡುಗಡೆ (ಈ) ಗೊರಸು

೧೨. **ಖೋಡಿ**
(ಅ) ಮೂಲೆ (ಆ) ಮರದ ದಿಮ್ಮಿ (ಇ) ಆಟ (ಈ) ಕೇಡುಗ

# 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ಅನುಭೂತಿ** (ಅ) ವಿಶೇಷವಾದ ಅನುಭವ; ಲೋಕೋತ್ತರವಾದ ಅನಿಸಿಕೆ. ಉದಾ:— ರಸಾನುಭೂತಿ, ಸೌಂದರ್ಯಾನುಭೂತಿ. [ಸಂ. ಅನು=ಅನುಸರಿಸಿ+ಭೂತಿ=ಆಗುವಿಕೆ]

೨. **ಅನುಷ್ಠಾನ** (ಅ) ಆಚರಣೆ; ಧಾರ್ಮಿಕ ವಿಧಿ. ಉದಾ:— ಆಡಿದ್ದನ್ನು ಅನುಷ್ಠಾನಕ್ಕೆ ತರಬೇಕು. [ಸಂ. ಅನು=ಅನುಸರಿಸಿ+ಸ್ಥಾನ=ಇರುವಿಕೆ]

೩. **ಪಳೆಯುಳಿಕೆ** (ಇ) ಪುರಾತನ ಕಾಲದ ಜೀವಿಗಳ ಅವಶೇಷ. ಉದಾ:— ನೆಲದಿಂದ ಅಗೆದ ಪಳೆಯುಳಿಕೆಗಳು ಜೀವವಿಕಾಸವನ್ನು ತಿಳಿಸುತ್ತವೆ. [ಕನ್ನಡ, ಪಳೆ=ಹಳೆ+ಉಳಿಕೆ=ಉಳಿದದ್ದು]

೪. **ಪಳಮೆ** (ಈ) ಪುರಾತನದ್ದು; ಹಿಂದಿನ ಕಾಲದ ಮಾತುಗಳು; ವೇದ; ಪ್ರಾಚೀನತ್ವ ಉದಾ:— ಪಳಮೆಗಳಲ್ಲಿ ಯುಗಾಂತರದ ಅನುಭವ ಇದೆ. [ಕನ್ನಡ, ಪಳೆ=ಹಳೆ–ಇಂದ]

೫. **ಪಾಂಡುರ** (ಅ) ಬಿಳಿ ಛಾಯೆಯುಳ್ಳ; ಹಳದಿ ಮಿಶ್ರಿತ ಬಿಳಿ ಬಣ್ಣದ; ಬಿಳಿಚಿದ. ಉದಾ:— ಗರ್ಭಿಣಿಯ ಪಾಂಡುರ ಮುಖ. [ಸಂ. ಪಾಂಡು=ಬಿಳಿ–ಇಂದ]

೬. **ದ್ಯೋತಕ** (ಇ) ಸೂಚಿಸುವ, ಬೆಳಕು ಚೆಲ್ಲುವ; ಹೊರ ತೋರಿಸುವ. ಉದಾ:— ಅವಳ ಮುಖ ಲಕ್ಷಣವೇ ಒಳಕುದಿಯ ದ್ಯೋತಕವಾಗಿದೆ. [ಸಂ. ದ್ಯುತ್=ಹೊಳೆ- ಎಂಬುದರಿಂದ]

೭. **ದೂಪೆ** (ಈ) ಗೋರಿ, ಹೆಣ ಸುಟ್ಟ ಅಥವಾ ಹುಗಿದಲ್ಲಿ ಕಟ್ಟಿದ ಸಮಾಧಿ. [ತುಳು–ದೂಪೆ]

೮. **ದೂರ್ವೆ** (ಅ) ಗರಿಕೆ ಹುಲ್ಲು, ಕರಿಕೆ. ಉದಾ:— ದೂರ್ವೆ ಎಸಳನ್ನಾದರೂ ದೇವರು ಸ್ವೀಕರಿಸುತ್ತಾನೆ. [ಸಂ. ದೂರ್ವಾ]

೯. **ಕಿತ್ತೆ** (ಅ) ಬರೆಯಲು ಕಲಿಯುವವರಿಗೆ ಅನುಕರಿಸಲು ಹಾಕಿಕೊಡುವ ಮೇಲ್ಪಂಕ್ತಿ; ಮಾದರಿ ಲಿಪಿ. ಉದಾ:— ಮುಂದಾಳುಗಳ ಕಿತ್ತೆ ತೀಡುವುದೇ ಇವರಿಗೆ ಗೊತ್ತು. [ಅರಬಿ, ಕಿತ್‌ಅ=ಉರ್ದು–ಕಿತಾ=ತುಣುಕು]

೧೦. **ಕಿತವ** (ಅ) ವಂಚಕ, ಮೋಸಗಾರ; ಜೂಜುಗಾರ. ಉದಾ:– ಹೆಣ್ಣುಗಳನ್ನು ಬಲೆಯಲ್ಲಿ ಕೆಡಹುವ ಕಿತವ ಈತ. [ಸಂ.]

೧೧. **ಖುಲಾಸೆ** (ಇ) ಬಿಡುಗಡೆ, ವಿಮೋಚನೆ; ಖಾಲಿಯಾಗುವಿಕೆ; ತೆರೆಯುವಿಕೆ. ಉದಾ:– ನ್ಯಾಯಾಧೀಶರು ಕೈದಿಯನ್ನು ಖುಲಾಸೆ ಮಾಡಿದರು. [ಅರಬಿ, ಖುಲಾಸಾ]

೧೨. **ಖೋಡಿ** (ಈ) ದುಷ್ಟ; ದುಷ್ಟತನ; ಕಿಡಿಗೇಡಿ; ಕೆಡುಕು; ತಪ್ಪು. ಉದಾ:— ಖೋಡಿ ಹುಡುಗ. [ಮರಾಠಿ, ಖೋಟಿ=ಕೆಟ್ಟ ಚಾಳಿ]

●

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | ... | ಸಾಧಾರಣ |
| ೯—೧೦ ,, | ... | ಉತ್ತಮ |
| ೧೧—೧೨ ,, | ... | ಅತ್ಯುತ್ತಮ |

●

# ಉಂಡಾಡಿಯೊಬ್ಬ ಕುಬೇರನಾದ

ಮೂಲ ಹಿಂದಿ : **ದ್ರೋಣವೀರ ಕೋಹ್ಲಿ**          ಕನ್ನಡಕ್ಕೆ : **ಕೆ. ಎ. ಕುಬಣೂರಾಯ**

ಇಟಾಲಿಯನ್ ಭಾಷೆಯಲ್ಲಿ 'ಚೂಚ್' ಎಂಬ ಶಬ್ದವೊಂದಿದೆ. 'ಚೂಚ್' ಎಂದರೆ ಪೆದ್ದ, ಸೋಮಾರಿ, ಶಿಥಿಲ ಮನೋವೃತ್ತಿಯವನು ಹಾಗೂ ಯಾವ ಕೆಲಸಕ್ಕೂ ಬಾರದ ನಿಷ್ಪ್ರಯೋಜಕ ಎಂದು ಅರ್ಥ. ಪ್ರತಿಯೊಂದು ಕುಟುಂಬದಲ್ಲೂ ಒಬ್ಬ 'ಚೂಚ್' ಇದ್ದೇ ಇರುತ್ತಾನೆಂದೂ ಅವನು ಎಂದೂ ತಾನೇ ಸಂಪಾದಿಸಿ ಉಣ್ಣುವವನಲ್ಲವೆಂದೂ ಇಟಾಲಿಯನ್ನರು ಹೇಳುತ್ತಾರೆ. ಆದರೆ ಕುಟುಂಬದ ಇತರ ಜನರು ಆತನನ್ನು ತಿರಸ್ಕಾರದಿಂದ ಕಡೆಗಣಿಸದೆ ಅವನಿಗೆ ತಮ್ಮಿಂದಾದಷ್ಟು ಸಹಾಯ ಮಾಡುತ್ತಲೇ ಇರುತ್ತಾರೆ.

ಇಂದು 'ದ ಗಾಡ್ ಫಾದರ್' ಮತ್ತು 'ಫೂಲ್ಸ್ ಡೇ' ಎಂಬ ಎರಡು ಕಾದಂಬರಿಗಳಿಂದ ಕೋಟಿಗಟ್ಟಲೆ ಡಾಲರ್ ಗಳಿಸಿರುವ ಮಾರಿಯೋ ಪೂಜೋ ಒಂದು ಕಾಲದಲ್ಲಿ 'ಚೂಚ್' ಆಗಿದ್ದ. ಇದಕ್ಕಿಂತ ಮೊದಲು ಆತನ ಅನೇಕ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾದುದಲ್ಲದೆ ಸಾಹಿತ್ಯಕ ದೃಷ್ಟಿಯಿಂದ ಶ್ರೇಷ್ಠವಾದ ಎರಡು ಕಾದಂಬರಿಗಳನ್ನು ಬರೆದಿದ್ದನಾದರೂ ಲೇಖನ ವ್ಯವಸಾಯದಿಂದ ಆತನಿಗೆ ಎಂದೂ ತನ್ನ ಕುಟುಂಬದ ಖರ್ಚಿಗೆ ಸಾಕಾಗುವಷ್ಟು ಹಣ ಬರುತ್ತಿದ್ದಿಲ್ಲ! ಹೀಗಾಗಿ ಯಾವಾಗಲೂ ಕುತ್ತಿಗೆ ತನಕ ಸಾಲದಲ್ಲಿ ಮುಳುಗಿರುತ್ತಿದ್ದ. ಸಾಲಿಗರು ಬಹಳ ತಗಾದೆ ಮಾಡಿದಾಗ ಆತ ತನ್ನ ಅಣ್ಣನ ಮನೆ ಬಾಗಿಲಿಗೆ ಬರುತ್ತಿದ್ದ; ಆಗ ಅಣ್ಣ ಅಷ್ಟಿಷ್ಟು ಸಹಾಯಮಾಡುತ್ತಿದ್ದ.

ಒಂದು ದಿನ ಇದ್ದಕ್ಕಿದ್ದಂತೆ ಆತ ಕಾಯಿಲೆ ಬಿದ್ದ. ಟ್ಯಾಕ್ಸಿಯಲ್ಲಿ ಕುಳಿತು ಆಸ್ಪತ್ರೆ ಕಡೆ ಹೊರಟ... ಹಿಡಿದ. ಟ್ಯಾಕ್ಸಿಯಿಂದ ಇಳಿಯುತ್ತಿದ್ದಂತೆ ಮಾರ್ಗಬದಿಯ ಚರಂಡಿಯೊಳಗೆ ಕುಸಿದು ಬಿದ್ದ. ಆ ದಿನ ತನಗಾದ ಅನುಭವವನ್ನು ಕುರಿತು ಪೂಜೋ, 'ಹಲವಾರು ಕೃತಿಗಳನ್ನು ಪ್ರಕಟಿಸಿದ ನಾನು ಇಲ್ಲಿ ನಾಯಿಯ ಹಾಗೆ ಸಾಯುತ್ತಿದ್ದೇನೆ' ಎಂದು ಆಗ ಅನಿಸಿತು. ಆಗಲೇ ನಾನೂ ಒಂದಿಲ್ಲೊಂದು ದಿನ ಹಣ ಸಂಪಾದಿಸುತ್ತೇನೆ, ಕೀರ್ತಿಯನ್ನು ಪಡೆಯುತ್ತೇನೆ ಎಂದು ನಿರ್ಧರಿಸಿದೆ' ಎಂದು ಒಂದು ಕಡೆ ಬರೆದಿದ್ದಾನೆ.

ಮುಂದೆ ನಿಜವಾಗಿ ಆದದ್ದೂ ಹೀಗೆಯೆ. ಇಂದು ಮಾರಿಯೋ ಪೂಜೋ ಲೇಖಕರಲ್ಲಿ ಕುಬೇರನಾಗಿ ಮೆರೆಯುತ್ತಿದ್ದಾನೆ. ಪ್ರತಿದಿನ ಸಾವಿರಗಟ್ಟಲೆ ಆತ ರೂಪಾಯಿಗಳನ್ನು ಕ್ಲಬ್ಬುಗಳಲ್ಲಿ ಪಣಕ್ಕಿಡುತ್ತಾನೆ. ಸೋಲುತ್ತಲೂ ಇರುತ್ತಾನೆ. ಆದರೂ ಅವನ ಆರ್ಥಿಕ ಸ್ಥಿತಿ ಕೆಡುವುದಿಲ್ಲ.

'ಗಾಡ್‌ಫಾದರ್' ಕಾದಂಬರಿಯಿಂದ ಲಕ್ಷ್ಮಿಯ ಕೃಪಾಕಟಾಕ್ಷಕ್ಕೊಳಗಾದವ ಲೇಖಕನೊಬ್ಬನೇ ಅಲ್ಲ. ಅವನೊಟ್ಟಿಗೆ ಕಾದಂಬರಿಗಳು ಪ್ರಕಾಶಕರು, ಸಿನೆಮಾ ನಿರ್ಮಾಪಕರೂ ಇದ್ದಾರೆ.

## ನರಕದ ಅಡುಗೆ ಮನೆ

ಮಾರಿಯೋ ಪೂಜೋ ಇಟಾಲಿಯನ್ ಮೂಲದ ಅಮೇರಿಕನ್. ಒಂದಾನೊಂದು ಕಾಲದಲ್ಲಿ ಆತನ ಬಡಪಾಯಿ ತಾಯಿ, ತನ್ನ ಯೌವನ ಕಾಲದಲ್ಲಿ ಇಟಲಿಯ ಸಿಸಿಲಿ ದ್ವೀಪದ ದಕ್ಷಿಣ ಭಾಗದ ಚಿಕ್ಕ ಗ್ರಾಮವೊಂದರಿಂದ ಓಡಿ ಬಂದು ಓರ್ವ ಇಟಾಲಿಯನ್ನನ್ನು ವಿವಾಹವಾಗಲು ಅಮೇರಿಕದಲ್ಲಿ ನೆಲಸಿದ್ದಳು. ಅದು ಕೂಡ ಯಾತಕಾಗಿ? ತನ್ನ ಹೊಟ್ಟೆಗೆ ಎರಡು ಹೊತ್ತು ಊಟ ಸಿಗಲೆಂದು. ಆಕೆಯ ಗಂಡ ನಾಲ್ಕು ಮಕ್ಕಳ 'ಸಂಪತ್ತನ್ನು' ಆಕೆಗೆ ದಯಪಾಲಿಸಿ ತೀರಿಕೊಂಡ. ಈಗ ಕುಟುಂಬದ ಪಾಲನೆಗಾಗಿ ಅವಳು ಪುನರ್ವಿವಾಹವಾದಳು. ಆದರೆ ಆದರೆ ದೌರ್ಭಾಗ್ಯ ಅವಳ ಬೆನ್ನು ಹತ್ತಿತು. ಆಕೆಯ ಎರಡನೆಯ ಪತಿ ಇನ್ನೂ ಮೂರು ಮಕ್ಕಳನ್ನು ಕೊಟ್ಟು (ಇವರಲ್ಲಿ ಒಬ್ಬರು ಮಾರಿಯೋ ಪೂಜೋ) ಇಹಲೋಕ ತ್ಯಜಿಸಿದ. ತಂದೆ ತೀರಿಕೊಂಡಾಗ ಪೂಜೋನಿಗೆ ಹನ್ನೆರಡರಷ್ಟು ವಯಸ್ಸು. ಅವರು ನ್ಯೂಯಾರ್ಕಿನ ಅತ್ಯಂತ ಕೊಳಕು ಪ್ರದೇಶದಲ್ಲಿ ವಾಸವಾಗಿದ್ದರು. 'ಗಾಡ್‌ಫಾದರ್' ಸಿನೇಮಾದಲ್ಲಿ ನ್ಯೂಯಾರ್ಕಿನ ಈ ಕೊಳಚೆ ಪ್ರದೇಶದ ಜೀವಂತ ಚಿತ್ರವನ್ನು ಪ್ರೇಕ್ಷಕರ ಮುಂದಿರಿಸಿದ್ದಾನೆ. ನ್ಯೂಯಾರ್ಕಿನ ಆ ಪ್ರದೇಶದ ಹೆಸರೂ ಅನ್ವರ್ಥವಾದದ್ದೇ. ಅದನ್ನು 'ಹೆಲ್ಸ್ ಕಿಚೆನ್' ಅಂದರೆ 'ನರಕದ ಅಡುಗೆ ಮನೆ' ಎಂದು ಕರೆಯುತ್ತಿದ್ದರು. ಇದೇ ಕೊಳಕು ವಾತಾವರಣದಲ್ಲಿ ಪೂಜೋನ ಬಾಲ್ಯ ಹಾಗೂ ಯೌವ್ವನ ಕಳೆಯಿತು. ಈ ಭಾಗದಲ್ಲಿ ವಾಸವಾಗಿದ್ದ ಇಟಾಲಿಯನ್ನರ ಜೀವನ ಎಷ್ಟು ನಾರಕೀಯವಾಗಿತ್ತೆಂಬುದರ ವರ್ಣನೆಯನ್ನು ಆತ ತನ್ನ ಮೊದಲಿನ ಕತೆಯೊಂದರಲ್ಲಿ ಮಾಡಿರುತ್ತಾನೆ.

## ಹದಿನಾರರ ಸಂಕಲ್ಪ

ವಸತಿಯ ಎಲ್ಲೆಡೆಗಳಲ್ಲೂ ಗೂಂಡಾಗಳ ಕಾಟವಿರುತ್ತಿತ್ತು. ಗಂಡಸರೆಲ್ಲ ಎರಡು ಹೊತ್ತಿನ ಊಟಕ್ಕಾಗಿ ರೈಲುಗಳಲ್ಲಿ ದುಡಿಯುತ್ತಿದ್ದರೆ ಮಕ್ಕಳು ಮರಿಗಳು ಗಾಡಿಗಳಿಂದ ಕಲ್ಲಿದ್ದಲ್ಲನ್ನೂ ಹಿಮಗಡ್ಡೆಯನ್ನೂ ಕದಿಯುತ್ತಿದ್ದರು. ಕಿಶೋರ ಕಿಶೋರಿಯರು ರೇಷ್ಮೆ ಸಾಗಿಸುವ ಮೋಟಾರು ಗಾಡಿಗಳಿಂದ ಮಾಲು ಹಾರಿಸುವ ಮೂಲಕ ಅಪರಾಧಿ ಜೀವನದ ತರಬೇತಿಯನ್ನು ಪಡೆಯುತ್ತಿದ್ದರು. ಇಂತಹ ಅಸಹ್ಯ ವಾತಾವರಣದಲ್ಲೂ ಪೂಜೋ ಸುಂದರ ಕನಸುಗಳನ್ನು ಕಾಣುತ್ತಿದ್ದ. ಫಿಲ್ಮಿನಲ್ಲಿ 'ಕೌ ಬಾಯ್' ಆಗಿ ತಾನೂ ಸಾಹಸ ತೋರಿಸಿ ಮೆರೆಯಬಾರದೇಕೆ? ಎಂದೊಮ್ಮೆ ಅಂದುಕೊಂಡರೆ ಇನ್ನೊಮ್ಮೆ ಜಾಗತಿಕ ಸಮರ ಆರಂಭವಾಗಲಿ, ಆಗ ಶೌರ್ಯ ಪ್ರದರ್ಶಿಸುತ್ತೇನೆ ಎಂದು ಅಂದುಕೊಳ್ಳುತ್ತಿದ್ದ. ಮಗುದೊಮ್ಮೆ ದೊಡ್ಡ ಕಲಾಕಾರನಾಗುತ್ತೇನೆ; ಅದಾಗದಿದ್ದರೆ ಸಾಧ್ಯವಾದಲ್ಲಿ ಕವಿಯಾದರೂ ಆಗುತ್ತೇನೆ ಅಂದುಕೊಳ್ಳುತ್ತಿದ್ದ. ಆತ ಹದಿನಾರರ ಹೊಸಿಲನ್ನು ದಾಟುತ್ತಲೇ ತಾನೊಬ್ಬ ಲೇಖಕನಾಗಬೇಕೆಂದು ನಿರ್ಧರಿಸಿದ.

## ಕಾಸಿನ ಮಜ್ಜಿಗೆ

ಪೂಜೋ ರೈಲು ರೋಡಿನಲ್ಲಿ ಸುದ್ದಿ ತಲಪಿಸುವವನ ಕೆಲಸ ಮಾಡತೊಡಗಿದ. ಪ್ರೌಢ ಜೀವನ ನಡೆಸುವ ವಿಷಯವೇ ಪೂಜೋನ ಮನಸ್ಸಿನಲ್ಲಿ ಕಸಿವಿಸಿ ತುಂಬಿಸಿ ಬಿಡುತ್ತಿತ್ತು. ತನ್ನ ಸುತ್ತಮುತ್ತಲಿನ ಕಠಿಣ ಜೀವನವನ್ನು ಆತ ಸಾಕಷ್ಟು ನೋಡಿಯಾಗಿತ್ತು. ಮದುವೆಯಾಗಿ ಮಕ್ಕಳನ್ನು ಹಡೆದು ಅವರನ್ನೂ ಅದೇ ಜೀವನದ ಅಂಗವಾಗಿ ಜೋಡಿಸಲು ಸಿದ್ಧನಿರಲಿಲ್ಲ. ಆತ ಹೆಚ್ಚಾಗಿ ಯಾವುದಾದರೂ ಸಾರ್ವ–

ಜನಿಕ ಲೈಬ್ರೆರಿಯಲ್ಲಿ ಗಂಟೆಗಟ್ಟಲೆ ಪುಸ್ತಕಗಳನ್ನು ನೋಡುತ್ತ ತನ್ನನ್ನು ತಾನೇ ಮರೆಯುತ್ತಿದ್ದ. ಹದಿನೈದು, ಹದಿನಾರರ ಹರೆಯದಲ್ಲೇ ಆತ ದಾಸ್ತೋಯೆವ್‌ಸ್ಕಿಯ ಕಾದಂಬರಿಗಳನ್ನು ಓದಿ ಜೀವನವನ್ನು ತೆರೆದ ಕಣ್ಣುಗಳಿಂದ ನೋಡುವ ಗುಟ್ಟನ್ನು ಕಲಿತ.

ಹದಿನೇಳರ ಹರೆಯದಲ್ಲಿ ಪೂಜೋ ಮೊದಲನೆಯ ಕತೆ ಬರೆದ. ಆಗಲೇ ಜಾಗತಿಕ ಯುದ್ಧ ಆರಂಭವಾಯಿತು. ಪೂಜೋ ಸೈನ್ಯಕ್ಕೆ ಸೇರಿ ಯುರೋಪು ಖಂಡವೆಲ್ಲಾ ಸುತ್ತಾಡಿ ಮರಳಿದ. ಈ ಸಂದರ್ಭದಲ್ಲಿ ಆತನಿಗೆ ಜರ್ಮನ್ ಹುಡುಗಿಯೊಬ್ಬಳೊಡನೆ ಸ್ನೇಹ ಬೆಳೆಯಿತು. ಮುಂದೆ ಅವಳನ್ನೇ ಆತ ಮದುವೆಯಾದ. ಯುರೋಪ್ ತಿರುಗಾಟದಿಂದ ಆತನಿಗೆ ತನ್ನ ಮೊದಲನೆಯ ಕಾದಂಬರಿಗೆ ಬೇಕಾದ ಸಾಮಗ್ರಿ ಲಭಿಸಿತ್ತು. ೧೯೫೫ರಲ್ಲಿ ಆ ಕಾದಂಬರಿ 'ದಿ ಡಾರ್ಕ್ ಎರಿನಾ' ಎಂಬ ಹೆಸರಿನಲ್ಲಿ ಮುದ್ರಿತವಾಯಿತು. ಪೂಜೋನಿಗೆ ಆಗ ಇಪ್ಪತ್ತೆಂಟು–ಇಪ್ಪತ್ತೊಂಭತ್ತು ವಯಸ್ಸು. ವಿಮರ್ಶಕರು ಆತನ ಮೊದಲನೆಯ ಕಾದಂಬರಿಯನ್ನು ಪ್ರಶಂಸಿಸಿದ್ದರಾದರೂ ಸಾಕಷ್ಟು ಪ್ರತಿಫಲ ದೊರೆಯಲಿಲ್ಲ. ಈ ಕಾಸಿನ ಮಜ್ಜಿಗೆ ಕುಡಿದೇ ಆತ ಗುರಿಸಾಧನೆಯೆಂದು ನಿರ್ಧರಿಸಿದ. ಅನೇಕ ವರ್ಷಗಳ ಬಳಿಕ ಆತ 'ಫಾರ್ಚುನೇಟ್ ಪಿಲ್‌ಗ್ರಿಮ್' ಎಂಬ ಇನ್ನೊಂದು ಕಾದಂಬರಿಯನ್ನು ಬರೆದ. ೧೯೬೫ರಲ್ಲಿ ಅದು ಪ್ರಕಟವಾಯಿತು. ಇದರಲ್ಲಿ ಪೂಜೋನ ಬಾಲ್ಯದ ಕುರಿತು ಹಲವು ವಿಷಯಗಳಿವೆ. ಈ ಕಾದಂಬರಿಯೂ ವಿಮರ್ಶಕರಿಂದ ಪ್ರಶಂಸಿಸಲ್ಪಟ್ಟಿತು.

## ಋಣಂ ಕೃತ್ವಾ....

ಆದರೆ ಪ್ರಶಂಸೆ, ಪ್ರಶಸ್ತಿಗಳಿಂದ ಹೊಟ್ಟೆ ತುಂಬಬೇಕಲ್ಲ? ಪಾರಿಶ್ರಮಿಕವಾಗಿ ಈ ಕಾದಂಬರಿಯಿಂದ ಆತನಿಗೆ ದೊರಕಿದುದು ಮೊದಲನೆಯ ಕಾದಂಬರಿಗಿಂತಲೂ ಕಡಿಮೆಯೆ. ಪೂಜೋ ಸಾಲದ ಹೊರೆಯಿಂದ ಚಡಪಡಿಸುತ್ತಿದ್ದ. ಎರಡನೆಯ ಕಾದಂಬರಿಗೆ ದೊರೆತ ಒಳ್ಳೆಯ ವಿಮರ್ಶೆಯ



"ಅಯ್ಯೋ ಮುಠ್ಠಾಳ, ಅಹಿಂಸೆಯೇ ಗಾಂಧಿ. ಯವರ ಮುಖ್ಯ ತತ್ವವೆಂಬುದೂ ಗೊತ್ತಿಲ್ಲವಾ?"




"ಗಾಂಧಿಯ ಬಗ್ಗೆ ಪುಟಗಟ್ಟಲೆ ಭಾಷಣ ಬರೆದರೂ ಅವರು ಯಾವ ದೇಶದವರು ಅನ್ನೋದನ್ನೇ ಬರೆದಿಲ್ಲವಲ್ರೀ..."

ಪ್ರೋತ್ಸಾಹದಿಂದ ಮೂರನೆಯ ಕಾದಂಬರಿಯನ್ನು ಬರೆಯಲು ಆತ ನಿರ್ಧರಿಸಿದ. ಅದಕ್ಕೆ ಬೇಕಷ್ಟು ಸಾಮಗ್ರಿಯನ್ನು ಸಂಪಾದಿಸಿದ್ದೂ ಆಯಿತು: ಕಿಸೆಯಲ್ಲಿ ಚಿಕ್ಕಾಸೂ ಇರಲಿಲ್ಲ. ಆಗ ಅವನು ಪ್ರಕಾಶಕರಿಂದ ಮುಂಗಡ ಹಣ ಕೇಳುವ ಧಾರ್ಷ್ಟ್ಯ ತೋರಿಸಿದ. ಅವರು ಕೂಡಲೇ ಆತನಿಗೆ ಹೊರ ಹೋಗುವ ದಾರಿ ತೋರಿಸಿದರು. ಆಗಲೆ ಅವನಿಗೆ ನಲವತ್ತೈದು ಮೀರಿತ್ತು. ಸುಮಾರು ಇಪ್ಪತ್ತು ಸಾವಿರ ಡಾಲರಗಳಷ್ಟು ಸಾಲದ ಹೊರೆ ಆತನ ಮೇಲಿತ್ತು. ಅದರೊಡನೆ ದೊಡ್ಡ ಕುಟುಂಬವನ್ನು ಸಾಕುವ ಜವಾಬ್ದಾರಿ ಬೇರೆ. ಇಷ್ಟೊಂದು ದುಸ್ಥಿತಿಗೆ ಆತ ಇಳಿಯಲು ಆತನ 'ಋಣಂ ಕೃತ್ವಾ ಘೃತಂ ಪಿಬೇತ್' (ಸಾಲ ಮಾಡಿಯಾದರೂ ತುಪ್ಪ ಕುಡಿ) ಎಂಬ ಧೋರಣೆಯೇ ಆಗಿತ್ತು. ಆದರೆ ಅವನಿಗೆ ಒಲಿದ ಭಾಗ್ಯಲಕ್ಷ್ಮಿ ಒಲಿದು ಬಂದುದು ಜೀವನದ ಇದೇ ತಿರುವಿನಲ್ಲಿ.

## 'ಗಾಡ್ ಫಾದರ್'

ಒಂದು ದಿನ ಪೂಜೋನ ಪ್ರಕಾಶಕರಲ್ಲೊಬ್ಬ ಆತನ ಎರಡನೆಯ ಕಾದಂಬರಿಯ ಬಗ್ಗೆ ಮಾತನಾಡುತ್ತ ಅದರಲ್ಲಿ 'ಮಾಫಿಯಾ' ದ ಕುರಿತು ಸ್ವಲ್ಪ ಹೆಚ್ಚು ವಿಷಯವಿರುತ್ತಿದ್ದರೆ ಅದರ ಮಾರಾಟ ಬಹಳ ಉತ್ತಮ ರೀತಿಯಲ್ಲಿ ಆಗುತ್ತಿತ್ತು ಎಂದ. ಹಣಕಾಗಿ ಏನು ಮಾಡಲೂ ಸಿದ್ಧವಿದ್ದ ಮನಃಸ್ಥಿತಿಯಲ್ಲಿದ್ದ ಪೂಜೋ ಕೂಡಲೇ ಮಾಫಿಯಾ ಕುರಿತು ಕಾದಂಬರಿ ಬರೆಯಲು ನಿಶ್ಚಯಿಸಿದ. ಪ್ರಕಾಶಕರು ಆತ ಮುಂಗಡವಾಗಿ ನೂರು ಪುಟಗಳನ್ನು ಬರೆದು ಕೊಟ್ಟರೆ ಮುಂಗಡ ಹಣ ನೀಡಬಹುದೆಂದು ಹೇಳಿದಾಗ ಪೂಜೋ ಕೇವಲ ಹತ್ತು ಪುಟಗಳಷ್ಟರಲ್ಲೇ ಕಾದಂಬರಿಯ ಕಥಾಸಾರಾಂಶ ಬರೆದು ಪ್ರಕಾಶಕರ ಬಳಿ ತಲುಪಿಸಿದ. ಪ್ರಕಾಶಕರು ಒಮ್ಮೆ ಅದರ ಮೇಲೆ ದೃಷ್ಟಿ ಬೀರಿ ತಿರಸ್ಕರಿಸಿಬಿಟ್ಟರು.

ಆದರೆ ಪೂಜೋನಿಗೋ ಹಣದ ತಾಪತ್ರಯ ವಿಪರೀತವಾಗಿತ್ತು. ಮಾನಸಿಕ ಹಾಗೂ ಆರ್ಥಿಕ ಒತ್ತಡದಿಂದಾಗಿ ಆತನ ಬೆನ್ನೆಲುಬನ್ನೇ ಮುರಿದಂತಾಗಿತ್ತು. ಅಚ್ಚಾಗುತ್ತಲೇ ಸಟಸಟನೆ ಲಕ್ಷಗಟ್ಟಲೆ ಪ್ರತಿಗಳು ಮಾರಾಟವಾಗಿ ಹೋಗುವಂತಹ ಪುಸ್ತಕವನ್ನು ಬರೆಯುವುದಾಗಿ ನಿಶ್ಚಯಿಸಿದ ಪೂಜೋ ಆಶ್ಚರ್ಯಕರವಾದ ರೀತಿಯಲ್ಲಿ ತನ್ನ ಸಂಕಲ್ಪಶಕ್ತಿಯನ್ನು ತೋರಿದ. ಆತನು ಸಾಹಿತ್ಯ ಸಾಧನೆ, ಸಾಹಿತ್ಯ ಸೇವೆ ಮುಂತಾದ ಹುಚ್ಚು ವಿಚಾರಗಳನ್ನು ಬಿಟ್ಟು ಕಾದಂಬರಿಗೆ ಸಾಮಗ್ರಿ ಸಂಗ್ರಹಿಸುವುದರಲ್ಲಿ ಮಗ್ನನಾದ.

ಹತ್ತುಪುಟಗಳಷ್ಟು ಸಾಮಗ್ರಿ ಮೊದಲೇ ಸಿದ್ಧವಾಗಿತ್ತು. ಅದನ್ನು ಅವನು ಇನ್ನೊಬ್ಬ ಪ್ರಕಾಶಕನಿಗೆ ಇತ್ತಾಗ ಆ ಪ್ರಕಾಶನನ್ನು ಪೂಜೋ ಕರೆಕಳುಹಿಸಿದ. ಒಂದು ಗಂಟೆಯ ಮಾತುಕತೆಗಳ ಬಳಿಕ ವ್ಯಾಪಾರದ ನಿರ್ಣಯವಾಯಿತು. ಪ್ರಕಾಶಕನು ಪೂಜೋನಿಗೆ 'ಮಾಫಿಯಾ'ದ ಕುರಿತು ಕಾದಂಬರಿ ಬರೆಯಲು ಐದು ಸಾವಿರ ಡಾಲರ ಕೊಡಲು ಒಪ್ಪಿಕೊಂಡ.

## 'ಮಾಫಿಯಾ' ಎಂದರೇನು?

'ಮಾಫಿಯಾ'ದ ಅರ್ಥ ಆಶ್ರಯ ಸ್ಥಳ. ಆದರೆ ಕ್ರಮೇಣ ಒಂದು ಗುಪ್ತ ಸಂಘಟನೆಯ ಅರ್ಥ ಅದಕ್ಕೆ ಅಂಟಿಕೊಂಡಿತ್ತು. ಶತಮಾನಗಳಿಂದ ಇಟಲಿಯ ಜನತೆಯ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದ ಆಳುವವರ ವಿರುದ್ಧ ಈ ಸಂಸ್ಥೆ ಕತ್ತಿ ಮಸೆಯುತ್ತಿತ್ತು. ಎಲ್ಲರಿಗಿಂತ ಹೆಚ್ಚು ದಬ್ಬಾಳಿಕೆ, ದೌರ್ಜನ್ಯಗಳ ಕಹಿಯುಂಡವರು ಸಿಸಿಲಿಯವರು. ರಕ್ಷಣೆಗಾಗಿ ಈ ಜನ ಭೂಗತ ಕ್ರಾಂತಿಕಾರಿಗಳ ಶರಣು ಹೋಗುತ್ತಿದ್ದರು. ನಿಜವಾಗಿ ಇಂತಹ ಬಡಪಾಯಿಗಳಿಗೆ ಆಶ್ರಯ ಕೊಡುವ ಸಲುವಾಗಿಯೇ 'ಮಾಫಿಯಾ' ಆರಂಭವಾದದ್ದು. ಮುಂದೆ ಇದೇ ಸಂಘಟನೆ ಧನಿಕರ ಪಕ್ಷ ವಹಿಸಿದ್ದು ಮಾತ್ರವಲ್ಲದೆ ಕಾನೂನು ಹಾಗೂ ರಾಜಕೀಯಯಂತ್ರದ ಬಾಲಬುಡುಕ ಪೋಲೀಸ ವ್ಯವಸ್ಥೆಯ ಪಕ್ಷ ಹಿಡಿದು ಶೋಷಣೆಯನ್ನು ಆರಂಭಿಸಿತು.

ಪ್ರತಿಯೊಬ್ಬ ಚಿಕ್ಕ ದೊಡ್ಡ ವ್ಯಾಪಾರಿಗಳಿಂದ, ಉದ್ಯೋಗಿಗಳಿಂದ, ಅವರು ಹಣವನ್ನು ಮಾಡ ಹತ್ತಿದರು. 'ಡಾನ್' ಎಂದು ಹೆಸರಿಟ್ಟುಕೊಂಡು ಮೆರೆಯುವ ಮಾಫಿಯಾ ಸರ್ದಾರ (ದಾದಾ)ನಿಗೆ ಎಲ್ಲರೂ ಹೆದರಹತ್ತಿದರು. ಆದರೆ ಯಾರೇ ಆಗಲಿ,

ಧರ್ಮವಾಗಿರುತ್ತಿತ್ತು. ಮಾಫಿಯಾವನ್ನು ಇಟಲಿಯ ಸರ್ವಾಧಿಕಾರಿಯಾಗಿದ್ದ ಮುಸೋಲೋನಿ ಕೂಡ ತನಗೆ ಒಂದಲ್ಲೊಂದು ದಿನ ಅಪಾಯ ತರುವ ಸಂಘಟನೆ ಇದೆಂದು ಭಾವಿಸಿದ್ದ. ಹೀಗಾಗಿ ಬಡಜನರು ಬಡತನದಿಂದಲೂ ಮಾಫಿಯಾದವರ ಅತ್ಯಾಚಾರಗಳಿಂದಲೂ ತಮ್ಮನ್ನು ರಕ್ಷಿಸಿಕೊಳ್ಳಲು ಅಮೇರಿಕಕ್ಕೆ ವಲಸೆ ಹೊರಟರು. ಅಲ್ಲಿಯೂ ಅವರು ನ್ಯೂಯಾರ್ಕ್ ನಗರದಲ್ಲಿ ನೆಲೆಸುವುದು ಮಾತ್ರ ಸುರಕ್ಷಿತವೆಂದು ತಿಳಿದಿದ್ದರು.

## 'ಗಾಡ್ ಫಾದರ್' ಬಂದುದೆಲ್ಲಿಂದ?

ಇಂತಹ ಜನರಲ್ಲಿ ಹೆಚ್ಚಿನವರು ದಕ್ಷಿಣ ಸಿಸಿಲಿಯ ನಿವಾಸಿಗಳು. ೧೯೬೦ರ ಲೆಕ್ಕಾಚಾರದ ಪ್ರಕಾರ ವಿದೇಶಗಳಲ್ಲಿ ಜನಿಸಿದ ಅಮೇರಿಕನ್ ಇಟಾಲಿಯನ್ನರ ಸಂಖ್ಯೆ ಅಮೇರಿಕದಲ್ಲಿ ಹನ್ನೊಂದು ಲಕ್ಷದಷ್ಟಿತ್ತು. ಅಮೇರಿಕದಲ್ಲಿ ಜನಿಸಿದ ಮೊದಲನೆಯ ತಲೆಮಾರಿನ ಇಟಾಲಿಯನ್ ಮೂಲದ ಜನರ ಸಂಖ್ಯೆ ೩,೨೮,೦೦೦ ದಷ್ಟಿತ್ತು. ಇವರಲ್ಲಿ ಹೆಚ್ಚಿನವರು ದಕ್ಷಿಣ ಸಿಸಿಲಿಯಲ್ಲಿ ಶೋಷಣೆಗೆ ಒಳಗಾದವರೇ. ಪೂಜೋ ಕೂಡ ಇದೇ ವರ್ಗದ ಅಮೇರಿಕನ್ ನಾಗರಿಕ. ಇವರಲ್ಲಿ ಅಪರಾಧವೆಸಗುವ ಮನೋವೃತ್ತಿಯವರು ಹೆಚ್ಚಿಗಿರುವುದು ಸಹಜ. ಹೀಗೆ ಕೊಳಚೆ ಪ್ರದೇಶಗಳಲ್ಲಿ ನರಕಸದೃಶ ವಾತಾವರಣದಲ್ಲಿ ಇವರು ಜೀವಿಸುತ್ತಿದ್ದುದು ಉರಿವ ಬೆಂಕಿಗೆ ತುಪ್ಪ ಸುರುವಿದಂತಾಗಿತ್ತು. ಅಮೇರಿಕದ ಸುಸಂಘಟಿತ ಅಪರಾಧಗಳಲ್ಲಿ ಇಟಾಲಿಯನ್ ಮೂಲದ 'ಮಾಫಿಯಾ' ಪ್ರಭಾವಿತರ ಕೈವಾಡ ಸಾಕಷ್ಟಿದೆಯೆಂದು ಪೂಜೋ ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾನೆ.

ಮಾಫಿಯಾದ ಮೇಲೆ ಕತೆ ಹೆಣೆದರೆ ಕಿಶೋರ ಪ್ರಾಯದ ಓದುಗರನ್ನು ಚುಂಬಕದಂತೆ ತನ್ನೆಡೆಗೆ ಆಕರ್ಷಿಸಬಹುದು. ಇಲ್ಲಿ ಹಿಂಸೆ, ಅತ್ಯಾಚಾರ, ಬಲಾತ್ಕಾರ, ಗೂಂಡಾಗಿರಿಗಳ ಮಸಾಲೆಯಿಂದ ರುಚಿಕರ ಅಡಿಗೆ ತಯಾರಿಸಬಹುದು ಎಂಬುದನ್ನು ಗ್ರಹಿಸಿಯೆ ಪ್ರಕಾಶಕರು ಪೂಜೆಗೆ ಮುಂಗಡ ಕೊಡಲು ತಯಾರಾಗಿದ್ದರು.

## ಸಾಹಿತ್ಯಕ್ಕೆ ಬೆಂಕಿ

ಪೂಜೋ ಮುಂಗಡದ ಮೊದಲನೆಯ ಕಂತನ್ನು ಜೇಬಿಗಿಳಿಸಿ ಸುಮ್ಮನಿದ್ದುಬಿಟ್ಟ. ನಿಜ ಹೇಳುವದಾದರೆ ಅವನಿಗೆ 'ಗಾಡ್‌ಫಾದರ'ನಂತಹ ಕಾದಂಬರಿ ಬರೆಯಲು ಮನಸ್ಸೇ ಇರಲಿಲ್ಲ. 'ಮಾಫಿಯಾ'ದಂತಹ ಅಸಾಹಿತ್ಯಕ ವಿಷಯದ ಮೇಲೆ ಕಾದಂಬರಿ ಬರೆದು ಆತ ತನ್ನ ಮನಃಸಾಕ್ಷಿಯ ಕೊಲೆಮಾಡಲು ಸಿದ್ಧನಿರಲಿಲ್ಲ. ಆದರೆ ಮುಂಗಡ ಹಣದ ಮುಂದಿನ ಕಂತುಗಳು ಈ ಕಾದಂಬರಿಯನ್ನು ಅವಲಂಬಿಸಿದ್ದವು. ಆತನಿಗೆ ಹಣದ ಅವಶ್ಯಕತೆ ಇತ್ತು. ಹೀಗಿಲ್ಲದಿರುತ್ತಿದ್ದರೆ ಆತ ಕಾದಂಬರಿಯನ್ನೇ ಬರೆಯುತ್ತಿದ್ದಿಲ್ಲ. ಆಗಲೇ ಪೂಜೋ ಬೇರೊಂದು ಕಾದಂಬರಿ ಬರೆಯಲು ಯೋಜನೆ ಹಾಕಿಕೊಂಡಿದ್ದ. ಆದರೆ ಮುಂದೆ 'ಗಾಡ್ ಫಾದರ್'ನಿಂದ ಆತನ ಭಾಗ್ಯೋದಯವಾದ ಮೇಲೆ ಸಾಹಿತ್ಯಸೇವೆಯ ಹುಚ್ಚು ಆತನ ತಲೆ

ಯಿಂದ ಇಳಿದುಬಿಟ್ಟಿತ್ತು. ಹೀಗಾಗಿ ಸಾಹಿತ್ಯಕ ಮೌಲ್ಯದ ಆ ಕಾದಂಬರಿಯ ವಿಷಯ ಇದ್ದಲ್ಲೇ ಉಳಿಯಿತು. 'ಬೇರೆ ವಸ್ತುಗಳಂತೆ ಕಾದಂಬರಿಯ ಕಥಾವಸ್ತು ಕೂಡ ಸಮಯ ಹೋದಂತೆ ಕೊಳೆತು ನಾಶವಾಗಿ ಬಿಡುತ್ತದೆ' ಎಂದು ಎಂದು ಆತ ಬರೆದಿದ್ದಾನೆ.

'ಗಾಡ್ ಫಾದರ್' ಬರೆಯಲು ಪೂಜೋನಿಗೆ ಮೂರು ವರ್ಷಗಳು ತಗಲಿದವು. ಈ ಅವಧಿಯಲ್ಲಿ ಆತ ದಿನನಿತ್ಯದ ಹೊಟ್ಟೆಪಾಡಿಗಾಗಿ ಬೇರೆ ಉದ್ಯೋಗಗಳನ್ನು ಕೈಕೊಂಡಿದ್ದ. ಪ್ರತಿ ತಿಂಗಳೂ ಮೂರು ಮೂರು ಸಾಹಸಯ ಕತೆಗಳನ್ನು ಬರೆದ. ಬಾಲಕರಿಗಾಗಿ ಒಂದು ಗ್ರಂಥ ರಚಿಸಿದ, ರಾಶಿಗಟ್ಟಲೆ ವಿಮರ್ಶೆಗಳನ್ನು ಬರೆದ. ಪತ್ರಿಕೆಗಳಿಗೆ ರಬಿಂ ವ್ಯಾಪಾರದ ಬೆಲೆಯಲ್ಲಿ ಗೌರವಧನ ನಿರ್ಣಯಿಸಿ ಲೇಖನ ಸಪೆಸಿದ. ಪೂಜೋ ಹೇಳುವಂತೆ ಈ ಮೂರು ವರ್ಷಗಳಲ್ಲಿ ಆತ ಬರೆದಷ್ಟು ಆತನಕದ ಜೀವಮಾನದಲ್ಲೇ ಬರೆದಿರಲಿಲ್ಲ. ಕೊನೆಗೆ ೧೯೬೮ರ ಜುಲೈಯಲ್ಲಿ ಆತ ಈ ಕಾದಂಬರಿಯನ್ನು ಪೂರ್ಣಗೊಳಿಸಿ ಹಸ್ತಲಿಪಿಯ ಪ್ರತಿಯನ್ನು ಪ್ರಕಾಶಕರ ಕೈಯಲ್ಲಿತ್ತು ಮುಂಗಡ ಹಣದಲ್ಲಿ ಉಳಿದಿದ್ದ ಹನ್ನೆರಡುನೂರು ಡಾಲರುಗಳನ್ನು ಜೇಬಿಗಿಳಿಸಿ ಹೆಂಡತಿ ಮಕ್ಕಳೊಡನೆ ಯುರೋಪ್ ಯಾತ್ರೆಗೆ ಹೊರಟುಬಿಟ್ಟ. ಹಿಂದಿರುಗಿದ ಮೇಲೆ ಹಸ್ತಪ್ರತಿಯನ್ನು ಪುನಃ ತಿದ್ದುವೆನೆಂದೂ ಮಧ್ಯೆ ಅದನ್ನು ಬೇರೆ ಯಾರಿಗೂ ತೋರಿಸಬಾರದೆಂದೂ ಆತ ಪ್ರಕಾಶಕರಿಗೆ ತಾಕೀದುಮಾಡಿದ್ದ.

ಆದರೆ ದೈವದ್ದು ಎಣಿಸಿದ್ದು ಬೇರೆಯೆ. ೧೨೦೦ ಡಾಲರನ್ನು ಮುಗಿಸಿ ಮತ್ತೂ ೮೦೦ ಡಾಲರುಗಳು ಸಾಲಮಾಡಿಕೊಂಡು ಪೂಜೋ ಹಿಂದಿರುಗಿದಾಗ ಆತನನ್ನು ಸ್ತಂಭೀಭೂತನನ್ನಾಗಿಸುವ ಸುದ್ದಿ ಕಾದಿತ್ತು. ಒಬ್ಬ ಪ್ರಕಾಶಕನು 'ಗಾಡ್ ಫಾದರ್'ನ ಅಗ್ಗದ ಪ್ರತಿಗಳನ್ನು ಮುದ್ರಿಸುವ ಅಧಿಕಾರವನ್ನು ಪಡೆಯಲು ೪,೧೦,೦೦೦ ಡಾಲರುಗಳ ವಚನವಿತ್ತು ಹಕ್ಕನ್ನು ತನಗಾಗಿ ಕಾದಿರಿಸಿದ್ದೂ ಪೂಜೋನಿಗೆ ನಂಬಿಕೆ ಬರಲಿಲ್ಲ. ಯಾವಾಗಲೂ ತಿರಸ್ಕರಿಸುತ್ತಾ, ಹಣ ಕೊಡಲು ಹಿಂಜರಿಯುತ್ತಿದ್ದ ಪ್ರಕಾಶಕರು ಇದೇ ಲೇಖಕನಿಗೆ 'ದ ಗಾಡ್ ಫಾದರ್' ನಂತಹ ಪುಸ್ತಕಕ್ಕಾಗಿ ಅಷ್ಟು ಹಣ ಕೊಡುವುದು ಸಾಧ್ಯವೆ? ಆದರೆ ಆತನಿಗೆ ಇದು ವಿನೋದವಲ್ಲವೆಂಬುದು ತಿಳಿಯುತ್ತಲೇ ತನ್ನ ತಾಯಿಗೆ ಫೋನು ಮಾಡಿ ಈ ಸುದ್ದಿಯನ್ನು ತಿಳಿಸಿದಾಗ ಆಕೆ ಮಗನಿಗೆ ಹುಚ್ಚೇ ಹಿಡಿದಿದೆಯೆಂದು ಭಾವಿಸಿದಳು.

ಓಡೋಡುತ್ತಾ ಪೂಜೋ ಮನೆ ತಲುಪಿದ. ಹೆಂಡತಿ ಟಿ. ವಿ. ಯ ಹತ್ತಿರ ಕುಳಿತು ತೂಕಡಿಸುತ್ತಿದ್ದಳು. ಬರುತ್ತಲೇ ಪೂಜೋ ಆಕೆಯ ಕೆನ್ನೆಗೊಂದು ಚುಂಬನವಿತ್ತು, 'ಪ್ರಿಯೆ, ಇನ್ನು ಹಣಕಾಸಿನ ಚಿಂತೆ ಬೇಡ. ನನ್ನ ಪುಸ್ತಕ ೪,೧೦,೦೦೦ ಡಾಲರುಗಳಿಗೆ ಮಾರಿಹೋಯಿತು ಎಂದ. ಹೆಂಡತಿಯ ಕಣ್ಣುಗಳಲ್ಲಿ ವಿಸ್ಮಯವಾಗಲಿ ಅವಿಶ್ವಾಸವಾಗಲಿ ಕಾಣಿಸಲಿಲ್ಲ. ಅವಳ ಗಂಡ ಇದಕ್ಕಿಂತ ಮೊದಲೂ ಇಂತಹ ಮೋಸದ ಮಾತುಗಳನ್ನಾಡಿದ್ದ. ಅವಳು ಮೌನವಾಗಿಯೇ ಎದ್ದು, ಒಳಹೋಗಿ, ಮಲಗಿ ನಿದ್ದೆ ಹೋದಳು. ✿

---

ಕ್ಲಾಸಿನಲ್ಲಿ ಇತಿಹಾಸದ ಪಾಠ ನಡೆಯುತ್ತಿತ್ತು. ಮೇಸ್ಟ್ರು ಸಿಂಧೂನದಿ ತೀರದ ನಾಗರಿಕತೆಯ ಬಗ್ಗೆ ಪಾಠ ಹೇಳುತ್ತಾ, ಅಗಿನ "ಕಾಲ್ದಾಗೆ ಸತ್ತ ಮನುಷ್ಯರ ಜೊತೇಲೇ ಆಹಾರ, ದಿನಬಳಕೆ ವಸ್ತುಗಳನ್ನ ಇಡುತ್ತಿದ್ದರಲ್ಲಾ, ಆ ಬಗ್ಗೆ ನಿಮಗೇನನಿಸ್ತದೆ?" ಎಂದು ಕೇಳಿದರು. ಕ್ಷಣಕಾಲ ಕ್ಲಾಸಿನಲ್ಲೆಲ್ಲಾ ಮೌನ. ನಂತರ ಒಬ್ಬಾತ ಎದ್ದುನಿಂತು, "ಆಗಿನ ಕಾಲದ ಜನ ತುಂಬಾ ಬುದ್ಧಿವಂತರಾಗಿದ್ದರು ಸಾರ್, ಅದಕ್ಕೆಂದೇ ಈಗಿನ ಅಭಾವಗಳನ್ನೆಲ್ಲಾ ಆಗಲೆ ಊಹಿಸಿ, ಒಂದು ವೇಳೆ ಆ ಮನುಷ್ಯ ಬದುಕಿ ಬಂದ್ರೆ ನಾಲ್ಕು ದಿನಾನಾರ ಹಾಯಾಗಿ ಇರಲಿ ಅಂತ ಹಾಗೆ ಮಾಡಿರಬಹುದು" ಎಂದು ಅಂದಾಗ ಮೇಸ್ಟ್ರು ಸುಸ್ತೋ ಸುಸ್ತು.

— 'ಮಾಲಿ'

# ದುರ್ಬಲರ ದೊಡ್ಡಣ್ಣ: ನಗೀನದಾಸ ಶಾ

**ಎಚ್. ಎಸ್. ಆನಂದ**

ರಜಿಯಾ ಬೀಬಿ ೨೫ರ ಗೃಹಿಣಿ. ಆರು ಮಕ್ಕಳ ತಾಯಿ. ಬಡತನದ ಜೊತೆಗೆ ಅನಾರೋಗ್ಯವೂ ಕಿತ್ತುತಿನ್ನುತ್ತಿತ್ತು. ಸಾವು ಯಾವಾಗ ಬರಲಿ ಎಂದು ಕಾಯುತ್ತ ಕುಳಿತಿತ್ತು. ಮುಖ್ಯವಾದೊಂದು ಶಸ್ತ್ರಕ್ರಿಯೆ ಅವಶ್ಯವಾಗಿ ಆಗಲೇಬೇಕಿತ್ತು. ಅಂದರೆ ಮಾತ್ರ ಬದುಕುಳಿದಾಳೆಂಬ ಭರವಸೆ ಡಾಕ್ಟರರಿಗೆ. ಆದರೆ ಆಕೆಯ ಪತಿ ಕೈ ಚೆಲ್ಲಿ ಕುಳಿತ. ಹಣ್ಣಿನ ವ್ಯಾಪಾರಕ್ಕೆ ಕೈಗಾಡಿ ದೂಡುತ್ತ ದಿನವಿಡಿ ದುಡಿಯುವ ಆತನಿಗೆ ಈಗ ವಾರದಿಂದ ವ್ಯಾಪಾರವೂ ಇರಲಿಲ್ಲ. ಹೊಟ್ಟೆ ಬಟ್ಟೆಗೆ ಅಷ್ಟಕ್ಕಷ್ಟೇ ಎನ್ನುವಷ್ಟು ಆದಾಯ ಆತನದು. "ನನ್ನ ಬಳಿ ಹಣವೇ ಇಲ್ಲ. ನಿಮಗೆ ಬೇಕೆನಿಸಿದರೆ ಶಸ್ತ್ರಕ್ರಿಯೆ ಮಾಡಿ; ಇಲ್ಲದಿದ್ದರೆ ಬಿಟ್ಟು ಬಿಡಿ," ಎಂದ ಕಲ್ಲೆದೆ ಮಾಡಿಕೊಂಡು.

ಹಾಸ್ಪಿಟಲ್ಲಿನ ಜನರಲ್ ವಾರ್ಡಿನಲ್ಲಿ ರಜಿಯಾ ಬೀಬಿ ಗುಣಮುಖವಾದಳು. ದಿನವೊಂದಕ್ಕೆ ಅಲ್ಲಿಯ ಶೂಶ್ರುಷೆ ಶುಲ್ಕ ನೂರು ರೂಪಾಯಿಗಳಷ್ಟಾದರೂ. ಆಕೆ ಕೆಲವೇ ದಿನಗಳಲ್ಲಿ ಮೊದಲಿನಂತಾದಳು.

ಜುನಾಗಡದವನೊಬ್ಬ ತನ್ನ ಹಳೆಯ ಕಾಯಿಲೆಯ ಶುಶ್ರೂಷೆಗಾಗಿ ಅಹಮದಾಬಾದಿಗೆ ಬಂದ. ಬರುವಾಗ ಆತನ ಬಳಿ ೪೦೦ ರೂಪಾಯಿಗಳಿದ್ದುವು. ಖಾಸಗಿ ಡಾಕ್ಟರರ ಬಳಿ ಹೋದ. ಮೊದಲ ಭೇಟಿಗೇ ೭೦ ರೂಪಾಯಿಗಳು ಕೈ ಬಿಟ್ಟವು. ಹೀಗಾಗಿ ಖಾಸಗಿ ದವಾಖಾನೆಗಳ ದಾರಿಯನ್ನೇ ಬಿಟ್ಟುಬಿಟ್ಟ. ವಿ. ಎಸ್. ಹಾಸ್ಪಿಟಲ್ಲಿಗೆ ಬಂದು ಸೇರಿದ. ಶುಶ್ರೂಷೆ ಪ್ರಾರಂಭವಾಯಿತು. ಬಹಳ ದಿನಗಳ ವರೆಗೆ ಅಲ್ಲಿರಬೇಕೆಂದು ಡಾಕ್ಟರರು ಅಭಿಪ್ರಾಯಪಟ್ಟರು. ಹಣವಂತೂ ದಿನದಿಂದ ದಿನಕ್ಕೆ ಕರಗತೊಡಗಿತು. ಆತ ಅರ್ಧಕ್ಕೆ ಶುಶ್ರೂಷೆ ನಿಲ್ಲಿಸಿ ಜುನಾಗಡಕ್ಕೆ ಹಿಂತಿರುಗಲು ಯೋಚಿಸಿದ. ಆದರೆ ಹಾಗಾಗಲಿಲ್ಲ. ವಿ. ಎಸ್. ಹಾಸ್ಪಿಟಲ್ಲಿನಲ್ಲಿಯೇ ಪೂರ್ಣ ಚಿಕಿತ್ಸೆ ಪಡೆದು ಗುಣಹೊಂದಿದ.

ರಾಜಸ್ಥಾನದ ರಣವೀರ ಹತ್ತು ವರ್ಷದ ಬಾಲಕ. ತುಂಬ ಜಾಣ. ಆದರೆ ಬೆನ್ನು ನೋವಿನ ಬಾಧೆ ಎಡೆಬಿಡದೆ ಇತ್ತು. ಆತನ ತಾಯಿ ಸ್ವತಃ ಕ್ಷಯರೋಗಿ. ಮಗನಿಗಾಗಿ ಸಾವಿರಾರು ರೂಪಾಯಿ ಖರ್ಚು ಮಾಡಿದರೂ ಪ್ರಯೋಜನವಾಗಲಿಲ್ಲ. ಆದರೆ ವಿ. ಎಸ್. ಹಾಸ್ಪಿಟಲ್ ಅವರ ಕೈಬಿಡಲಿಲ್ಲ. ಮಗುವಿನ ಬೆನ್ನುನೋವಿನ ಚಿಕಿತ್ಸೆಯ ಜೊತೆಗೆ ತಾಯಿಯನ್ನೂ ಕ್ಷಯರೋಗ ವಿಭಾಗಕ್ಕೆ ಸೇರಿಸಿಕೊಂಡರು. ತಮ್ಮ ಶುಶ್ರೂಷೆಯ ಖರ್ಚು ವೆಚ್ಚಗಳ ಬಗ್ಗೆ ಅವರು ಚಿಂತಿಸಬೇಕಾದುದಿರಲಿಲ್ಲ.

ರಜಿಯಾ ಬೀಬಿ, ರಣವೀರ ಮಹೇಶ ಬಚುಭಾಯಿ, ಭರತ ಸೋನಿ, ರುಖಿಬೆನ್, ಆರ್. ಜೇಮ್ಸ್ ಹೀಗೇ ಬೆಳೆಯುತ್ತದೆ ಪಟ್ಟಿ. ಅವರೆಲ್ಲ ದರ್ದಿಯೋನು ರಾಹತ್ ಫಂಡಿಗೆ ಚಿರಋಣಿಗಳು. ನೋವುಳ್ಳವರನ್ನು ನಗುವಂತೆ ಮಾಡುವ ಈ ನಿಧಿ ಒಂದು ಸಂಜೀವಿನಿ; ಬಡವರ ಪಾಲಿಗೊಂದು ವರದಾನ; ನಿರ್ಗತಿಕರಿಗೊಂದು ಆಶಾಕಿರಣ.

ಕಳೆದ ೧೫ ವರ್ಷಗಳಲ್ಲಿ ಸಾವಿರಾರು ಜನ ನಿರ್ಗತಿಕ ರೋಗಪೀಡಿತರು (ಹೆಚ್ಚಾಗಿ ಗುಜರಾತಿನವರು) ಈ ನಿಧಿಯ ಪ್ರಯೋಜನ ಪಡೆದಿದ್ದಾರೆ. ಇಂಥವರ ಪಟ್ಟಿ ಇಲ್ಲ. ನಿಧಿಯ ವಿಶ್ವಸ್ಥರು ಆ ಬಗ್ಗೆ ಅಷ್ಟು ಗಮನ ಹರಿಸುವುದಿಲ್ಲ. ಹಣವಿಲ್ಲದೆ ರೋಗ ಉಲ್ಬಣಗೊಂಡು ಸಾಯುವವರನ್ನು ಬದುಕಿಸುವುದೊಂದೇ ಅವರ ಗುರಿ.

ಈ ನಿಧಿ ಪ್ರಾರಂಭವಾದದ್ದು ಹೀಗೆ: ೧೯೬೪ರಲ್ಲಿ ಒಂದು ದಿನ. ಒಂದು ಆಸ್ಪತ್ರೆಯಲ್ಲಿ ಜೀವಚ್ಛವದಂತೆ ಕಾಣುವ ಒಬ್ಬ ಹೆಂಗಸು ಕುಳಿತುಕೊಂಡಿದ್ದಾಳೆ. ಆಕೆಗೆ ಇಬ್ಬಗೆಯ ನೋವು, ಮಗನಿಗೆ ಒಂದು ದೊಡ್ಡ ಶಸ್ತ್ರಕ್ರಿಯೆ ಆಗಬೇಕು. ಅದಕ್ಕೆ ದುಡ್ಡು ಬೇಕು. ಆಕೆಯ ಬಳಿ ಇರುವುದು ಕೇವಲ ಮೂರುವರೆ ರೂಪಾಯಿಗಳು. ಡಾಕ್ಟರರು ಇಂತಿಷ್ಟು ಹಣ ತುಂಬಿದರೆ ಮಾತ್ರ ಮುಂದಿನ ವಿಚಾರ ಎಂದಿದ್ದರು. ಹೀಗಾಗಿ ಚಿಂತೆಯಿಂದ ಮೊದಲೇ ಸೊರಗಿದ್ದ ಆಕೆ ಗಾಬರಿಯಾಗಿ ಬಾಗಿಲಬಳಿ ಕುಳಿತಿದ್ದಳು. ಆಗ ಅಲ್ಲಿಗೆ ಬಂದ ನಗೀನದಾಸ ಶಹಾ ಆಕೆಯನ್ನು ನೋಡುತ್ತ ನಿಂತುಬಿಟ್ಟರು. ಆ ಆಸ್ಪತ್ರೆಯಲ್ಲಿ ತಮ್ಮ ಮಗನನ್ನು ಶುಶ್ರೂಷೆಗಾಗಿ ಸೇರಿಸಿದ್ದರು. "ಏನಮ್ಮಾ, ಏನು ತೊಂದರೆ?" ಎಂದು ಕೇಳಿದ ಅವರೆದುರು ತನ್ನೆಲ್ಲ ನೋವು ಅಸಹಾಯಕತೆಯನ್ನು ತೋಡಿಕೊಂಡಳು. "ನಾನು ದೇವರ ಮೇಲೆ ಭಾರಹಾಕಿ ನನ್ನ ಮಗನನ್ನು ಮನೆಗೆ ಕರೆದೊಯ್ದು ಬಿಡಬೇಕೆಂದಿದ್ದೇನೆ," ಎಂದಳು ನಿಟ್ಟುಸಿರಿಟ್ಟು.

ನಗೀನದಾಸರು ಆಕೆಯನ್ನು ಸಂತೈಸಿದರು. ಜೇಬಿನಲ್ಲಿ ಕೈ ಹಾಕಿ ೧೦ ರೂಪಾಯಿಗಳನ್ನು ತೆಗೆದುಕೊಟ್ಟರು. ಅದರಿಂದ ಆಕೆಗೆ ಏನೋ ಒಂದು ಧೈರ್ಯ ಬಂತು. ನಗೀನದಾಸರ ಬಳಿ ಬಂದಿದ್ದ ಮಿತ್ರ ಕೂಡ ಹತ್ತು ರೂಪಾಯಿಗಳನ್ನು ಆಕೆಗೆ ಕೊಟ್ಟರು. ಅಷ್ಟೇ ಅಲ್ಲ ಇನ್ನೂ ಒಂದಿಷ್ಟು ಹಣ ಸೇರಿಸಿ ಕೊಡುತ್ತೇವೆ ಎಂಬ ಆಶ್ವಾಸನೆಯನ್ನೂ ನೀಡಿದರು.

ನಂತರ ನಗೀನದಾಸ ತಮ್ಮ ಮಿತ್ರರ ಬಳಿ ಹೋದರು. ಸಾಲವಾಗಿ ಒಂದಿಷ್ಟು ಹಣ ಕೇಳಿದಾಗ ಆ ಮಿತ್ರರೆಲ್ಲ ತಮ್ಮ ಪಾಲಿನ ದೇಣಿಗೆ ಎಂದು ನೂರಾರು ರೂಪಾಯಿ ಕೊಟ್ಟರು. ಸಂಜೆಯೊಳಗಾಗಿ ಈ ಸಹೃದಯಿ ಆಕೆಯ ಮಗನ ಶಸ್ತ್ರಕ್ರಿಯೆ, ಶುಶ್ರೂಷೆಗಾಗುವಷ್ಟು ಹಣ ಸೇರಿಸಿದ್ದರು.

ಈಗ ನಗೀನಭಾಯಿಗೊಂದು ವಿಚಾರ ಹೊಳೆಯಿತು ಬಡ ಹಾಗೂ ನಿರ್ಗತಿಕ ರೋಗಿಗಳಿಗಾಗಿ ಏಕೆ ವಂತಿಗೆ ಕೂಡಿಸಬಾರದು ಎಂದು. ಪರಿಚಯದವರೆದುರು ತಮ್ಮ ಉದ್ದೇಶ ಹೇಳಿಕೊಂಡರು. ಕೆಲವರಿಂದ ಅಪಹಾಸ್ಯ, ಕೆಲವರಿಂದ ಉಪದೇಶಗಳೇ ಉತ್ತರವಾಗಿ ಬಂದವು. ಆದರೆ ಇವರು ಪಟ್ಟು ಬಿಡಲಿಲ್ಲ. ವಂತಿಗೆ ಕೂಡಿಸುವುದಕ್ಕಾಗಿ ಸಾಕಷ್ಟು ಅಲೆದರು. ಪ್ರಯತ್ನ ಫಲಿಸಿತು. ಮಿತ್ರರಿಂದ ಕೇವಲ ತಲಾ ೧೦ ರೂ.ಗಳಂತೆ ಪಡೆದರು. ಒಬ್ಬ ವ್ಯಾಪಾರಿ ಮತ್ತೆ ಮತ್ತೆ ಈ ವಂತಿಗೆಯ ಉದ್ದೇಶ ಕೇಳಿದ. ನಾಲ್ಕು ಸಲ ಹೇಳಿದ ಮೇಲೆ ಇವನ ಬಳಿ ಕುಳಿತು ಪ್ರಯೋಜನವಿಲ್ಲವೆಂದರಿತ ನಗೀನಭಾಯಿ ಎದ್ದು ಹೊರಟಾಗ ಆತ, "ಭಾಯಿ ಬೇಜಾರೇಕೆ ತಗೋ," ಎಂದು ನೂರು ರೂಪಾಯಿಗಳ ಎರಡು ನೋಟುಗಳನ್ನಿತ್ತು, "ಬೇಕಾದಾಗ ಬಾ," ಎಂದ. ಇದಕ್ಕೆಲ್ಲ ರಸೀದಿ ಕೊಡುತ್ತಿರಲಿಲ್ಲ ನಗೀನದಾಸ. ಒಂದು ಹಾಳೆಯ ಮೇಲೆ ದೇಣಿಗೆ ಕೊಡುವಾತ ತನ್ನ ಹೆಸರು ಬರೆದು ಸಹಿ ಹಾಕಿ ರಕಮನ್ನು ನಮೂದಿಸಬೇಕಿತ್ತು. ಹೀಗೆ ವರ್ಷದ ಕೊನೆಗೆ ನಗೀನದಾಸ ಮತ್ತು ನಿರಂಜನ ಬೇನ್ ಇಬ್ಬರೂ ಸೇರಿ ಒಟ್ಟು ೩೫೦೦ ರೂಪಾಯಿಗಳನ್ನು ಕೂಡಿಸಿದ್ದರು. ಆ ಪೈಕಿ ೨೬೦೦ ರೂಪಾಯಿಗಳನ್ನು ನಿರ್ಗತಿಕರಿಗಾಗಲೇ ಹಂಚಿಬಿಟ್ಟಿದ್ದರು.

ನಾಲ್ಕು ಬಾರಿ ವ್ಯಾಪಾರದಲ್ಲಿ ಕೈಸುಟ್ಟುಕೊಂಡಿದ್ದ ನಗೀನದಾಸನಿಗೆ ಜನಬಲವಿತ್ತು. ಹೀಗಾಗಿ ನಿರ್ಗತಿಕರ ಸೇವೆ ಮಾಡಲು ಒಂದು ನಿಧಿಯನ್ನು ಸ್ಥಾಪಿಸುವ ಅವರ ವಿಚಾರ ಕಾರ್ಯರೂಪಕ್ಕೆ ಬಂತು.

ಮೊದಮೊದಲು ರೋಗಿಗಳಿಗಾಗಿ ತಮ್ಮ ಮನೆಯಿಂದಲೇ ಗಂಜಿ, ಹೆಸರು ಬೇಳೆ ಪಾಯಸ ಮುಂತಾದವುಗಳನ್ನು ಸರಬರಾಜು ಮಾಡತೊಡಗಿದರು ನಗೀನಭಾಯಿ. ಕೂಡಿದ ಹಣದಿಂದ ರೋಗಿಗೆ ಅಷ್ಟಿಷ್ಟು ಆರ್ಥಿಕ ಸಹಾಯ ಅಲ್ಲದೆ ಔಷಧಿ–ಚಿಕಿತ್ಸೆಗಳ ವೆಚ್ಚ ನೋಡಿಕೊಳ್ಳತೊಡಗಿ

ದರು. ನಿಧಿಗೆ ಹೆಚ್ಚು ಹಣ ಸೇರಿದಂತೆಲ್ಲ ಅದರ ಲಾಭ ಪಡೆದುಕೊಳ್ಳುವ ರೋಗಿಗಳ ಸಂಖ್ಯೆ ಬೆಳೆಯುತೊಡಗಿತು. ೧೯೬೫ರಲ್ಲಿ ೩,೭೦೦ ರಿಂದ ಪ್ರಾರಂಭವಾಗಿ ಎರಡು ವರ್ಷಗಳಲ್ಲೇ ಹತ್ತು ಪಟ್ಟು ಹೆಚ್ಚಿತು.

ಈ ಹಣದ ಖರ್ಚಿನ ವಿವರ ಮಾತ್ರ ಅಧಿಕೃತ ರಸೀದಿಗಳೊಂದಿಗೆ ಸಿಕ್ಕುತ್ತದೆಯೇ ವಿನಾ ಅದರಿಂದ ಪ್ರಯೋಜನ ಪಡೆದವರ ಹೆಸರುಗಳು ಸಿಕ್ಕುವುದಿಲ್ಲ. ಇದರ ಕಾರಣವಿಷ್ಟೆ, ಅವ್ಯವಸ್ಥೆಯಿದ್ದಾಗ ಅವಶ್ಯಕತೆಯಿದ್ದವರಿಗೆ ಅವಶ್ಯವಿದ್ದಷ್ಟು ಹಣವನ್ನು ಔಷಧಿ ಚಿಕಿತ್ಸೆಗಳಿಗಾಗಿ ಖರ್ಚು ಮಾಡಿ ಬಿಡುವುದು, ಅದೂ ತೀವ್ರವಾಗಿ. ಒಮ್ಮೆ ರೋಗಿಯ ಜವಾಬ್ದಾರಿ ವಹಿಸಿಕೊಂಡರೆ ಆತ ಆರ್ಥಿಕವಾಗಿ ಅಸಮರ್ಥನೆಂಬುದನ್ನು ಕೂಲಂಕುಷವಾಗಿ ಪರಿಶೀಲಿಸಿ ದೃಢಪಡಿಸಿಕೊಂಡು ಚಿಕಿತ್ಸೆಗೆ, ಶುಶ್ರೂಷೆಗೆ ಅಲ್ಲದೆ ಇತರ ವೆಚ್ಚಗಳಿಗೂ ಬೇಕಾಗುವ ಹಣವನ್ನು ನಿಧಿಯ ವಿಶ್ವಸ್ಥರು ನೀಡುತ್ತಾರೆ. ಖರ್ಚಿಗೆ



“ಯಾವನೋ ಅವ್ನು ಬೇಕೂಫ! ‘ಪತ್ರಕರ್ತ’ ವನ್ನ ‘ಪುತ್ರ’ಕರ್ತ ಅಂತ ಓದಿ ಬರ್ದಿದ್ದು.”

ನೀಡುವ ಹಣಕ್ಕೆ ಮಿತಿಯಿಟ್ಟುಕೊಂಡಿಲ್ಲ. ಬರಿ ಔಷಧಿ ಶಸ್ತ್ರಕ್ರಿಯೆ ಇಂಥವುಗಳ ವೆಚ್ಚವಷ್ಟೇ ಅಲ್ಲ, ಒಮ್ಮೊಮ್ಮೆ ಶ್ರವಣ ಯಂತ್ರ, ಕೃತಕ ಕಾಲು, ಮಕ್ಕಳಿಗೆ ಟ್ರೈಸಿಕಲ್ಲುಗಳು, ನಿತ್ಯದ ಹಾಲು ಹಣ್ಣುಗಳಿಗೆ ಕೂಡ ನಿಧಿ ಹಣ ನೀಡುತ್ತದೆ.

ಅಸಮರ್ಥ ರೋಗಿಯನ್ನು ನಿಧಿ ಹೇಗೆ ಗುರುತಿಸುತ್ತದೆ? ಮೊದಲು ಈ ಕೆಲಸ ಸ್ವಲ್ಪ ಕಷ್ಟವೆನಿಸುತ್ತಿದ್ದರೂ ಈಗ ಅಷ್ಟು ತೊಂದರೆಯಿಲ್ಲ. ಖಾಸಗಿ ಡಾಕ್ಟರುಗಳು, ನರ್ಸಿಂಗ್ ಹೋಮಿನವರು ಅಂಥ ರೋಗಿಗಳಿಗೆ ವಿ. ಎಸ್. ಹಾಸ್ಪಿಟಲ್ಲಿಗೆ ಹೋಗಲು ಹೇಳುತ್ತಾರೆ. ಪ್ರತಿ ಸಂಜೆ ನಿಧಿಯ ವಿಶ್ವಸ್ಥರು ಈ ಆಸ್ಪತ್ರೆಗೆ ಬರುತ್ತಾರೆ. ಪ್ರತಿ ವಾರ್ಡಿನಲ್ಲೂ ಅಡ್ಡಾಡುತ್ತಾರೆ. ಮೊದಲೇ ನಿಧಿಯ ಸಹಾಯಪಡೆದವರ ಯೋಗಕ್ಷೇಮ ವಿಚಾರಿಸುತ್ತಾರೆ. ನಿಧಿಯ ಸಹಾಯ ಕೋರಿ ಬಂದ ಹೊಸ ರೋಗಿಗಳ ಬಗ್ಗೆ ಅಲ್ಲಿಯ ದಾದಿಯರು ವಿವರಿಸುತ್ತಾರೆ.

ಇಂಥ ರೋಗಿಗಳ ಜವಾಬ್ದಾರಿಯನ್ನು ಹೊರುವಾಗಿನ ಅನುಭವಗಳು ಹಲವು ಬಗೆಯವು ಎನ್ನುತ್ತಾರೆ ನಗೀನಭಾಯಿ. ಎಷ್ಟೋ ಸಲ ಇಂಥ ಅನುಭವಗಳಿಂದ ಅವರು ಹೊಸ ಪಾಠ ಕಲಿತಿದ್ದಾರೆ. ಹೀಗಾಗಿ, ಅತಿ ಜಾಗರೂಕರಾಗಿ ಜಾತಿ, ಮತ, ಲಿಂಗ ಭೇದವಿಲ್ಲದೆ ಯೋಗ್ಯ ಅಸಮರ್ಥ ರೋಗಿಗಳನ್ನು ಆಯ್ದುಕೊಳ್ಳುತ್ತಾರೆ. ಒಬ್ಬ ಮಹಿಳೆ ಸಹಾಯ ಕೋರಿ ಬಂದಳು. ಆಕೆಯ ಶುಶ್ರೂಷೆಗಾಗಿ ೬,೦೦೦ ರೂಪಾಯಿಗಳನ್ನು ಖರ್ಚು ಮಾಡಿದರು. ಆದರೆ ಕೊನೆಗೆ ಆಕೆ ಒಬ್ಬ ಮುಖ್ಯಾಧ್ಯಾಪಕನ ಹೆಂಡತಿ ಎಂಬುದು ಗೊತ್ತಾಯಿತು. ಇಂಥವೆ ಇನ್ನೂ ಕೆಲ ಪ್ರಕರಣಗಳಾದುದುಂಟು.

ಇಂದು ನಿಧಿ ೧೯ ಲಕ್ಷ ರೂಪಾಯಿ ತಲುಪಿದೆ. ನಗೀನದಾಸ ವ್ಯಾಪಾರೋದ್ಯಮಿಗಳಿಂದ ಅಧಿಕೃತ ರಸೀದಿ ನೀಡಿ ಪಡೆದ ಹಣ ಇವರಲ್ಲಿ ಸೇರಿದೆ. ಪ್ರತಿಯೊಬ್ಬರಿಂದಲೂ ೧೦೦೦ರೂಪಾ-ಯಿಗಳಿಗೆ ಕಡಿಮೆ ಇಲ್ಲದಂತೆ ದೇಣಿಗೆ ಪಡೆದಿದ್ದಾರಲ್ಲದೆ ಆ ಹಣವನ್ನು ದೀರ್ಘಾವಧಿಯ ವರೆಗೆ ಡಿಪಾಸಿಟ್ಟು ಇಟ್ಟಿದ್ದಾರೆ. ಅದರಿಂದ,

ಬರುವ ಬಡ್ಡಿಯೇ ಸಾಕಷ್ಟು. ೫ ರಿಂದ ೧೦ ಸಾವಿರ ರೂಪಾಯಿಗಳ ವರೆಗೆ ವಂತಿಗೆ ನೀಡಿದವರು ೩೬೫ ಜನ. ೧೯೭೮ನೆಯ ವರ್ಷದ ಆಯವ್ಯಯ ಲೆಕ್ಕಾಚಾರದ ಪ್ರಕಾರ ೩ ಲಕ್ಷ ರೂಪಾಯಿ ಬಡ್ಡಿ ಬಂದಿದೆ.

ಈ ನಿಧಿಯ ಖರ್ಚಿನ ಪಟ್ಟಿಯಲ್ಲಿ ಕೇವಲ ಔಷಧಿ, ಚಿಕಿತ್ಸೆ, ಉಪಕರಣಗಳ ಖರೀದಿ, ಹಣ್ಣು, ಹಾಲುಗಳಿಗಾಗಿ ಮಾತ್ರ ವೆಚ್ಚದ ವಿವರ ಸಿಗುತ್ತದೆ. ಈ ಎಲ್ಲವನ್ನೂ ನೋಡಿಕೊಳ್ಳಲು ಒಂದು ಪೈಸೆಯೂ ಖರ್ಚಾಗುವುದಿಲ್ಲ. ಅಂದರೆ ಇದಕ್ಕೆ ಕೆಲಸ ಮಾಡುವವರು ಒಂದು ರೂಪಾಯಿಯನ್ನೂ ಬಳಸಿಕೊಳ್ಳುವುದಿಲ್ಲ. ವಂತಿಗೆ ಕೂಡಿಸಲು ಬೇರೆ ಬೇರೆ ಊರಿಗೆ ಹೋಗಿ ಬರುವ ಖರ್ಚನ್ನೂ ನಿಧಿಯ ಲೆಕ್ಕಕ್ಕೆ ಹಾಕುವುದಿಲ್ಲ. ವೈದ್ಯಕೀಯೇತರ ವೆಚ್ಚವೆಂದರೆ ವಾರ್ಷಿಕ ಆಯವ್ಯಯ ಪಟ್ಟಿಯ ಮುದ್ರಣದ್ದು ಮಾತ್ರ.

ಬಯಸಿದ್ದರೆ ಈ ಹಣದಿಂದ ಬೇಕಾದ್ದು ಮಾಡಿಕೊಳ್ಳಬಹುದಾಗಿತ್ತು ನಗೀನದಾಸ. ಹಾಗೆ ಮಾಡಲಿಲ್ಲ. ಎಂಥ ಪ್ರಸಂಗದಲ್ಲೂ ಎದೆಗೆಟ್ಟಿಲ್ಲ. ಆತನಿಗೆ ಬೆಂಬಲ ನೀಡಿದವರು ನಿಧಿಯ ವಿಶ್ವಸ್ಥರಾದ ನಿರಂಜನಾಬೆನ್, ಚಿಮನಭಾಯಿ ಶಾ, ಸುಶೀಲಾಬೆನ್.

ನಗೀನಭಾಯಿಗೆ ಸದಾ ಅದೇ ಯೋಚನೆ. ನಿಧಿಯನ್ನು ಬಲಪಡಿಸುವ ತನ್ಮೂಲಕ ಅಬಲರಿಗೆ ಸಹಾಯ ಮಾಡುವ ವಿಚಾರ. ನೋವುಳ್ಳವರನ್ನು ನಗುವಂತೆ ಮಾಡುವ ಪ್ರಯತ್ನ ಅವರದು. ■

**(ಕೃಪೆ: ಗುಜರಾತಿನ 'ಅನ್ದ್ವಾ ವಾದ್ಯ')**



**ಅಂದು ನಮ್ಮ ಮನೆಯಲ್ಲಿ ಸತ್ಯನಾರಾಯಣ ಪೂಜೆ. ನಮ್ಮ ಮನೆ ಚಿಕ್ಕದು. ಮಹಾ ಮಂಗಳಾರತಿ ಆದಮೇಲೆ ಎಲ್ಲರೂ ಎದ್ದು ದೇವರಿಗೆ ನಮಸ್ಕರಿಸುತ್ತಿದ್ದರು. ಜಾಗ ಸಾಲದೆ ಬಂದವರು ನಿಂತ ಭಂಗಿಯಲ್ಲೇ ದೇವರ ವಿರುದ್ಧ ದಿಕ್ಕಿನಲ್ಲೂ ಸಹ ನಮಸ್ಕರಿಸುತ್ತಿದ್ದರು.**

**ನಮ್ಮ ಕಿಟ್ಟ ತಮಾಷೆ ಮಾಡುವುದರಲ್ಲಿ ಎತ್ತಿದ ಕೈ. ನಮ್ಮ ಶೇಖರ ಇನ್ನೂ ಆರು ವರ್ಷದವ. ಇತರರನ್ನು ನೋಡಿ ಅವನೂ ಹಾಗೇ ಮಾಡಿದಾಗ, "ಶೇಖರ, ದೇವರು ಮೂರ್ತಿ ಈ ಕಡೆ ಇದೆ. ನೀನು ಆ ದಿಕ್ಕಿಗೆ ನಮಸ್ಕರಿಸುತ್ತ ಇದ್ದೀಯಲ್ಲ... ಏಕೆ?" ಎಂದ.**

**"ದೇವರು ಎಲ್ಲ ಕಡೆಯೂ ಇದ್ದಾನೆ..." ಎಂದ ಶೇಖರ.**

**"ಯಾರು ಹೇಳಿದರು..." ಕಿಟ್ಟನ ಪ್ರಶ್ನೆ.**

**"ನಮ್ಮ ಕ್ಲಾಸ್ ಟೀಚರ್. ಪ್ರಹ್ಲಾದನನ್ನು ಹಿರಣ್ಯಕಶ್ಯಪುವು ಕಂಬವನ್ನು ತೋರಿಸಿ, 'ಇಲ್ಲಿ ಇದ್ದಾನಾ ದೇವರು,' ಎಂದು ಹೇಳಿದಾಗ ಹೂಂ ಎಂದನಂತೆ...ಆಗ ಗಧೆಯಿಂದ ಹೊಡೆದಾಗ ನರಸಿಂಹ ಅವತಾರನಾಗಿ ಹೊರ ಬಂದನಂತೆ..." ಕಥೆ ಹೇಳಿದ.**

**"ಹಾಗಾದರೆ ಈ ಬಾಗಿಲನ್ನು (ಕಂಬ ಇರಲಿಲ್ಲ ನಮ್ಮ ಮನೆಯಲ್ಲಿ) ಮುರಿದರೆ (ಹೊಡೆದರೆ) ದೇವರು ಪ್ರತ್ಯಕ್ಷನಾಗುತ್ತಾನಾ?"**

**"ಮುರಿ... ನಿನಗೆ ಭಕ್ತಿ ಇದ್ದರೆ ಖಂಡಿತಾ ಪ್ರತ್ಯಕ್ಷ ಆಗುತ್ತಾನೆ!"**

**ಅಷ್ಟರಲ್ಲಿ ಅಲ್ಲಿಗೆ ಬಂದ ನಮ್ಮ ಚಿಕ್ಕಪ್ಪನವರು ಬೇಡ...ಬೇಡ. "ನೀನು ಬಾಗಿಲು ಮುರಿದರೆ ದೇವರ ಬದಲು ಮನೆಯ ಓನರ್ ಪ್ರತ್ಯಕ್ಷನಾಗುತ್ತಾನೆ..." ಎಂದಾಗ ನಮಗೆಲ್ಲ ನಗುವೋ ನಗು.**

**— ಹಂಸು ಶ್ರೀನಿವಾಸರಾವ್**




# ಫ್ಲೈಟ್ ನಂ-303

**ನಾಚಾರ್**

ಸ್ನೇಹಕ್ಕೆ ಯೋಗ್ಯರಾದ (ಹಾಗೆಂದು ಭಾವನೆ ಹುಟ್ಟಿಸುವ) ಅನೇಕರನ್ನು ನನ್ನ ಜೀವಮಾನದಲ್ಲಿ ಕಂಡಿದ್ದೇನೆ. ಅಂಥವರಲ್ಲಿ ಕೆಲವರು ಒಮ್ಮೊಮ್ಮೆ ಸಮಾಜದ ಕಣ್ಣಿಗೆ, ತುಂಟರಾಗಿ ಕಂಡುಬರುವುದುಂಟು. ನನ್ನ ಅಂಥ ಸಂಗಡಿಗರಲ್ಲಿ 'ರಮ್ಮಿ'ಯೂ ಒಬ್ಬ. ಎಂಥ ಗಟ್ಟಿಯಾದ ಬಿಗಿದು ಜಡಿದ ಬೀಗವನ್ನೂ ಆತ ಕ್ಷಣಮಾತ್ರದಲ್ಲಿ ಚಾಕಚಕ್ಯತೆಯಿಂದ ಹಾರಿಸಿ ತೆರೆದುಬಿಡುತ್ತಿದ್ದ. ತನ್ನ ಈ ಶಕ್ತಿಯನ್ನು ಆತ ಯಾವ ದುರುದ್ದೇಶಕ್ಕೂ ಬಳಸದೇ ಕೇವಲ ಹವ್ಯಾಸವನ್ನಾಗಿಸಿಕೊಂಡಿದ್ದ. ಅನೇಕ ಭೂಗತ 'ಬಾಸ್'ಗಳು ಒತ್ತಾಯ ಆಮಿಷಗಳನ್ನು ಒಡ್ಡಿದ್ದರೂ ಆತ ಎಂದೂ ತನ್ನ ಈ ಕೌಶಲವನ್ನು ದುರುಪಯೋಗಪಡಿಸಿಕೊಂಡಿರಲಿಲ್ಲ. ತನ್ನ ನೀರಸ ಗುಮಾಸ್ತಗಿರಿಯನ್ನೇ ಮುಂದುವರಿಸಿಕೊಂಡು ದಿನಗಳನ್ನು ತಳ್ಳುತ್ತಿದ್ದ. ಯಾವ ದುರುದ್ದೇಶವೂ ರಿಸ್ಕೂ ಇಲ್ಲದ ಸಂದರ್ಭದಲ್ಲಿ ಮಾತ್ರ ಈ ಕೌಶಲದ ಬಳಕೆಯನ್ನು ಮಾಡುತ್ತಿದ್ದ.

ರಮ್ಮಿಯೆಡೆಗೆ ನನ್ನನ್ನು ಆಕರ್ಷಿಸಿದ ಇನ್ನೊಂದು ಅಂಶವೆಂದರೆ, ಆತ ಸ್ವಾರಸ್ಯಕರವಾಗಿ ಹೇಳುತ್ತಿದ್ದ ತನ್ನ ಸಾಹಸ ಪ್ರಧಾನ ಪ್ರವಾಸ ಕಥನ. ತನ್ನ ಯೌವನದ ದಿನಗಳಲ್ಲಿ ಹಡಗೊಂದರಲ್ಲಿ ನೌಕರನಾಗಿ ಪ್ರಪಂಚದ ಕೆಲ ಭಾಗ ಸುತ್ತಿದ್ದ. ತಾಹಿತಿ, ಅಪುಲಿ, ನ್ಯೂಗಿನಿ ಮುಂತಾದ ಸ್ಥಳಗಳಲ್ಲಿನ ಆತನ ಸಾಹಸಗಳ ವರ್ಣನೆಯನ್ನು ಆತನ ಬಾಯಿ

ಯಿಂದಲೇ ಕೇಳಬೇಕು. ಅಫ್ಘಾನಿಸ್ತಾನದ ಕಳ್ಳ ಸಾಗಣೆದಾರರು, ಅಡಿಸ್ ಅಬಾಬಾದ ಸಲಿಂಗ ಸಂಗಿಗಳು, ಮುಂತಾದವರ ಕೈಯಲ್ಲಿ ಸಿಕ್ಕು ತಾನು ಪಟ್ಟ ಪಾಡು–ಒಂದೇ, ಎರಡೇ ಅವನ ಸಾಹಸ ಗಾಥೆಗಳು! ಹೀಗಾಗಿ ಒಬ್ಬ ಮಂತ್ರಿಯ ಸಹ ವಾಸಕ್ಕಿಂತಲೂ ನಾನು ರಮ್ಮಿಯ ಸಹವಾಸಕ್ಕೆ ಆದ್ಯತೆ ನೀಡುತ್ತಿದ್ದೆ.

ಆತನನ್ನು ನಾನು ಮೊದಲು ಭೇಟಿಯಾದದ್ದು ಲಂಡನ್ನಿನ ಸೋಹೋ ಡಿಸ್ಟ್ರಿಕ್ಟಿನ ಪುಟ್ಟ ಪಬ್ ಒಂದರಲ್ಲಿ. ೧೯೬೦ರ ಸುಮಾರಿಗೆ. ಆಗ ನಾನಿನ್ನೂ ವೈದ್ಯಕೀಯ ಅಭ್ಯಾಸ ಮಾಡುತ್ತಿದ್ದೆ. ಪ್ರತಿ ಸಂಜೆ ನಾವಿಬ್ಬರೂ ಆ ಪಬ್ಬಿನಲ್ಲಿ ಸಂಧಿಸುತ್ತಿದ್ದೆವು. ರಮ್ ಬಾಟಲ್ ಒಂದರ ಹೆಚ್ಚಿನ ಭಾಗವನ್ನು ಗಂಟಲಿನಲ್ಲಿ ಇಳಿಸಿದ ನಂತರ (ಆದ್ದರಿಂದಲೇ ಆತ 'ರಮ್ಮಿ') ಅವನ ಸ್ವಾರಸ್ಯಕರ ವಿವರಣೆ ಪ್ರಾರಂಭವಾಗುತ್ತಿತ್ತು. ನಾನು, ಇನ್ನೂ ಅನೇಕರು ಅವನ ಶ್ರೋತೃಗಳಾಗುತ್ತಿದ್ದೆವು. ನನ್ನ ಲಂಡನ್ನಿನ ವಾಸ್ತವ್ಯದಲ್ಲಿನ ಏನನ್ನಾದರೂ ನಾನು ಸಂತೋಷದಿಂದ ಜ್ಞಾಪಿಸಿಕೊಳ್ಳುವುದಾದರೆ, ಪಬ್ಬಿನಲ್ಲಿ ರಮ್ಮಿಯೊಡನೆ ನಾನು ಕಳೆದ ಆ ಅಲ್ಪಾವಧಿಯನ್ನು ಮಾತ್ರ.

ನಂತರ ನಿರೀಕ್ಷಿಸಿದಂತೆ ನಾನು ಅನೇಕ ಬಾರಿ ಪರೀಕ್ಷೆಗಳಲ್ಲಿ ಉರುಳಿದೆ. ಅನೇಕ ವರ್ಷಗಳನ್ನೂ ಸಾಕಷ್ಟು ಹಣವನ್ನೂ ಹಾಳು ಮಾಡಿ ನಾನು ಭಾರತಕ್ಕೆ ಹಿಂದಿರುಗಿ ನನ್ನ ಕುಟುಂಬದ ವೃತ್ತಿಯಾದ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿದೆ. ಹೀಗಾಗಿ ರಮ್ಮಿಯ ಸಂಪರ್ಕವನ್ನು ಕಳೆದುಕೊಂಡೆ. ಲಂಡನ್ನಿನ ಜ್ಞಾಪಕವಾದಾಗಲೆಲ್ಲ ನನಗೆ ಖಂಡಿತ ಈ ಸ್ನೇಹಿತನ ಜ್ಞಾಪಕ ಉಂಟಾಗುತ್ತಿತ್ತು. ಆಗೆಲ್ಲ ಆತ ಹೇಗಿರಬಹುದು ಪ್ರಪಂಚ ಅವನನ್ನು ಹೇಗೆ ನಡೆಸಿಕೊಳ್ಳುತ್ತಿರಬಹುದು ಎಂದೆಲ್ಲ, ಆಲೋಚನೆಯುಂಟಾಗುತ್ತಿತ್ತು.

*

ಒಂದು ಬೇಸಿಗೆಯ ಮುಂಜಾವು 'ಡಾಲರ್ ಪ್ರಭುಗಳ' ಜತೆಯ ಒಂದು ವ್ಯವಹಾರಕ್ಕೆ ನ್ಯೂಯಾರ್ಕ್ ನಗರದಲ್ಲಿದ್ದೆ. ಕೆನಡಿ ಏರ್ ಪೋರ್ಟಿನ ಲೌಂಜಿನಲ್ಲಿ ನ್ಯೂಯಾರ್ಕ್ ಟೈಮ್ಸ್ ಓದುತ್ತಾ ಲಂಡನ್ನಿಗೆ ಹೋಗಬೇಕಾದ ನನ್ನ ವಿಮಾನದ ಅನೌನ್ಸ್‌ಮೆಂಟಿಗಾಗಿ ಕಾಯುತ್ತ ಇದ್ದಾಗ ಆ ನೋಟವನ್ನು ಕಂಡು, ದಿಗ್ಭ್ರಮೆಗೊಂಡೆ. ಕೈಗೆ ಕೋಳ ತೊಡಿಸಲ್ಪಟ್ಟ ರಮ್ಮಿಯಂಥವನೊಬ್ಬ ಸಿವಿಲ್ ಉಡುಗೆ ತೊಟ್ಟ ಬ್ರಿಟಿಷ್ ಪೋಲೀಸರ ಮಧ್ಯದಲ್ಲಿ ನಡೆಯುತ್ತಾ ನನ್ನನ್ನು ದಾಟಿ ಮುಂದುವರಿಯುತ್ತಿದ್ದ. ಕಣ್ಣುಗಳನ್ನು ಅರಳಿಸಿ ನೋಡಿದೆ; ಹೌದು, ನಿಸ್ಸಂಶಯವಾಗಿ ಅವನು ರಮ್ಮಿಯೇ ಸರಿ !

ಓದುತ್ತಿದ್ದ ನ್ಯೂಯಾರ್ಕ್ ಟೈಂಸ್ ಕೈ ಜಾರಿ ಬಿದ್ದಿತು. ನಾನು ಪುಟಿದೆದ್ದೆ. ನನ್ನ ಬ್ರೀಫ್‌ಕೇಸ್ ಮತ್ತು ಪೇಪರ್‌ಗಳನ್ನೆತ್ತಿಕೊಂಡು ರಮ್ಮಿಯ ಹೆಸರು ಹಿಡಿದು ಕೂಗುತ್ತ ಹಿಂಬಾಲಿಸಿದೆ. ಒಂದು ಕ್ಷಣ ನಿಂತು ಸುತ್ತಲೂ ದೃಷ್ಟಿ ಹರಿಸಿದ ರಮ್ಮಿ. "ಹೆಲ್ಲೋ!" ಎಂದ. ಇಬ್ಬರೂ ಉದ್ವಿಗ್ನತೆಯಿಂದೆಂಬಂತೆ ಒಬ್ಬರನ್ನೊಬ್ಬರು ತಬ್ಬಿಕೊಳ್ಳುವವರಂತೆ ನುಗ್ಗಿದಾಗ ರಮ್ಮಿಯನ್ನು ಆ ಸಿಪಾಯಿಗಳು ಜಗ್ಗಿದರು.

"ಈ ಮನುಷ್ಯ ನಿನಗೆ ಗೊತ್ತೆ?" ಒಬ್ಬ ಸಿಪಾಯಿ ನನ್ನನ್ನು ಪ್ರಶ್ನಿಸಿದ.

"ಹೌದು, ಆತ ನನ್ನ ಸ್ನೇಹಿತ." ಎಂದೆ.

ರಮ್ಮಿ ಬೇಸರ ತುಂಬಿದ ತನ್ನ ಮುಖವನ್ನು ತಿರುಗಿಸಿ ಕೋಳ ತೊಟ್ಟ ತನ್ನ ಕೈಗಳನ್ನು ನನ್ನೆಡೆಗೆ ಚಾಚಿ, "ನೋಡು, ನನ್ನ ತತ್ವವನ್ನು ಗಾಳಿಗೆ ತೂರಿ ಎಲ್ಲೋ ಒಂದೆರಡು ಬೀಗಗಳನ್ನು ಮುರಿದು ನನ್ನನ್ನೇ ನಾನು ಯಾವ ಸ್ಥಿತಿಗೆ ತಂದುಕೊಂಡಿದ್ದೇನೆ" ...ಎಂದ.

ಸಿಪಾಯಿಗಳಿಬ್ಬರೂ ಮಾತನಾಡುವುದಕ್ಕೆ ಮೊದಲೇ ನಾನು ರಮ್ಮಿಯ ಹತ್ತಿರ ಸರಿದೆ. "ಹೇಳು ನಿನಗೇನಾಯಿತು? ನನ್ನಿಂದಾಗಬೇಕಾದ್ದೇನಾದರೂ ಇದೆಯೆ? ನಿನ್ನನ್ನು ಇವರು ಎಲ್ಲಿಗೆ ಒಯ್ಯುತ್ತಿದ್ದಾರೆ?" ಒಂದೇ ಉಸಿರಿನಲ್ಲಿ ಕೇಳಿದೆ.

"ನಾನು ಕೆಲ ದರೋಡೆಕೋರರೊಡನೆ ಸಾಮೀಲಾಗಿ ಲಂಡನ್ನಿನ, ದೊಡ್ಡ ಸೌಧವೊಂದರ ಕೆಲವು

ಬೀಗಗಳನ್ನು ಹಾರಿಸಿದೆ. ಆ ಮನೆಯಲ್ಲಿದ್ದ ಅಮೂಲ್ಯ ಪೇಂಟಿಂಗುಗಳನ್ನು ಅವರು ಹಾರಿಸಿದರು. ಅವರಿಂದ ನನ್ನ ಪಾಲನ್ನು ಪಡೆದು ನಾನು ಅಮೇರಿಕಕ್ಕೆ ಹಾರಿಬಂದೆ."

"ಈಗ ಇವನು ಲಂಡನ್ನಿನ ಮರು ಪ್ರಯಾಣದಲ್ಲಿದ್ದಾನೆ. ಆದರೆ ಕೋಳಗಳ ಬೀಗದಲ್ಲಿ ಸಿಕ್ಕಿ ಬಿದ್ದಿದ್ದಾನೆ. ಬಾ, ಬಾ, ವಿಮಾನ ಹೊರುಡುವ ವೇಳೆ ಸಮೀಪಿಸಿತು," ಎನ್ನುತ್ತಾ ಸಿಪಾಯಿಯೊಬ್ಬ ರಮ್ಮಿಯನ್ನೆಳೆದ. ರಮ್ಮಿ ಕಿರುಕಿರುಗಿ ನೋಡುತ್ತ ನನ್ನೆಡೆಗೆ ಮುಗ್ನುಳ್ನಗೆ ಬೀರುತ್ತಾ ಅವರ ಹಿಂದೆ ನಡೆದ.

ಅದೇ ವೇಳೆಗೆ, "ಬ್ರಿಟಿಷ್ ಏರ್ ವೇಸ್‌ನ ಫ್ಲೈಟ್ ನಂ. ೩೦೩ ತಾಂತ್ರಿಕ ತೊಂದರೆಯಿಂದಾಗಿ ಅರ್ಧ ಗಂಟೆ ತಡವಾಗಲಿದೆ" ಎಂಬ ಅನೌನ್ಸ್‌ಮೆಂಟ್ ಕೇಳಿಬಂದಿತು. ಈ ಘೋಷಣೆಯಿಂದ ಪೋಲೀಸರ ಮುಖದ ಮೇಲೆ ಉಂಟಾದ ಪರಿಣಾಮವನ್ನು ಗಮನಿಸಿದಾಗ ಅವರು ರಮ್ಮಿಯೊಡನೆ ಅದೇ ವಿಮಾನದಲ್ಲಿ ಪ್ರಯಾಣ ಮಾಡುವವರೆಂಬುದು ಗೊತ್ತಾಯಿತು. ಅವರು ಕಾಫಿ ಷಾಪಿಗೆ ಹೊರಟರು. ನಾನೂ ಅವರ ಹಿಂದೆಯೇ ಹೋಗಲೇ ಎಂದು ಯೋಚಿಸಿದೆ. ಆದರೆ ನಾನೂ ಲಂಡನ್ನಿಗೆ ಹೋಗುವವನಿರುವುದರಿಂದ ಅಲ್ಲಿಯೇ ಅವನ ಸಂಪರ್ಕ ಪಡೆಯಲು ಪ್ರಯತ್ನಿಸಬೇಕೆಂದುಕೊಂಡು ಸುಮ್ಮನಾದೆ. ಅದೇ ವೇಳೆಗೆ ನಾನು ಹೊರಡಬೇಕಾಗಿದ್ದ ವಿಮಾನದ ಅನೌನ್ಸ್‌ಮೆಂಟ್ ಕೇಳಿಸಿತು. ಪ್ಲಾಟ್‌ಫಾರ್ಮಿಗಿಳಿದು ವಿಮಾನ ಸಮೀಪಿಸಿದೆ. ನಾನು ವಿಮಾನವನ್ನೇರುವಾಗ ದೂರದಲ್ಲಿ ರಮ್ಮಿ ಮತ್ತು ಅವನ ಜತೆಗಾರರನ್ನು ಕಂಡು ಕೈ ಬೀಸಿದೆ. ಕೋಳಗಳಿಂದಲಂಕೃತವಾದ ತನ್ನ ಕೈಗಳನ್ನು ಬೀಸಿ ಆತ ಮಾರುತ್ತರಿಸಿದ. ಜನರ ಗುಂಪಿನಲ್ಲಿ ಅವರು ಮರೆಯಾದರು. ಲಂಡನ್ನಿನಲ್ಲಿ ನಮ್ಮೆರಡು ವಿಮಾನಗಳೂ ೧೦ ನಿಮಿಷಗಳ ಅಂತರದಲ್ಲಿ ಇಳಿಯಲಿದ್ದವು ಎಂಬುದಷ್ಟೇ ನನ್ನ ಸಮಾಧಾನವಾಗಿತ್ತು.

ಏಳು ಗಂಟೆಗಳ ಸತತ ಯಾನ ಮಾಡಿ ಅಟ್ಲಾಂಟಿಕ್ ಸಾಗರವನ್ನು ದಾಟಿ ನನ್ನ ಟಿ. ಡಬ್ಲ್ಯು. ಎ. ವಿಮಾನ ಲಂಡನ್ನಿನ ಹೀಥ್ರೂ ನಿಲ್ದಾಣದಲ್ಲಿ ಇಳಿಯಿತು. ಅಲ್ಲಿನ ವಾತಾವರಣದಲ್ಲಿ ಏನೋ ಉತ್ಸಾಹ ತುಂಬಿದಂತಿತ್ತು. ಇಂಗ್ಲೆಂಡಿನಲ್ಲಿ ಇಂಥ ದಿನವನ್ನು ನಾನೆಂದೂ ಕಂಡಿರಲಿಲ್ಲ. ಬಹು ದಿನಗಳ ನಂತರ ಇಂಗ್ಲೆಂಡಿನಲ್ಲಿಳಿದ ನನ್ನ ಭಾವನೆಗಳು ವಿಚಿತ್ರವಾಗಿದ್ದವು.

ಸ್ತ್ರೀಧ್ವನಿಯೊಂದು ಬ್ರಿಟಿಷ್ ಏರ್‌ವೇಸಿನ ೩೦೩ನೇ ವಿಮಾನವು ಕೆಲವೇ ನಿಮಿಷಗಳಲ್ಲಿ ಹೀಥ್ರೂದಲ್ಲಿಳಿಯಲಿರುವ ವಿಷಯವನ್ನು ಮಧುರವಾಗಿ ಘೋಷಿಸುತ್ತಿತ್ತು. ರಮ್ಮಿ ಅದರಲ್ಲೇ ಬರಲಿದ್ದಾನಲ್ಲವೆ... ಅಷ್ಟರಲ್ಲಿ ಬೆಳ್ಳಿಯಂತೆ ಮಿನುಗುತ್ತಿದ್ದ ಆ ವಿಮಾನ ಇಳಿಯುವ ಹವಣಿಕೆಯಲ್ಲಿ ನಿಲ್ದಾಣದ ಮೇಲ್ಭಾಗದಲ್ಲಿ ಸುತ್ತುವುದು ಕಂಡಿತು. ರಮ್ಮಿಯೊಡನೆ ಒಂದೆರಡು ಮಾತುಗಳನ್ನಾದರೂ ಆಡಲು ನನ್ನ ವಿಳಾಸವನ್ನು ಅವನಿಗೆ ನೀಡಲು ನಾನು ಕಾತರದಿಂದ ನಿರೀಕ್ಷಿಸುತ್ತಿದ್ದೆ. ಕಸ್ಟಮ್ಸ್‌ನವರ ಪರಿಶೀಲನೆಗೆ ಒಳಗಾಗಿ ನಾನು ಬಂದು ರೈಲಿಂಗನ್ನು ಹಿಡಿದುಕೊಂಡು ನಿಲ್ಲುವ ವೇಳೆಗೆ ಆ ವಿಮಾನ ಇಳಿದಿದ್ದಿತು.

ಅದೇ ವೇಳೆಗೆ ಹೊಳೆಯುವ ಬೂದು ಬಣ್ಣದ ಮರ್ಸಿಡಿಸ್ ಕಾರ್ ಒಂದು ವಿಮಾನದ ಮೊದಲ ವರ್ಗದ ಕ್ಯಾಬಿನ್ನಿನ ಮೆಟ್ಟಿಲ ಬಳಿ ಬಂದು ನಿಂತಿತು. ಸಮವಸ್ತ್ರ ಧರಿಸಿದ ಕಾರಿನ ಡ್ರೈವರ್ ಬಹಳ ಭಕ್ತಿ–ಆದರಗಳಿಂದ ಕಾರಿನ ಹಿಂಬಾಗಿಲನ್ನು ತೆರೆದು ನಿಂತುಕೊಂಡ. ಬಹುಶಃ ಆ ಕಾರು ಯಾರೋ ವಿಐಪಿಯೊಬ್ಬನನ್ನು ಕರೆದುಕೊಂಡು ಹೋಗಲು ಬಂದಿದೆ ಎಂದುಕೊಂಡೆ.

ಕ್ಯಾಬಿನ್ನಿನ ಬಾಗಿಲು ತೆರೆಯಿತು. ಹಸನ್ಮುಖಿಗಳಾದ ಇಬ್ಬರು ಏರ್ ಹೋಸ್ಟೆಸುಗಳೂ ಅವರನ್ನು ಹಿಂಬಾಲಿಸಿದ ಇಬ್ಬರು ನೌಕರರೂ ಹೊರ ಬಂದು ವಿಐಪಿಗೆ ಗೌರವ ತೋರುವವರಂತೆ ಬದಿಗೆ ಸರಿದು ನಿಂತರು.

ಅತ್ಯುತ್ತಮ ಹ್ಯಾಟು ಧರಿಸಿದ–ಅಮೂಲ್ಯ ಸೂಟು ಧರಿಸಿದ್ದ, ವಜ್ರದ ಕಫ್ ಲಿಂಕ್‌ಗಳನ್ನೂ

ಟ್ಟೆ ಪಿನ್ನನ್ನೂ ಬೆಳಗಿಸುತ್ತಾ ಆ ಮಹತ್ವದ ವ್ಯಕ್ತಿ ಕ್ಯಾಬಿನ್ನಿನಿಂದ ಹೊರಬಿದ್ದ. ಒಂದು ಕ್ಷಣ ಕ್ಯಾಬಿನ್ನಿನ ಬಾಗಿಲಿನಲ್ಲಿ ನಿಂತು. ಲಂಡನ್ನಿನ ಪ್ರಶಾಂತವಾದ ಆ ದಿನವನ್ನು ವೀಕ್ಷಿಸಿದ. ವಿಮಾನದ ನೌಕರರ ಕಡೆಗೆ ಮುಗುಳ್ನಗೆ ಬೀರಿ • ತಲೆಯಾಡಿಸಿದ. ನಿಧಾನವಾಗಿ ಮೆಟ್ಟಿಲುಗಳನ್ನಿಳಿಯುತ್ತಾ ಎಲ್ಲರ ಸ್ವಾಗತವನ್ನೂ ಗಂಭೀರವಾಗಿ ಸ್ವೀಕರಿಸುತ್ತಾ ಮರ್ಸಿಡಿಸ್ ಬಳಿಗೆ ಬಂದ. ಒಂದು ಕ್ಷಣ ನನ್ನನ್ನೇ ನಾನು ನಂಬದಾದೆ. ಕಣ್ಣು ಹೊಸಕಿಕೊಂಡು ನೋಡಿದೆ. ಅನುಮಾನವೇ ಇಲ್ಲ. ಅವನು ರಮ್ಮಿ! ಆತ ಅದೇ ನಗು ಮುಖದೊಂದಿಗೆ ಕಾರು ಹತ್ತಿದ. ಕಾರು ನಿಧಾನವಾಗಿ ನಿಲ್ದಾಣದ ಗೇಟಿನೆಡೆ ಚಲಿಸುತ್ತಿತ್ತು. ರಮ್ಮಿಯ ಬೆಂಗಾವಲಿಗಿದ್ದ ಬ್ರಿಟಿಷ್ ಪೋಲೀಸರಲ್ಲಿ ಒಬ್ಬ, ನ್ಯೂಯಾರ್ಕಿನಲ್ಲಿ ರಮ್ಮಿಯ ಕೈಗಳಿಗೆ ತೊಡಿಸಿದ್ದ ಕೋಳಗಳನ್ನು ಹಿಡಿದುಕೊಂಡು ವಿಮಾನದ ಮೂರನೆಯ ವರ್ಗದ ಕ್ಯಾಬಿನ್ನಿನಿಂದ ಇಳಿದು ಬರುತ್ತಿದ್ದ. ಆ ವಿಮಾನದ ಪ್ರಯಾಣಿಕರು ಮರ್ಸಿಡಿಸ್ ಕಡೆಗೆ ಕೈ ಬೀಸುತ್ತಿರುವಂತೆಯೇ ಕಾರು ಕಣ್ಮರೆಯಾಯಿತು.

ಕೆಲವು ನಿಮಿಷಗಳವರೆಗೆ ನಾನು ಮೂಕ ವಿಸ್ಮಿತನಂತೆ ನಿಂತಿದ್ದೆ. ನ್ಯೂಯಾರ್ಕಿನ ಕೆನೆಡಿ ನಿಲ್ದಾಣದಲಿ ಕೈಗಳಿಗೆ ಕೋಳ ತೊಟ್ಟ ರಮ್ಮಿಯನ್ನು ನಾನು ನೋಡಿದ್ದೆ. ಏಳು ಗಂಟೆಗಳು ನಂತರ ಹೀಥ್ರೂ ನಿಲ್ದಾಣದಲ್ಲಿಳಿಯುವಾಗಲೂ ಅವನನ್ನು ನೋಡಿದೆ. ಈ ಏಳು ಗಂಟೆಗಳ ಅಲ್ಪಾವಧಿಯುಲ್ಲೇ ಎಷ್ಟು ಬದಲಾವಣೆ! ಕೈದಿಯಾಗಿದ್ದವನೊಬ್ಬ ರಾಜಮರ್ಯಾದೆಯನ್ನು ಪಡೆದಿದ್ದ: ಸಹ ಪ್ರಯಾಣಿಕರೆಲ್ಲರ ಗೌರವಾದರಗಳಿಗೆ ಪಾತ್ರನಾಗಿದ್ದ!

ಈ ಅವಧಿಯುಲ್ಲಿ ಏನು ಸಂಭವಿಸಿತ್ತು? ರಮ್ಮಿಯ ಜೀವನದಲ್ಲಿ ಉಂಟಾದ ಈ ಬದಲಾವಣೆ ನಾಟಕೀಯವಾಗಿತ್ತು. ಗಲಿಬಿಲಿಗೊಂಡ ನಾನು ಲಂಡನ್ ನಗರವನ್ನು ಪ್ರವೇಶಿಸಿದೆ. ನನಗೆ ವೇಳೆಯೂ ಬಹಳವಿರಲಿಲ್ಲ. ಈ ಪವಾಡ ಸದೃಶ ಸಮಸ್ಯೆಯನ್ನು ಬಿಡಿಸಲಾಗದೇ ನಾನು ಭಾರತಕ್ಕೆ ಮರಳಿ ಬಂದೆ.

■

ಹತ್ತು ತಿಂಗಳ ನಂತರ ನಾನು ಹಾಲಿವುಡ್ಡಿಗೆ ಹೊರಟಿದ್ದೆ. ವಿದೇಶೀಯರ ಸಹಕಾರದೊಂದಿಗೆ ಚಲನಚಿತ್ರವೊಂದರ ನಿರ್ಮಾಣದಲ್ಲಿ ತೊಡಗಿದ್ದೆನಾದ್ದರಿಂದ ಆ ಬಗ್ಗೆ ಚರ್ಚಿಸಲು, ದಾರಿಯಲ್ಲಿ ಲಾಸ್ ವೆಗಾಸಿನಲ್ಲಿ 'ಗೋಲ್ಡನ್ ಸ್ಲಿಪರ್' ಜೂಜು ಕಟ್ಟೆಯಲ್ಲಿ ರಮ್ಮಿ ಸಿಕ್ಕ. ಈ ಬಾರಿ ಸಿನಿಮಾ ನಟಿಯಂತೆ ಕಂಡುಬರುತ್ತಿದ್ದ ತರುಣಿ ಅವನ ಬೆಂಗಾವಲಿಗಿದ್ದಳು. ನಾಲ್ಕಾರು ಟೇಬಲುಗಳಾಚೆಯಿದ್ದ ಅವನ ಕಣ್ಣುಗಳನ್ನು ನನ್ನ ಕಣ್ಣುಗಳು ಸಂಧಿಸಿದವು. ಮರು ಕ್ಷಣದಲ್ಲಿ ದೊಡ್ಡ ಬೀರ್ ಜಗ್ ಇಟ್ಟಿದ್ದ ಟೇಬಲ್ಲಿನ ಮುಂದೆ ಎದುರು ಬದುರು ಕುಳಿತಿದ್ದೆವು. ಪರಸ್ಪರ ಭೇಟಿಯಿಂದ ನಾವಿಬ್ಬರೂ ಸಂತೋಷದೀವ ಮುಖರಾಗಿದ್ದೆವು. ಪ್ರಾರಂಭದ ಉಭಯ ಕುಶಲೋಪರಿ ಮುಗಿಯಿತು. ಜೂಜು ಕಟ್ಟೆಯಿಂದ ಹೊರಬಿದ್ದ ನಾವು ರಮ್ಮಿಯ ಕಾರಿನಲ್ಲಿ ಊರೊಳಗಿನ ಭವ್ಯ ಹೋಟೆಲ್ ಒಂದಕ್ಕೆ ಊಟಕ್ಕಾಗಿ ಬಂದೆವು.

ನಾವು ವೈನ್ ಚಪ್ಪರಿಸುತ್ತಿದ್ದಂತೆ ರಮ್ಮಿಯಲ್ಲಾಗಿದ್ದ ಬದಲಾವಣೆಗಳ ಕಡೆಗೆ ಗಮನ ಹರಿಸಿದೆ. ಕೆದರಿದ ತಲೆ, ಸಾಮಾನ್ಯ ಉಡುಗೆ ತೊಡುಗೆಗಳ ಬಡ ಗುಮಾಸ್ತ ರಮ್ಮಿ ಈಗ ಬೆಲೆಬಾಳುವ ಸೂಟಿನಲ್ಲಿ ಗಂಭೀರ ವ್ಯಕ್ತಿತ್ವವನ್ನು ಪಡೆದವನಾಗಿದ್ದ. ಆದರೆ ಅವನ ಜೀವನದ ಉತ್ಸಾಹ, ತುಂಟತನ, ಮಾತಿನ ವೈಖರಿಗಳು ಮಾತ್ರ ಹಿಂದಿನಂತೆಯೇ ಇದ್ದವು. ಬಹುಶಃ ಬ್ರಿಟಿಷ್ ಏರ್ ವೇಸಿನ ೩೦೩ನೇ ಯಾನವು ಅವನ ಜೀವನವನ್ನು ನಾಟಕೀಯವಾಗಿ ಬದಲಾವಣೆ ಮಾಡಿತ್ತು. ನಾವಿಬ್ಬರೂ ಮತ್ತೊಮ್ಮೆ ಬೇರ್ಪಡುವ ಮುನ್ನ ಆ ನಾಟಕೀಯ ಬದಲಾವಣೆಯ ವಿವರಗಳನ್ನು ಅರಿಯಲು ನಿರ್ಧರಿಸಿದ್ದೆ.

ರಮ್ಮಿಯ ಜತೆಗಾತಿಯನ್ನು ಯಾರೋ ನೃತ್ಯಕ್ಕೆ ಆಹ್ವಾನಿಸಿದಾಗ ನನಗೆ ರಮ್ಮಿಯೊ

ಡನೆ ಆತ್ಮೀಯವಾಗಿ ಮಾತನಾಡುವ ಅವಕಾಶ ಒದಗಿತು. ಅವನೂ ನನ್ನನ್ನು ಆತ್ಮೀಯವಾಗಿ ಮಾತನಾಡಿಸತೊಡಗಿದ. "ಮೈ, ಬಾಯ್ ನಿನ್ನನ್ನು ನೋಡಿ ತುಂಬಾ ಸಂತೋಷವಾಯಿತು. ನಿನ್ನ ಮನಸ್ಸಲ್ಲಿ ಏನು ನಡೆಯುತ್ತಿದೆ ಎಂಬುದು ನನಗೆ ಕಾಣುತ್ತಿದೆ. ಈ ನನ್ನ ಉಡುಗೆ ತೊಡುಗೆ ಈ ದುಬಾರಿ ಪೆಚ್ಚದ ಊಟ, ಈ ಭವ್ಯ ಕಾರು ಇವೆಲ್ಲಾ ಹೇಗೆ ಬಂದವು ಎಂಬ ಸಮಸ್ಯೆಗೆ ಸಿಕ್ಕಿದ್ದೀಯ, ಅಲ್ಲವೆ?" ಎನ್ನುತ್ತ ವೇಟರನ ಕಡೆ, ತಿರುಗಿ ಪುನಃ ಡ್ರಿಂಕ್ಸ್ ಆರ್ಡರು ಕೊಟ್ಟು ಸಿಗರೇಟು ಹೊತ್ತಿಸಿ ಆ ಕತೆಯನ್ನು ಹೇಳತೊಡಗಿದ.

"ಬ್ರಿಟಿಷ್ ಏರ್‌ವೇಸಿನ ೩೦೩ನೇ ಯಾನದಲ್ಲಿ ನ್ಯೂಯಾರ್ಕಿನಿಂದ ಲಂಡನ್ನಿಗೆ ಪ್ರಯಾಣಸುವಾಗ ಅದೃಷ್ಟ ಬಡಿದುಕೊಂಡಿತು. ನನ್ನ ಜೀವನಕ್ಕೊಂದು ಬಲವಾದ ಅದ್ಭುತವಾದ ತಿರುವನ್ನು ನೀಡಿತು. ಅದೊಂದು ಆಹ್ಲಾದಕರವಾದ ಪ್ರಯಾಣ. ಸ್ಕಾಟ್ಲೆಂಡ್ ಯಾರ್ಡಿನ ಆ ಇಬ್ಬರು ಸಿಪಾಯಿಗಳು ಕೆಟ್ಟವರೇನೂ ಆಗಿರಲಿಲ್ಲ. ಏರ್ ಹೋಸ್ಟೆಸ್ ನಮಗೆ ತಿನ್ನಲು ಕುಡಿಯಲು ಕೊಟ್ಟಾಗ ಅವರು ನನ್ನ ಕೋಳಗಳನ್ನು ಬಿಚ್ಚುತ್ತಿದ್ದರು. ನಾನು ವಿಮಾನದಿಂದ ಹೊರಗೆ ಹಾರಲಂತೂ ಸಾಧ್ಯವಿರಲಿಲ್ಲವಲ್ಲ!" ಉತ್ಸಾಹದಿಂದ ತನ್ನ ಜೊತೆಗಾತಿಯ ಕಡೆಗೆ ಕೈ ಬೀಸಿ ಮುಂದುವರಿಸಿದ: "ಬಹುಶಃ ನಮ್ಮ ವಿಮಾನ ಅಟ್ಲಾಂಟಿಕ್ ಸಾಗರದ ಮಧ್ಯಭಾಗದ ಮೇಲೆ ಹಾರುತ್ತಿದ್ದಿರಬೇಕು. ಆಗ ಚಾಲಕರಲ್ಲೊಬ್ಬ ನಮ್ಮ ಕಡೆಗೆ ನಡೆದುಬಂದ. ನಮ್ಮ ಕಡೆಗೆ ಮುಗುಳ್ನಕ್ಕು ಮುಂದುವರಿಯುವುದರಲ್ಲಿದ್ದಾಗ ಪ್ರಾಯಶಃ ನಮ್ಮ ಸಾಲಿನಲ್ಲಿ ಆಚೆಗಿದ್ದ ಅವನ ಸ್ನೇಹಿತನೊಬ್ಬ ಅವನಿಗೆ ಕಂಡಿರಬೇಕು. ಆ ಚಾಲಕ ಆತನ ಬಳಿಗೆ ಹೋಗಿ ಹಾರ್ದಿಕವಾಗಿ ಕೈ ಕುಲುಕಿ ತನ್ನ ವಾಚನ್ನು ನೋಡಿಕೊಂಡು, ಆತನ ಪಕ್ಕದಲ್ಲಿದ್ದ ಖಾಲಿ ಸೀಟೊಂದರಲ್ಲಿ ಕುಳಿತು ಹರಟೆಗೆ ತೊಡಗಿದ.

"ಸುಮಾರು ೫ ನಿಮಿಷಗಳ ನಂತರ ನಮ್ಮ ಎದುರಿನಲ್ಲಿದ್ದ ಫಸ್ಟ್ ಕ್ಲಾಸಿನಲ್ಲಿ ಏನೋ ಗಲಿಬಿಲಿ ಎದ್ದಂತೆ ಕಂಡುಬಂದಿತು. ನಮ್ಮ ಸಾಲಿನಲ್ಲಿ ಕುಳಿತು ಹರಟುತ್ತಿದ್ದ ಚಾಲಕ ಅದೇನೆಂದು ನೋಡಲು ಎದ್ದು ನಮ್ಮ ಎಕಾನಮಿ ಕ್ಲಾಸ್ ಮತ್ತು ಫಸ್ಟ್ ಕ್ಲಾಸ್‌ಗಳ ಮಧ್ಯದ ಬಾಗಿಲನ್ನು ತೆಗೆದುಕೊಂಡು ಹೊರಟನು. ನಾನು ಕುಳಿತೆಲ್ಲಿಂದ ಫಸ್ಟ್ ಕ್ಲಾಸ್ ಕ್ಯಾಬಿನ್ನಿನ ಒಳಭಾಗ ಕಾಣುತ್ತಿತ್ತು. ಒಡವೆಗಳ ಭಾರವನ್ನು ಹೊತ್ತ ಮಧ್ಯವಯಸ್ಕ ಅಮೆರಿಕನ್ ಮಹಿಳೆಯೊಬ್ಬಳು ಬ್ರಿಟಿಷ್ ಏರ್ ಹೋಸ್ಟೆಸ್ ಒಬ್ಬಳೊಡನೆ ವಾಗ್ಯುದ್ಧ ನಡೆಸಿದ್ದಳು. ಅವಳನ್ನು ಸಮಾಧಾನಪಡಿಸಲು ಹೋಸ್ಟೆಸ್ ಹೆಣಗಾಡುತ್ತಿದ್ದಳು, ಆದರೂ ಆ ಅಮೇರಿಕನ್ ಮಹಿಳೆ ತನ್ನ ಏರು ಧ್ವನಿಯಿಂದ ಕೂಗುತ್ತಲೇ ಇದ್ದಳು. ಒಂದು ನಿಮಿಷದ ನಂತರ ವಿಮಾನದ ಕ್ಯಾಪ್ಟನ್ ಎಂಜಿನ್ ಕ್ಯಾಬಿನ್ನಿನಿಂದ ಹೊರಬಂದು ತಾನೇ ಆ ಮಹಿಳೆಯನ್ನು ಸಮಾಧಾನಪಡಿಸಲು ಮತ್ತು ಅವಳ



"ಮೊದಲು ಕೋಲಾಟ ಆಡಿಸುವುದಕ್ಕೇ ಕರೆಸಿದ್ದು ಸಾರ್, ಆದರೆ ಮಧ್ಯ ಭಿನ್ನಾಭಿಪ್ರಾಯಗಳು ಬಂದು ...!"

ಸಮಸ್ಯೆಯೇನೆಂದು ತಿಳಿಯಲು ಪ್ರಯತ್ನಿಸತೊಡಗಿದನು."

ರಮ್ಮಿ ಪುನಃ ಪ್ರೈಸ್ ಚಪ್ಪರಿಸಿ, ಮುಂದುವರಿಸಿದ: "ಇದೇ ಸಂದರ್ಭದಲ್ಲಿ ಘಟನೆಗಳು ಒಂದರ ನಂತರ ಒಂದು ನಡೆದುಹೋದವು. ಎಂಜಿನ್ ಕ್ಯಾಬಿನ್ನಿನಲ್ಲಿದ್ದ ಇಬ್ಬರು ಸಹಾಯಕರಲ್ಲಿ ಒಬ್ಬ ಹೊರ ಬಂದು ಟಾಯ್ಲೆಟ್ ಹೊಕ್ಕನು. ಒಂದು ಕ್ಷಣ ಎಂಜಿನ್ ಕ್ಯಾಬಿನ್ನಿನಲ್ಲಿ ಒಬ್ಬನೇ ಸಹಾಯಕ ಚಾಲಕ ಉಳಿದಿದ್ದನು. ಅಷ್ಟರಲ್ಲೇ ಅವನಿಗೆ ಬಾಯಾರಿಕೆ ಎನಿಸಿರಬೇಕು. ಅವನು ವಿಮಾನವನ್ನು ಸ್ವಯಂಚಾಲನೆಗೆ ಹೊಂದಿಸಿ, ಎಂಜಿನ್ ಕ್ಯಾಬಿನ್ನಿನ ಹೊರಗೆ ಬಂದು ನೀರು ಕುಡಿಯಲು ತೊಡಗಿದ. ಈ ಎಲ್ಲ ಘಟನೆಗಳು ೩೦–೪೦ ಸೆಕೆಂದುಗಳ ಅವಧಿಯಲ್ಲಿ ಘಟಿಸಿದವು.

"ನಂತರ ನಡೆದುದನ್ನು ನಾನೆಂದೂ ಮರೆಯಲಾರೆ. ವಿಮಾನಯಾನದ ಇತಿಹಾಸದಲ್ಲೇ ನಡೆಯಲಾರದ ಒಂದು ಘಟನೆ ನಡೆದುಹೋಯಿತು. ನೀರು ಕುಡಿಯಲು ಹೊರಗೆ ಬಂದ ಸಹಾಯಕ ಚಾಲಕ ಹಿಂದಿರುಗುವಾಗ ನೋಡುತ್ತಾನೆ, ಎಂಜಿನ್ ಕ್ಯಾಬಿನ್ನಿನ ಬಾಗಿಲು ಮುಚ್ಚಿಬಿಟ್ಟಿದೆ. ಬಾಗಿಲು ತೆರೆಯಲು ಬರುತ್ತಿಲ್ಲ. ಆಟೋಮ್ಯಾಟಿಕ್ ಬೀಗ ಜಾರಿಬಿಟ್ಟಿತ್ತು.

"ಆತ ಜೋರಾಗಿ ಬಾಗಿಲನ್ನು ಬಡಿದ. ಬಹುಶಃ ಒಳಗೆ ಇರಬಹುದಾದ ಇನ್ನೊಬ್ಬ ಚಾಲಕ ಬಾಗಿಲನ್ನು ತೆಗೆಯಬಹುದೆಂದು ಅವನ ಊಹೆ. ಆದರೆ ತನ್ನ ಪಕ್ಕದಲ್ಲಿಯೇ ಆತನೂ ನಿಂತಿರುವುದನ್ನು ಕಂಡಾಗ ಹೌಹಾರಿದ.

"ಒಂದು ಕ್ಷಣ ಆ ಇಬ್ಬರೂ ಬಾಗಿಲು ತೆರೆಯಲು ಹೋರಾಡಿದರು. ಆದರೆ ಹೇಗೆ ಸಾಧ್ಯ? ಆ ವೇಳೆಗೆ ಕ್ಯಾಪ್ಟನ್ನನೂ ಉಳಿದೊಬ್ಬ ಚಾಲಕನೂ ಅಲ್ಲಿಗೆ ಬಂದಿದ್ದರು. ಅವರೆಲ್ಲರೂ ಒಟ್ಟಾಗಿ ಬಾಗಿಲನ್ನು ಒದ್ದರು; ಬಾಗಿಲಿನೊಂದಿಗೆ ಕುಸ್ತಿಯಾಡಿದರು. ಆದರೆ ಬಾಗಿಲು ಸ್ವಲ್ಪವಾದರೂ ಅಲುಗಲಿಲ್ಲ. ಇದೆಲ್ಲ ನಡೆಯುವಾಗ ವಿಮಾನ ಮಾತ್ರ ತಂತಾನೇ ಚಲಿಸುತ್ತಿತ್ತು."

ಆ ಭಯಂಕರ ಕ್ಷಣದ ಸ್ಮರಣೆಯಿಂದ ನನ್ನ ಹಣೆಯ ಮೇಲೆ ಬೆವರ ಹನಿ ಸಾಲುಗಟ್ಟಿದ್ದವು. ರಮ್ಮಿ ಮುಂದುವರಿಸಿದ: "ಮುಂದಿನದನ್ನು ಊಹಿಸುವುದೇನೂ ಕಷ್ಟವಲ್ಲ; ವಿಮಾನ ಯಾವ ಸ್ಥಿತಿಯಲ್ಲಿ ಚಲಿಸುತ್ತಿದೆ ಎಂಬ ಮಾತು ವಿಮಾನದ ತುಂಬ ಹರಡಿತು. ಜನರೆಲ್ಲ ಏನಾಗಿದೆ ಎಂಬುದನ್ನು ಅರಿಯಲು ಕ್ಯಾಬಿನ್ನಿನ ಎದುರ ಸುತ್ತುವರಿದರು. ಹೆಚ್ಚಿನ ಪ್ರಯಾಣಿಕರು ಉದ್ರಿಕ್ತರಾಗಿದ್ದರು. ಕೆಲವರು ಗುಂಪಾಗಿ ಬಾಗಿಲಿನೊಡನೆ ಹೋರಾಟ ನಡೆಸಿದ್ದರು. ವಿಮಾನದ ತುಂಬ ಗಾಬರಿ, ಹತಾಶ ಪರಿಸ್ಥಿತಿ ಆವರಿಸಿತು. ಬೇಗನೆ ಬಾಗಿಲನ್ನು ತೆರೆಯದಿದ್ದರೆ ನಾವೆಲ್ಲ ಅಟ್ಲಾಂಟಿಕ್ ಸಾಗರದಲ್ಲಿ ಜಲಸಮಾಧಿ ಹೊಂದುತ್ತಿದ್ದೆವು.

"ಪ್ರಯಾಣಿಕರು ಹಿಂದೆ ಮುಂದೆ ನುಗ್ಗಾಡುತ್ತಿದ್ದುದರಿಂದ ವಿಮಾನ ಕುಲುಕುತ್ತಿದ್ದಿತು. ವಿಮಾನದ ಸ್ಥಿತಿ ಏನಾಗಿತ್ತೆಂಬುದು ನನಗೂ ತಿಳಿದಿತ್ತು. ಒಂದು ನಿಮಿಷ ಕಾಲ ನಾನು ಮೌನವಾಗಿ ಕುಳಿತಿದ್ದೆ. ಸ್ಕಾಟ್ಲೆಂಡ್ ಯಾರ್ಡಿನ ನನ್ನ ಮಿತ್ರರೂ ನನ್ನನ್ನೇ ನೇರವಾಗಿ ನೋಡುತ್ತಿದ್ದರು. ಅವರ ಮನದಲ್ಲಿ ಏನು ನಡೆಯುತ್ತಿತ್ತೆಂಬುದೂ ನನಗೆ ತಿಳಿಯಿತು. ಪ್ರಪಂಚದಲ್ಲಿ ನಾನು ತೆರೆಯಲಾರದ ಬೀಗವೇ ಇಲ್ಲ ಎಂಬ ಯೋಚನೆ ಅವರ ಮನದಲ್ಲಿ ಮೂಡಿದಂತಿತ್ತು. ಅವರು ಪುನಃ ಪುನಃ ನನ್ನ ಕಡೆಗೆ ಆಶೆಗಣ್ಣುಗಳಿಂದ ನೋಡಿದರು. ನಾನೂ ಪ್ರಯತ್ನಿಸಲು ತಯಾರಾಗಿದ್ದೆ. ಅವರ ನೋಟವನ್ನರಿತು ನುಡಿದೆ, 'ಪ್ರತಿಫಲವಿಲ್ಲದೆ ನನ್ನ ಕೌಶಲ್ಯವನ್ನು ನಾನು ಬಳಸುವವನಲ್ಲ.' ಅವರಿಬ್ಬರೂ ಒಂದು ಕ್ಷಣ ಯೋಚಿಸಿ ನುಡಿದರು. 'ಬಾಗಿಲನ್ನು ನೀನು ತೆರೆದರೆ, ಈ ವಿಮಾನವನ್ನಿಳಿಯುವಾಗ ನೀನು ಸ್ವತಂತ್ರವಾಗಿರುವೆ.' 'ಸರಿ' ಎನ್ನುತ್ತಾ ನಾನು ಸವಾಲನ್ನು ಸ್ವೀಕರಿಸಿದೆ.

"ನಾವು ಮೂವರೂ ಕುಳಿತ ಸ್ಥಳದಿಂದ ಎದ್ದೆವು. ಹವರಿ ಕಂಗಾಲಾದ ಸ್ತ್ರೀಯರು. ಹತಾಶ

ಕೊಳ್ಳುತ್ತ ಬಾಗಿಲ ಬಳಿ ಬರುವ ವೇಳೆಗೆ ಕೆಲವು ನಿಮಿಷಗಳು ಕಳೆದವು. ಒಬ್ಬ ಸಿಪಾಯಿ ಕ್ಯಾಪ್ಟನ್ನನಿಗೆ ನನ್ನ ಬಗ್ಗೆ ಹೇಳಿದ. ಕ್ಯಾಪ್ಟನ್ ಮೈಕ್ ಮೂಲಕ ಪ್ರಯಾಣಿಕರಿಗೆಲ್ಲ ಕೆಲವೇ ಮಾತುಗಳಲ್ಲಿ ಅದನ್ನು ತಿಳಿಸಿದ. ಎಲ್ಲರಿಗೂ ಒಂದೇ ರೀತಿಯ ಸಮಾಧಾನ. ಈಗ ಎಲ್ಲರ ಕಣ್ಣೋಟವೂ ನನ್ನ ಕಡೆಗೇ ಇತ್ತು. ಪ್ರಪಂಚದಲ್ಲಿರುವ ಯಾವ ಬೀಗವನ್ನಾದರೂ ತೆರೆಯಬಲ್ಲ ಚತುರ ನಾನೆಂಬ ಪಿಸುಮಾತು ವಿಮಾನದಲ್ಲೆಲ್ಲ ಹರಡಿತು. ಸ್ಮಶಾನ ಮೌನ ಕವಿಯಿತು. ಪ್ರಯಾಣಿಕರು ಅಲ್ಲಲ್ಲೇ ಕುಳಿತರು. ವಿಮಾನದ ತೂಗಾಟ ನಿಂತಿತು."

ಒಂದು ಕ್ಷಣ ರಮ್ಮಿ ಸುಮ್ಮನಾಗಿಬಿಟ್ಟ. ಮುಂದೇನಾಯಿತೆಂಬುದನ್ನು ಅರಿವ ಉತ್ಸಾಹದಿಂದ ನಾನು ರಮ್ಮಿಯ ಕಡೆಗೆ ಬಾಗಿದೆ. ರಮ್ಮಿ ಮುಂದುವರಿಸಿದ: "ನನ್ನ ಜೀವನದ ಮಹತ್ವದ ಸವಾಲನ್ನು ನಾನು ಸ್ವೀಕರಿಸಿದ್ದೆ. ನನ್ನ ಜೀವವಷ್ಟೆ ಅಲ್ಲ. ಆ ವಿಮಾನದಲ್ಲಿದ್ದ ಮುನ್ನೂರಕ್ಕೂ ಹೆಚ್ಚು ಪ್ರಯಾಣಿಕರ ಬದುಕು ಸಾವುಗಳು ನನ್ನ ಕೈಚಳಕವನ್ನು ಅವಲಂಬಿಸಿದ್ದವು."

ಘಟನೆಗಳನ್ನು ಜ್ಞಾಪಿಸಿಕೊಳ್ಳುವಂತೆ ರಮ್ಮಿ ಮುಗುಳ್ನಕ್ಕು ಮುಂದುವರಿಸಿದ. "ಉತ್ತಮ ಬಟ್ಟೆಗಳನ್ನು ತೊಟ್ಟಿದ್ದ ಶ್ರೀಮಂತ ಮುದುಕನೊಬ್ಬ ಮುಂದೆ ಬಂದು 'ನಾನು ಲಡ್ವಿಗ್' ಎಂದು ಪರಿಚಯ ಹೇಳಿಕೊಂಡು 'ಮಗು, ನೀನು ಈ ಬೀಗವನ್ನು ಹಾರಿಸಿದರೆ ಖಂಡಿತ ನಿನ್ನ ಜೀವದಲ್ಲಿ ಎಂದೂ ಪಶ್ಚಾತ್ತಾಪಪಡಬೇಕಾಗುವುದಿಲ್ಲ' ಎಂದು ಹೇಳುತ್ತ ತನ್ನ ಜೇಬಿನಿಂದ ಚೆಕ್ ಬುಕ್ಕನ್ನು ಹೊರ ತೆಗೆದು 'ಎಷ್ಟು ಬರೆಯಲಿ?' ಎಂದು ಕೇಳಿದ. ನನಗೆ ಇಷ್ಟು ಎಂದು ಹೇಳಲೂ ತೋಚಲಿಲ್ಲ. ನಾನು ಮಾತಾಡುವ ಮೊದಲೇ ಆತ ಮುಗುಳ್ನಕ್ಕು, 'ಕೇಳು ಮಗು. ಪ್ರಪಂಚದ ಭಾರಿ ಶ್ರೀಮಂತರಲ್ಲಿ ನಾನೂ ಒಬ್ಬ. ಅರ್ಧ ಮಿಲಿಯನ್ ಡಾಲರ್, ಸಾಕೆ?' ಎಂದ. ನಾನು ಮೂಕನಂತೆ ತಲೆಯಾಡಿಸಿದೆ. ಮಾತ್ರೇನೂ ಮಾತನಾಡದೆ ಪಕ್ಕದಲ್ಲಿ ನಿಂತಿದ್ದ ಯುವತಿಯೊಬ್ಬಳಿಂದ ಒಂದು ಹೇರ್ ಪಿನ್ನು ಪಡೆದೆ. ನಾನು ಬೀಗವನ್ನು ಪರೀಕ್ಷಿಸಲು ಬಾಗಿದಾಗ ಎಲ್ಲರೂ ಉಸಿರು ಬಿಗಿ ಹಿಡಿದಿದ್ದರು. ಸರಿ. ಅದೊಂದು ವಿಚಿತ್ರ ಬೀಗವಾಗಿತ್ತು. ಆದರೆ ನನ್ನ ಪಾಲಿಗೆ ಅದರ ವೈಶಿಷ್ಟ್ಯವೇನೂ ಅಡ್ಡಿ ಬರಲಿಲ್ಲ. ಎರಡೇ ನಿಮಿಷಗಳೊಳಗಾಗಿ ಅದನ್ನು ಹಾರಿಸಿ ನಾನು ಬಾಗಿಲನ್ನು ತೆರೆದಿರಿಸಿದೆ."

"ಅದ್ಭುತ!" ನಾನು ಉತ್ಸಾಹದಿಂದ ನುಡಿದು "ಮುಂದೇನಾಯಿತು ?" ಎಂದು ಪ್ರಶ್ನಿಸಿದೆ.

---

"ಉದ್ರಿಕ್ತ ಚಪ್ಪಾಳೆಗಳು ಮೊಳಗತೊಡಗಿದವು. ಆ ಶ್ರೀಮಂತ ಮುದುಕ, ಲಡ್ವಿಗ್ ತನ್ನ ಮಾತಿನಂತೆಯೇ ಚೆಕ್ ಬರೆದು ಸಹಿ ಹಾಕಿ ನನ್ನ ಕೈಯಲ್ಲಿಟ್ಟ. ಮತ್ತೊಬ್ಬ ತನ್ನ ಟಾಪ್ ಹ್ಯಾಟನ್ನು ನನ್ನ ತಲೆಗೆ ಏರಿಸಿದ. ಇನ್ನೊಬ್ಬ ಎಲ್ಲರೆದುರಿನಲ್ಲಿಯೇ ತನ್ನ ಬೆಲೆಬಾಳುವ ಸೂಟನ್ನು ಕಳಚಿ ನನಗೆ ಕೊಟ್ಟ. ಮಗದೊಬ್ಬ ತನ್ನ ವಜ್ರಖಚಿತ ಟೈಪಿನ್ನು ಮತ್ತು ಕಫ್ ಲಿಂಕುಗಳನ್ನು ತೆಗೆದುಕೊಟ್ಟ. ತೋಸ್ಪೈಸಳೊಡನೆ ಜಗಳ ಮಾಡುತ್ತಿದ್ದ ಆ ಅಮೇರಿಕನ್ ಮಹಿಳೆ ನೇರವಾಗಿ ನನ್ನ ಬಳಿಗೆ ಬಂದು ನನ್ನ ಎರಡೂ ಕೆನ್ನೆಗಳನ್ನೂ ಚುಂಬಿಸಿದಳು. 'ನಾನು ಟೆಲಿಫೋನ್ ಮಾಡಿ ನನ್ನ ಮರ್ಸಿಡಿಸ್ ಕಾರನ್ನು ನಿಲ್ದಾಣಕ್ಕೆ ತರಿಸುತ್ತೇನೆ. ಅದನ್ನು ನೀವೇ ಉಪಯೋಗಿಸಿಕೋ. ನಿನಗೆ ನನ್ನ ಕಾಣಿಕೆ. ಅದು' ಎಂದಳು. ಕ್ಯಾಪ್ಟನ್ ಮತ್ತು ಸಿಬ್ಬಂದಿ ವರ್ಗದವರು ಹೃತ್ಪೂರ್ವಕವಾಗಿ ನನ್ನ ಕೈಕುಲುಕಿದರು. ನಾನೊಬ್ಬ ಹೀರೋ ಆಗಿಬಿಟ್ಟಿದ್ದೆ."

"ಆ ಮೇಲೆ?" ನಾನು ಪ್ರಶ್ನಿಸಿದೆ.

"ಮಾಡುವುದೇನು?" ತನ್ನ ಕಣ್ಣುಗಳಲ್ಲಿ ತುಂಟ ನಗೆಯನ್ನು ಸೂಚಿಸಿ ಕೇಳಿದ. "ನಾನು ಬಾತ್ ರೂಮಿಗೆ ಹೋಗಿ ನನ್ನ ಉಡುಗೆಗಳನ್ನು ಬದಲಿಸಿದೆ. ಮರ್ಸಿಡಿಸ್ ಕಾರಿನಲ್ಲಿ ಸೇವಕನೊಂದಿಗೆ ನಾನಂತೂ ಹರಕು ಬಟ್ಟೆಗಳಲ್ಲಿ ಹೋಗುವಂತಿರಲಿಲ್ಲವಲ್ಲ!" ✡

(ಇಲ್ಲಸ್ಟ್ರೇಟೆಡ ವೀಕ್ಲಿಯಲ್ಲಿ ಪ್ರಕಟವಾದ ಒಂದು ಇಂಗ್ಲೀಷ್ ಕಥೆಯ ಭಾವಾನುವಾದ)



## ಕುಶಲಮತಿಗಳ ಜನ್ಮರಹಸ್ಯ

ಮೂವತ್ತರ ಗಡಿ ದಾಟಿದ ನಂತರ ಮೊದಲ ಮಗುವನ್ನು ಪಡೆಯುವವರು ಸುದೈವಿಗಳಂತೆ. ಆ ಮಕ್ಕಳು ಕುಶಲಮತಿಗಳಾಗಿರುತ್ತಾರಂತೆ. ರಶಿಯದ ವಿಜ್ಞಾನಿಗಳ ತಂಡ ಈ ರೀತಿ ವರದಿಮಾಡಿದೆ. ಈ ವಿಜ್ಞಾನಿಗಳು ೨೦೦೦ ಕುಶಲಮತಿಗಳ ಜೀವನವನ್ನು ಅಭ್ಯಸಿಸಿದಾಗ ಆ ಪೈಕಿ ಶೇಕಡಾ ೮೦ ರಷ್ಟು ಜನರು ತಂದೆಯರು ತಮ್ಮ ಮೂವತ್ತರ ಗಡಿ ದಾಟಿದ ಮೇಲೆಯೇ ಹುಟ್ಟಿದವರಾಗಿದ್ದ ಅಂಶ ತಿಳಿದು ಬಂತು.

ಐನ್‌ಸ್ಟೈನ್ ಹುಟ್ಟಿದಾಗ ಆತನ ತಂದೆಗೆ ೩೨ ವರ್ಷ ವಯಸ್ಸು. ಮೊಜಾರ್ಟ್ ತನ್ನ ತಂದೆಯ ೩೭ ನೆಯ ವಯಸ್ಸಿಗೆ ಹುಟ್ಟಿದ. ಮೆಂಡೆಲ್ಸನ್ ಹುಟ್ಟಿದ್ದು ಆತನ ತಂದೆಯ ೩೩ ನೆಯ ಪ್ರಾಯದಲ್ಲಿ. ಗಯಟೆ ಜನಿಸಿದಾಗ ಆತನ ತಂದೆಗೆ ೩೯ ವರ್ಷ. ಕನ್‌ಫ್ಯೂಸಿಯಸ್ ತನ್ನ ತಂದೆಗೆ ೭೦ ವರ್ಷ ವಯಸ್ಸಾದಾಗ ಹುಟ್ಟಿದ.

ಈ ವಿಜ್ಞಾನಿಗಳು ಇದರಲ್ಲೇನೋ ಜೈವಿಕ ರಹಸ್ಯವಡಗಿರಬೇಕೆಂದು ನಂಬುತ್ತಾರೆ. ಅಂತೆಯೇ ತಂದೆಯ ಜ್ಞಾನದ, ಜಾಣ್ಮೆಯ ಅಂಶ ಮಗನಲ್ಲಿ ಇಳಿದು ಬರುತ್ತಿರಬೇಕೆಂಬುದು ಅವರ ಊಹೆ. ಇಲ್ಲಿ ತಾಯಿಯ ವಯಸ್ಸು ಗಣನೆಗೆ ಬರುವುದಿಲ್ಲ.

ಚಿಕಿತ್ಸಾ ವಿಧಾನಗಳ ಮುನ್ನೋಟ

# ಬರಲಿವೆ 'ಯುಕ್ತಿಣಿ ಗೋಲಿ'ಗಳು

**ಯಮುನಾಬಾಯಿ ಆರ್. ರಾವ್**

ರೋಗ ನಿವಾರಣೆಗಾಗಿ ಹೊಸ ಔಷಧಿಗಳನ್ನು ಕಂಡುಹಿಡಿಯುವುದು, ಹೊಸ ಹೊಸ ವಿಧಾನಗಳಲ್ಲಿ ಅವುಗಳನ್ನು ಪ್ರಯೋಗಿಸುವುದು ಮಾನವ ಸಮಾಜದಲ್ಲಿ ಒಂದೇ ಸಮನೆ ನಡೆಯುತ್ತಾ ಬಂದಿವೆ. ಆದರೆ ಇತ್ತೀಚಿನ ವರೆಗೂ ಹೊಸ ಔಷಧಿಗಳನ್ನು ಕಂಡುಹಿಡಿಯಲು ಅಂಥ ಪೂರ್ವನಿಯೋಜಿತ ಮಾರ್ಗಗಳನ್ನೇನೂ ಅನುಸರಿಸುತ್ತಿರಲಿಲ್ಲ. ಆದರ್ಶ ಔಷಧವೆಂದರೆ ದೇಹದ ರೋಗಗ್ರಸ್ತ ಕೋಶಗಳ ಮೇಲೆ ಮಾತ್ರ ಮತ್ತು ದೇಹದ ಮೇಲೆ ಆಕ್ರಮಣ ನಡೆಸುವ ಸೂಕ್ಷ್ಮ ಜೀವಿಗಳ ಮೇಲೆ ಪರಿಣಾಮವುಳ್ಳದ್ದಾಗಿರಬೇಕು. ದೇಹಕ್ಕೆ ಅದರಿಂದ ಮತ್ತೇನೂ ದುಷ್ಪರಿಣಾಮ ಆಗಬಾರದೆಂಬ ಭಾವನೆ ಇದ್ದರೂ ಅಂಥ ಔಷಧಗಳು ಇರಲಿಲ್ಲವೆಂದೇ ಹೇಳಬೇಕು. ಪೂರ್ವಯೋಜನೆ ಹಾಕಿಕೊಂಡು ಮದ್ದನ್ನು ನಿರ್ಮಿಸಲು ಹೊಸ ಜನರಲ್ಲಿ ಮೊದಲಿಗ ಪಾಲ್ ಎರ್ಲಿಖ್ (೧೮೫೪–೧೯೧೫). ಸಿಫಿಲಿಸ್ ರೋಗಕ್ಕೆ ಎಂದು ಹೊಸ ಮದ್ದನ್ನು ಸೃಜಿಸ ಹೊರಟ ಈತ ತನ್ನ ೬೦೬ನೆಯ ಪ್ರಯತ್ನದಲ್ಲಿ ಯಶಸ್ವಿಯಾಗಿ ೧೯೧೦ರಲ್ಲಿ ಸಾಲ್ವರ್ಸಾನ್-೬೦೬ ಎಂಬ ಔಷಧಿಯನ್ನು ಕಂಡುಹಿಡಿದ.

ಇದಾದ ಮೇಲೆ ಮೊದಲು ಸೂಕ್ಷ್ಮಜೀವಿಗಳು ಮತ್ತು ಪರೋಪ ಜೀವಿಗಳಿಂದ ಬರುವ ರೋಗಗಳಿಗಾಗಿ ಔಷಧಗಳು ಸಿದ್ಧವಾದವು. ಸಲ್ಫೋನಾಮೈಡ್, ಪೆನ್ಸಿಲಿನ್, ಸ್ಟ್ರೆಪ್ಟೊಮೈಸಿನ್ ಮುಂತಾದ ಜೀವಿರೋಧಿಗಳ ಒಂದು ದೊಡ್ಡ ಸಮೂಹವೇ ಬಳಕೆಗೆ ಬಂದಿತು. ಇವುಗಳಲ್ಲಿ ಸಲ್ಫೋನಮೈಡ್ ಮತ್ತು ಪೆನಿಸಿಲಿನ್ ಮಾತ್ರ ಆಕಸ್ಮಿಕವಾಗಿ ಪತ್ತೆಯಾದಂಥವು. ಉಳಿದವನ್ನು ಅನೇಕಾನೇಕ ಸೂಕ್ಷ್ಮಜೀವಿ ಪ್ರಯೋಗಗಳ ನಂತರ ಕಂಡುಹಿಡಿಯಲಾಯಿತು. ಪೆನ್ಸಿಲ್ಲಿನ ಕೆಲವು ಬ್ಯಾಕ್ಟೀರಿಯಗಳ ಮೇಲೆ ಮಾತ್ರ ಪರಿಣಾಮ ಪಡೆದಿದೆ. ಬೂಷ್ಟು ರೋಧಕಗಳು ಅಷ್ಟೆ. 'ವಿಶಾಲ ಲೋಹಿತ' ಜೀವಿರೋಧಿಗಳು ಅಷ್ಟು ನಿರ್ದಿಷ್ಟವಾಗಿ ಕೆಲವೇ ಸೂಕ್ಷ್ಮ ಜೀವಿಗಳ ಮೇಲೆ ಪರಿಣಾಮ ಬೀರುವುದಿಲ್ಲ. ಬದಲು, ಹೆಸರೇ ಸೂಚಿಸುವಂತೆ ವ್ಯಾಪಕ ಪರಿಣಾಮ ಉಳ್ಳವು.

ದೇಹದ ಜೀವ ಕ್ರಿಯೆಗಳ ಏರುಪೇರಿಗಾಗಿ ನಿರ್ದಿಷ್ಟವಾಗಿ ಪ್ರಯೋಗವಾಗುವ ಮದ್ದುಗಳಲ್ಲಿ ಇನ್ಸುಲಿನ್ ಮುಖ್ಯವಾದುದು. ನೋವು ಮರೆಸಲು ಕೊಡುವ ಮಾರ್ಫಿನ್ ಸಹ ಒಂದು ಸಿದ್ಧೌಷಧ.

ಹೀಗೆ ಅನೇಕ ಔಷಧಗಳು ಬಳಕೆಗೆಗೆ ಬಂದರೂ ಇವುಗಳಲ್ಲಿ ಅನೇಕ ಕೊರತೆಗಳಿದ್ದವು. ಈಗ ಮುಖ್ಯವಾದ ಔಷಧ ಪ್ರಯೋಗ ಮಾರ್ಗಗಳೆಂದರೆ ಅವನ್ನು ದ್ರವ ಇಲ್ಲವೇ ಗುಳಿಗೆ ರೂಪದಲ್ಲಿ ಹೊಟ್ಟೆಗೆ ಸೇವಿಸುವುದು ಮತ್ತು ಸೂಜಿ ಮದ್ದು ಕೊಡುವುದು. ಈ ವಿಧದ ಪ್ರಯೋಗದಿಂದ ದೇಹದಲಿ ಔಷದ ಪ್ರಮಾಣದ ಮಟ್ಟ ಏರುಪೇರಾಗು

ತ್ತಿರುತ್ತದೆ. ಎರಡನೆಯದಾಗಿ ಎಲ್ಲೋ ಇರುವ ತೊಂದರೆಗೆ ಇಡೀ ದೇಹವೇ ಔಷಧ ಪ್ರಯೋಗಕ್ಕೊಳಗಾಗುತ್ತದೆ. ಈ ಕುಂದುಗಳನ್ನು ಸರಿಪಡಿಸಲು ಎರಡು ಮಾರ್ಗಗಳಲ್ಲಿ ಸಂಶೋಧನೆ ನಡೆದಿದೆ.

ದೇಹದೊಳಗೆ ಯುಕ್ತ ಸ್ಥಾನದಲ್ಲಿ ಔಷಧವನ್ನು ನಿಕ್ಷೇಪವಾಗಿ ಹುದುಗಿಸಿಟ್ಟು ಅಲ್ಲಿಂದ ಅದು ದೇಹದಲ್ಲಿ ಬಿಡುಗಡೆ ಹೊಂದುವಂತೆ ಮಾಡುವುದು ಒಂದನೆ ವಿಧಾನ. ಇದರಿಂದ ಶರೀರದಲ್ಲಿ ಔಷಧದ ಮಟ್ಟ ಒಂದೇ ಸಮನಾಗಿರಲು ಸಾಧ್ಯ. ಇದುವರೆಗೆ ತಲುಪಲಾಗದಿದ್ದ ಕೆಲವು ಕ್ಷೇತ್ರಗಳಿಗೆ ಔಷಧದ ರವಾನೆಯಾಗಬಲ್ಲದು. ಕೆಲವು ಸಂದರ್ಭಗಳಲ್ಲಿ ಬೇಕಾದ ಅವಯವಕ್ಕೆ ಮಾತ್ರ ಔಷಧಿ ಸೇರುತ್ತದೆ. ಇದನ್ನು 'ನಿಕ್ಷಿಪ್ತ ಔಷಧ ವಿಧಾನ' ಎನ್ನಬಹುದು.

ಎರಡನೆಯದು 'ಕ್ಷಿಪಣಿ ವಿಧಾನ'. ಬೇಟೆನಾಯಿಗಳು ತಮ್ಮ ಶಿಕಾರಿ ಪ್ರಾಣಿಯ ವಾಸನೆಯ ಆಧಾರದ ಮೇಲೆ ಜಾಡುಹಿಡಿದು ಹುಡುಕಿ ಗುರುತಿಸುವಂತೆ ದೇಹದಲ್ಲಿ ತಮ್ಮ ತಮ್ಮ ಸ್ಥಾನವನ್ನು ಗುರುತಿಸಿ ಅಲ್ಲಿ ಮಾತ್ರ ಪರಿಣಾಮ ಕೊಡುವಂಥ ಔಷಧಿಗಳನ್ನು ಅಂದರೆ ಎರ್‌ಲಿಚ್ ವರ್ಣಿಸಿದ 'ಯಕ್ಷಿಣಿ ಗೋಲಿ' ಗಳನ್ನು ಸಿದ್ಧಪಡಿಸಲು ಪ್ರಯತ್ನ ನಡೆದಿದೆ.

'ನಿಕ್ಷಿಪ್ತ ಔಷಧ ವಿಧಾನ'ದ ಅತಿ ಸರಳ ಪ್ರಯೋಗ ೧೯೩೦ರಲ್ಲಾಯಿತು. ಮೊದಲು ಪರಿಶುದ್ಧವಾದ ಹಾರ್ಮೋನಿನ ಗುಳಿಗೆಗಳನ್ನು ಚರ್ಮದ ಕೆಳಗೆ ಸೇರಿಸಿ ಇಡುತ್ತಿದ್ದರು. ಬಳಿಕ ಸಿಲಿಕೋನ್ ರಬ್ಬರಿನ ಕೋಶಗಳು, ಅನಂತರ ವಿವಿಧ ಪಾಲಿಮರ್ ಕೋಶಗಳಲ್ಲಿ ಔಷಧಗಳನ್ನು ತುಂಬಿಸಿ ದೇಹದೊಳಗೆ ಸೇರಿಸುವುದು ಮೊದಲಾಯಿತು. ಕೆಲವು ಸಂದರ್ಭಗಳಲ್ಲಿ ಸ್ವಲ್ಪದೊಡ್ಡ ಸೂಜಿಯ ಮೂಲಕ ದೇಹದೊಳಗೆ ಸೇರಿಸಬಹುದಾದ ಅತಿ ಸಣ್ಣ ಪಾಲಿಮರ್ ಗೋಲಗಳನ್ನು ಉಪಯೋಗಿಸಿದ್ದಾರೆ. ಇವುಗಳಲ್ಲಿ ಹಾರ್ಮೋನಿನಿಂದ ತುಂಬಿಸಿದ ಸಿಲಿಕೋನ್ ರಬ್ಬರ ಕೋಶಗಳು ಸಂತಾನ ನಿರೋಧಕ್ಕೆ, ಪ್ರಾಸ್ಟೇಟ್ ಕ್ಯಾನ್ಸರ ಚಿಕಿತ್ಸೆಗೆ ಮತ್ತು ಪುರುಷರ ಟೆಸ್ಟೊಸ್ಟೆರೋನಿನ ಕೊರತೆಯಲ್ಲಿ ಒಳ್ಳೆ ಫಲ ತೋರಿಸಿವೆ. ಸಕ್ಕರೆ ಕಾಯಿಲೆಯವರಿಗೆ ಇನ್‌ಸುಲಿನ್, ರಕ್ತ ಅತಿಯಾಗಿ ಹೆಪ್ಪುಗಟ್ಟುವ ತೊಂದರೆಯವರಿಗೆ ಹೆಪ್ಯಾರಿನ್, ಅಫೀಮು ಚಟದವರಿಗೆ ನ್ಯಾಲೋಬೋನ್ ಎಂಬ ಸಂಯುಕ್ತ, ಕ್ಯಾನ್ಸರಗಾಗಿ ವಿವಿಧ ಸಂಯುಕ್ತಗಳನ್ನೂ ಈ ಮಾರ್ಗವಾಗಿ ಪ್ರಾಣಿಗಳಲ್ಲಿ ಪ್ರಯೋಗಿಸಿ ನೋಡುತ್ತಿದ್ದಾರೆ.

ಇದೇ ಜಾಡಿನಲ್ಲಿ ವಿಜ್ಞಾನಿಗಳು ಇನ್ನು ಮುಂದೆ ಹೋಗಿ ದೇಹದೊಳಗೆ ಹುದುಗಿಸಿ ಇಡಬಹುದಾದ ಟೈಟಾನಿಯಂ ಲೋಹದಿಂದ ತಯಾರಿಸಿದ ಪುಟ್ಟ ಪಂಪ್ ಎನ್ನಬಹುದಾದ ಒಂದು ಸಾಧನವನ್ನು ಸಿದ್ಧಪಡಿಸಿದ್ದಾರೆ. ಇದರಲ್ಲಿನ ಔಷಧಿ ನೇರವಾಗಿ ಯಾವುದಾದರೂ ಅಭಿಧಮನಿಗೋ ಅಪಧಮನಿಗೋ ಏರುಪೇರಿಲ್ಲದಂತೆ ಒಂದೇ ಸಮನೆ ಸೇರುತ್ತಿರುತ್ತದೆ. ಅಲ್ಲದೆ ಈ ಪಂಪಿನೊಳಗೆ ಔಷಧವನ್ನು ವೈದ್ಯರು ಆಗಾಗ್ಗೆ ಬೇಕಾದ ಪ್ರಮಾಣದಲ್ಲಿ ತುಂಬಿಸುತ್ತಿರಬಹುದು. ಅದರ ಪ್ರಮಾಣ ವೈದ್ಯರ ಹತೋಟಿಯಲ್ಲಿರುತ್ತದೆ.

ಹೆಪ್ಯಾರಿನ್ನನ್ನು ಆಗಲೇ ಎರಡು ವರ್ಷಗಳಿಂದ ಇಂಥ ಪಂಪಿನ ಮೂಲಕ ಮಾನವರಲ್ಲಿ ಪ್ರಯೋಗಿಸುತ್ತಿದ್ದಾರೆ. ಫಲಿತಾಂಶ ಆಶಾದಾಯಕವಾಗಿದೆ. ಸಕ್ಕರೆ ಕಾಯಿಲೆಯ ರೋಗಿಗೂ ಈ ಪಂಪು ಮುಂದೆ ಬಹಳ ಉಪಯುಕ್ತವಾಗಬಹುದು.

ಮಿದುಳಿನ ಒಳಭಾಗಕ್ಕೆ ಮತ್ತು ಮಿದುಳು ಬಳ್ಳಿಗೆ ಔಷಧ ಸೇರಿಸುವುದಕ್ಕೆ ನೆತ್ತಿಯ ಮೇಲೆ ಚರ್ಮದ ಕೆಳಗೆ ಹುದುಗಿಸಿಡಬಹುದಾದ ಸರಳ ಸಾಧನ ೧೯೬೩ರಿಂದ ಬಳಕೆಯಲ್ಲಿದೆ. ಸಾಮಾನ್ಯ ವಿಧಾನಗಳಿಂದ ಈ ಕ್ಷೇತ್ರಗಳಿಗೆ ಔಷಧ ರವಾನೆ ಬಹುಶಃ ಅಸಾಧ್ಯ. ಬೂಷ್ಟು ಸೋಂಕಿನಿಂದಾದ ಮೆನಿಂಜೈಟಿಸ್ ಮತ್ತು ಮಿದುಳಿನೊಳಗೆ ಕ್ಯಾನ್ಸರ್ ಕೋಶಗಳು ಅಡಗಿರುವ ಕೆಲವು ಲ್ಯುಕೀಮಿಯಾಗಳಲ್ಲಿ ಈ ವಿಧಾನ ಬಹು ಉಪಯುಕ್ತವಾಗಿದೆ.

ಇಂಥ ಹುದುಗಿಸಿಡುವ ವಿಧಾನಗಳು ಹೃದಯ ಬಡಿತದ ಅವ್ಯವಸ್ಥೆಯನ್ನು ಸರಿಪಡಿಸಲು ಕಸಿ ಮಾಡಿದ ಅಂಗಗಳ ವಿಸರ್ಜನೆಯನ್ನು ತಡೆಗಟ್ಟಲು ದೀರ್ಘಕಾಲದ ನೋವಿಗೆ ಪರಿಹಾರ ನೀಡಲು ಪಾರ್ಕಿನ್‌ಸನ್ನನ ಕಾಯಿಲೆಯಲ್ಲಿ ಡೋಪಾಮೈನನ್ನು ಮಿದುಳಿನ ನಿರ್ದಿಷ್ಟ ಭಾಗಗಳಿಗೆ ಒದಗಿಸಲು ಹಾಗೂ ಬೇಕಾದಲ್ಲಿ ಮಾತ್ರ, ಜೀವಿ

ಶೋಧಕಗಳನ್ನು ಒದಗಿಸಲು ಉಪಯೋಗವಾಗಬಹುದು.

ಜೀವಕೋಶದ ಅಂಗಗಳು ಮತ್ತು ಅದರಲ್ಲಿಯ ಸಂಯುಕ್ತಗಳ ಅಣು ರಚನೆಗಳು ಮತ್ತು ಚಟುವಟಿಕೆಗಳ ಮೇಲೆ ಹೆಚ್ಚು ಹೆಚ್ಚು ಬೆಳಕು ಬೀಳುತ್ತಾ ಹೋದಂತೆ 'ಕ್ಷಿಪಣಿ ಔಷಧಿ'ಗಳನ್ನು ನಿಯೋಜಿಸುವ ಪ್ರಯತ್ನಗಳೂ ಭರದಿಂದ ಮುನ್ನಡೆಯುತ್ತಿವೆ. ಇವುಗಳ ಉದ್ದೇಶ ರೋಗಕ್ಕೆ ಕಾರಣವಾದ ಪರೋಪಜೀವಿಗಳನ್ನೋ ಸೂಕ್ಷ್ಮ ಜೀವಿಗಳನ್ನೋ ಅಥವಾ ವೈರಸ್ಸುಗಳನ್ನೋ ರೋಗಿಷ್ಟಕೋಶಗಳನ್ನೋ ಮಾತ್ರ ನಾಶ ಮಾಡುವ ಔಷಧಿಗಳನ್ನು ತಯಾರಿಸುವುದು.

ಜೀವ ಪ್ರಪಂಚದ ಅತಿ ಸಣ್ಣ ಕಾರ್ಯಶೀಲ ಘಟಕವಾದ ಜೀವಕೋಶದ ನಿರಂತರ ಕಾರ್ಯನಿರತವಾಗಿರುತ್ತದೆ. ಇದರ ಪೊರೆಯ ಮೇಲ್ಮೈಯಲ್ಲಿ ಅಭಿಗ್ರಾಹಕ ಎಂಬ ದೊಡ್ಡ ಗಾತ್ರದ ಅಣುಜೀವಿಗಳು ತೇಲುತ್ತಿರುತ್ತವೆ. ಜೀವಕ್ರಿಯೆಗಳ ಫಲವಾಗಿ ಅಥವಾ ಅವುಗಳ ನಿರ್ವಹಣೆಗಾಗಿ ಉತ್ಪತ್ತಿಯಾಗುವ ಹಾರ್ಮೋನುಗಳು ಮತ್ತು ಇತರ ಪದಾರ್ಥಗಳ ಅಣುಗಳು ಕೋಶದ ಹತ್ತಿರ ಬಂದಾಗ ಅವು ನಿರ್ದಿಷ್ಟ ಅಭಿಗ್ರಾಹಕಗಳಿಗೆ ಸರಿಯಾಗಿ ಜೋಡಣೆಯಾಗುತ್ತವೆ. ಇದನ್ನು ಎರ್‌ಲಿಚ್ ತನ್ನ ಊಹಾಶಕ್ತಿಯ ಆಧಾರದ ಮೇಲೆ ಬೀಗಕ್ಕೆ ಬೀಗದ ಕೈ ಹೊಂದಿದಂತೆ ಎಂದು ವರ್ಣಿಸಿದ್ದ. ಈ ಜೋಡಣೆಯಾದ ಮೇಲೆ ಕೋಶದ ಒಳಭಾಗಕ್ಕೆ ಅಲ್ಲಿಂದ ಸಂದೇಶ ಹೋಗಿ ಕೋಶದ ಮೇಲೆ ಪರಿಣಾಮವಾಗುತ್ತದೆ. ನಿರ್ದಿಷ್ಟ ಅಭಿಗ್ರಾಹಕಗಳಿಗೆ ನಿರ್ದಿಷ್ಟ ಅಣುಗಳು ಜೋಡಣೆಯಾಗುವ ಈ ಗುಣವನ್ನು ಉಪಯೋಗಿಸಿ 'ಕ್ಷಿಪಣಿ' ಔಷಧಿಗಳನ್ನು ತಯಾರಿಸಬಹುದು.

ಈ ರೀತಿ ನಿರ್ದಿಷ್ಟ ಅಣುಗಳನ್ನು ತಮ್ಮೆಡೆಗೆ ತೆಗೆದುಕೊಳ್ಳುವ ಗುಣ ಕೆಲವು ಅಂಗಾಂಶಗಳ ಕೋಶಗಳಲ್ಲಿ ಅಂತರ್ಗತವಾಗಿರುತ್ತದೆ. ಉದಾಹರಣೆಗೆ ಪಿತ್ತ ಜನಕಾಂಗವು (ಈಲಿಯು) ತುದಿಯಲ್ಲಿ ಗ್ಯಾಲಾಕ್ಟೋಸ್ ಶರ್ಕರವನ್ನುಳ್ಳ ಗ್ಲೈಕೋ ಪ್ರೋಟೀನು ಅಣುಗಳನ್ನು ಅದು ಇಲ್ಲದ ಗ್ಲೈಕೋ ಪ್ರೋಟೀನು ಅಣುಗಳನ್ನು ಒಳತೆಗೆದುಕೊಳ್ಳುವು

ಒಳತೆಗೆದುಕೊಳ್ಳುತ್ತದೆ. ಔಷಧ ಅಣುವಿಗೆ ಗ್ಯಾಲಾಕ್ಟೋಸ್ ಶರ್ಕರವನ್ನು ತುದಿಯಲ್ಲಿ ಉಳ್ಳ ಗ್ಲೈಕೋ ಪ್ರೋಟೀನು ಅಣುವನ್ನು ಲಗತ್ತಿಸಿದರೆ ಅದು ಈಲಿಯಲ್ಲಿ ಬೇಗ ಹೋಗಿ ಸೇರುತ್ತದೆ.

ದೇಹದ ರಕ್ಷಣಾ ವ್ಯವಸ್ಥೆಯ ಅಂಗವಾಗಿ ಉತ್ಪಾದಿತವಾಗುವ ರೋಧಕ ವಸ್ತುಗಳಿಗೆ ಸಿದ್ಧೌಷಧಗಳ ಅಣುಗಳನ್ನು ಲಗತ್ತಿಸಿ ಮದ್ದನ್ನು ತಯಾರಿಸಿದರೆ ಅದು ನೇರವಾಗಿ ಆರೋಧಕ ವಸ್ತುವಿಗೇ ನಿರ್ದಿಷ್ಟವಾದ ರೋಧಜನಕವಿದ್ದಲ್ಲಿಗೆ ಪ್ರಯಾಣ ಮಾಡುತ್ತವೆ. ಕ್ಷಿಪಣಿ ಮದ್ದುಗಳ ಸಂಶೋಧನೆಯಲ್ಲಿ ಇದು ಒಂದು ಮಾರ್ಗ.

ಹಾರ್ಮೋನುಗಳಿಗೂ ಹೀಗೆಯೇ ನಿರ್ದಿಷ್ಟ ಅಭಿಗ್ರಾಹಕಗಳಿರುವುದರಿಂದ ಅವನ್ನು ಹೀಗೆ ಸಿದ್ಧೌಷಧಗಳನ್ನು ಬೇಕಾದಲ್ಲಿಗೆ ಕೊಂಡೊಯ್ಯುವ ವಾಹಕಗಳಾಗಿ ಉಪಯೋಗಿಸಬಹುದು. ಇಂಥ ಸಂದರ್ಭಗಳಲ್ಲೂ ಈ ವಾಹಕ ಪದಾರ್ಥವು ಸಿದ್ಧೌಷಧಕ್ಕೆ ಮಾರ್ಗದರ್ಶಿಯಾಗಿ ಬೇಕಾದ ಸ್ಥಳ ತಲುಪಿದಾಗ ಔಷಧವನ್ನು ಬಿಟ್ಟುಕೊಡುವಂತೆ ಇರಬೇಕು.

ಮೂರನೆಯದಾಗಿ ಲೈಪೋಸೋಮುಗಳೆಂಬ ಜಿಡ್ಡಿನ ಸೂಕ್ಷ್ಮ ಗೋಲಗಳನ್ನು ಈ ರೀತಿಯ ವಾಹಕಗಳಾಗಿ ಉಪಯೋಗಿಸಿದ್ದಾರೆ. ಫಾಸ್ಫೋಲಿಪಿಡ್‌ಗಳು ರಂಜಕವುಳ್ಳ ಜಿಡ್ಡಿನ ಪದಾರ್ಥಗಳು ನೀರು ಮತ್ತು ದ್ರಾವಣಗಳ ಮೇಲೆ ಇವು ತೆಳ್ಳನೆ ಪೊರೆಗಳಾಗಿ ಹರಡುತ್ತವೆ. ಈ ಪೊರೆಗಳನ್ನು ಮೆಲ್ಲನೆ ಕುಲುಕಿದಾಗ ಈರುಳ್ಳಿಯಂತಹ ರಚನೆಗಳಾಗುತ್ತವೆ. ಮಧ್ಯೆ ನೀರಿರುವ ಜಿಡ್ಡಿನ ಪದರಗಳು ಇವುಗಳಲ್ಲಿ ಇರುತ್ತವೆ. ಮಧ್ಯೆ ನೀರಿದ್ದು ಅದರ ಸುತ್ತ ಎರಡು ಪದರದ ಒಂದೇ ಒಂದು ಜಿಡ್ಡಿನ ಹೊದಿಕೆ ಇರುವಂಥ ಅತಿ ಸಣ್ಣ ಪುಟ್ಟ ಗೋಲಕವನ್ನೂ ಇವುಗಳಿಂದ ತಯಾರಿಸಲು ಸಾಧ್ಯ. ಇವುಗಳೊಳಗೆ ಔಷಧವನ್ನು ಸೇರಿಸಬಹುದು. ಎಲ್ಲ ವಿವಿಧ ಲೈಪೋಸೋಮುಗಳಿಗೂ ಶರೀರದಲ್ಲಿ ನಿರ್ದಿಷ್ಟ ಗಮ್ಯ ಸ್ಥಾನಗಳಿರುವುದಿಲ್ಲ. ನಿರ್ದಿಷ್ಟ ಗಮ್ಯ ಸ್ಥಾನಗಳಿರುವ ಫಾಸ್ಫೋಲಿಪಿಡ್ಡುಗಳಿಂದ ತಯಾರಾದ ಲೈಪೋಸೋಮುಗಳು ಕ್ಷಿಪಣಿ ಮದ್ದುಗಳಾಗಬಲ್ಲುವು.

ಯಾಸಿಸ್ ಅಥವಾ ಕಾಲಾಅಜಾರ್ (ಕಾಳಮಾರಿ ಜ್ವರ) ರೋಗದ ಚಿಕಿತ್ಸೆಗೆ ಇಂಥ ಮದ್ದುಗಳನ್ನು ಉಪಯೋಗಿಸುತ್ತಿದ್ದಾರೆ. ಈ ಕಾಯಿಲೆಯಲ್ಲಿ ಪರೋಪಜೀವಿಗಳು ಗುಲ್ಮದಲ್ಲಿ ನೆಲಸುತ್ತವೆ. ಮತ್ತು ಗುಲ್ಮ ಮತ್ತು ಈಲಿ (ಪಿತ್ತಜನಕಾಂಗ) ಗಳು ದೊಡ್ಡದಾಗುತ್ತವೆ. ಇದಕ್ಕೆ ವಿಷಪದಾರ್ಥಗಳಾದ ಆ್ಯಂಟಿಮೊನಿ ಸಂಯುಕ್ತಗಳೇ ಔಷಧಿಗಳು. ಲೈಪೋಸೋಮುಗಳಲ್ಲಿ ಇವನ್ನು ತುಂಬಿ ಉಪಯೋಗಿಸಿದರೆ ಶರೀರದ ಮೇಲೆ ಈ ವಿಷ ಪರಿಣಾಮಗಳು ಕಡಿಮೆಯಾಗುತ್ತವೆ. ಗುಲ್ಮ ಮತ್ತು ಈಲಿಗಳಿಗೆ ಹೋಗಿಸೇರುವ ಲೈಪೋಸೋಮುಗಳನ್ನು ಈ ಸಂದರ್ಭದಲ್ಲಿ ಉಪಯೋಗಿಸುತ್ತಾರೆ. ಪೂರ್ವ ಏಷ್ಯಾ, ದಕ್ಷಿಣ ಫ್ರಾನ್ಸ ಮತ್ತು ಲ್ಯಾಟಿನ್ ಅಮೇರಿಕೆಗಳಲ್ಲಿ ಸುಮಾರು ೧೦೦ ಮಿಲಿಯನ್ ಜನರು ಇದರಿಂದ ನರಳುತ್ತಾರೆ. ಈ ಹೊಸ ಚಿಕಿತ್ಸೆಯಿಂದ ಇಂಥವರಲ್ಲಿ ಶೇಕಡಾ ನೂರು ಜನ ಗುಣವಾಗುವ ಸಾಧ್ಯತೆಯಿದೆಯೆಂದು ಹೇಳುತ್ತಾರೆ.

ವಿಕಿರಣಪಟು ಸಂಯುಕ್ತಗಳಿಂದ ಕೂಡಿದ ಲೈಪೋಸೋಮುಗಳು ಈಲಿ ಮತ್ತು ಗುಲ್ಮಗಳ ಕ್ಯಾನ್ಸರಿನ ಎಕ್ಸರೇ ಚಿತ್ರತೆಗೆಯಲು ತುಂಬ ಉಪಯುಕ್ತವಾಗಿವೆ.

ಲೈಪೋಸೋಮುಗಳ ಗಾತ್ರ ಹೆಚ್ಚು ಕಡಿಮೆ ಮಾಡುವುದರಿಂದ ಇವು ತಲುಪುವ ಸ್ಥಳ ಹೆಚ್ಚು ಕಡಿಮೆ ಮಾಡಲು ಸಾಧ್ಯವಾಗುವುದು. ಇವು ಅತಿ ಸೂಕ್ಷ್ಮವಾಗಿದ್ದರೆ ಲೋಮನಾಳಗಳಲ್ಲಿ ಚಲಿಸಿ ದೇಹದ ಎಲ್ಲ ಮೂಲೆಗಳಿಗೂ ಹೋಗುತ್ತವೆ. ಸ್ವಲ್ಪ ದೊಡ್ಡವು ಫುಪ್ಪುಸಗಳಲ್ಲೇ ಉಳಿದುಕೊಳ್ಳುತ್ತವೆ.

ಇವುಗಳಲ್ಲಿ ಇನ್‌ಸುಲಿನ್ ಸೇರಿಸಿ ಆ ಮೂಲಕ ಇನ್‌ಸುಲಿನನ್ನು ಸೂಜಿ ಮದ್ದಿನ ಬದಲು ನೇರವಾಗಿ ಹೊಟ್ಟೆಗೆ ನೀಡಬಹುದಾದಂತೆ ಮಾಡಬಹುದೇ ಎಂದು ಪರೀಕ್ಷಿಸುತ್ತಿದ್ದಾರೆ.

ದುಗ್ಧನಾಳವ್ಯೂಹ (ಲಿಂಫ್ ವ್ಯವಸ್ಥೆ) ಮತ್ತು ಈಲಿಗಳ ಕ್ಯಾನ್ಸರ್ ಚಿಕಿತ್ಸೆಗಾಗಿ ಕ್ಯಾನ್ಸರ್ ಔಷಧಿಗಳನ್ನು ದೇಹದಲ್ಲಿ ಜೀರ್ಣವಾಗಿ ಹೋಗುವಂಥ ವಾಹಕ ಪದಾರ್ಥಗಳಿಗೆ ತಗುಲಿಸಿ ಉಪಯೋಗಿಸಬೇಕೆಂದಿದ್ದಾರೆ. ಇಂಥವುಗಳಿಗೆ ಲೈಸೋಟ್ರೋಪಿಕ್ ಮದ್ದುಗಳೆಂದು ಹೆಸರು. ದುಗ್ಧನಾಳ ವ್ಯೂಹ ಇವನ್ನು ಆವರಿಸಿಕೊಂಡು ಬಿಡುತ್ತವೆ.

ಶರೀರಕ್ಕೆ ತಾತ್ಕಾಲಿಕವಾಗಿ ಹೆಚ್ಚಾದ ಕಾರ್ಬೋಹೈಡ್ರೇಟು ದೇಹದಲ್ಲಿ ಗ್ಲೈಕೋಜನ್ ಎಂಬ ಜಟಿಲ ರಚನೆಯ ಪಿಷ್ಟ ರೂಪದಲ್ಲಿ ಸಂಗ್ರಹವಾಗುತ್ತದೆ. ಇದೊಂದು ರೀತಿ ಆಪ್ತ ದಾಸ್ತಾನು. ನಿರೋಗಿಗಳಲ್ಲಿ ಆಲ್ಫ ಗ್ಲೂಕೊಸಿಡೇಸ್ ಎಂಬ ಎಂಜೈಮು ಇದನ್ನು ಗ್ಲೂಕೋಸಿಗೆ ಪರಿವರ್ತಿಸಿ ಆ ಮೂಲಕ ಅದು ದೇಹಕ್ಕೆ ಉಪಯೋಗವಾಗುವಂತೆ ಮಾಡುತ್ತದೆ. ಪಾಂಪೆ ಕಾಹಿಲೆ ಎಂಬ ತೊಂದರೆ ಇರುವವರ ಶರೀರದಲ್ಲಿ ಈ ಎಂಜೈಮು ಇರುವುದಿಲ್ಲ. ಅವರಲ್ಲಿ ಗ್ಲೈಕೊಜೆನ್ ಸಂಗ್ರಹವಾಗುತ್ತ ಹೋಗಿ ರೋಗಿಯ ಸ್ನಾಯು ರಜ್ಜುಗಳು ನಲುಗಿ ಹೋಗುತ್ತವೆ. ಈ ಕಾಯಿಲೆಯವರಿಗೆ ಎಂಜೈಮನ್ನು ಕೊಟ್ಟರೆ ಅದು ಸೀದಾ ಅವರ ಯಕೃತ್ತಿಗೇ ಹೋಗುವುದರಿಂದ ಯಥಾ ಪ್ರಕಾರ ಸ್ನಾಯು ರಜ್ಜುಗಳು ನಲುಗುತ್ತಲೇ ಹೋಗುತ್ತವೆ. ಆದರೆ ಜಿಡ್ಡು ಮತ್ತು ಕೊಲೆಸ್ಟರಾಲುಗಳನ್ನು ಶರೀರದ ವಿವಿಧ ಎಡೆಗಳಿಗೆ ಕೊಂಡೊಯ್ಯುವ ಹಗುರವಾದ ಲೈಪೋಪ್ರೋಟೀನೊಂದಕ್ಕೆ ಈ ಎಂಜೈಮನ್ನು ಜೋಡಿಸಿದಾಗ ಅದು ದೇಹದ ಬೇರೆ ಎಡೆಗಳಲ್ಲೂ ಹೋಗಿ ಸೇರುತ್ತದೆ. ಈ ವಿಧಾನ ಇನ್ನೂ ಪ್ರಯೋಗಾವಸ್ಥೆಯಲ್ಲಿದೆ.

ಸೂಜಿಗಲ್ಲಿನ ಸಹಾಯದಿಂದ ಔಷಧಗಳನ್ನು ದೇಹದಲ್ಲಿ ಬೇಕೆಂದೆಡೆಗೆ ಒಯ್ಯುವ ಪ್ರಯತ್ನಗಳೂ ನಡೆಯುತ್ತಿವೆ. ಶಬ್ದಾತೀತ ಅಲೆಗಳ ಸಹಾಯದಿಂದ ಮನುಷ್ಯನ ಕೆಂಪುರಕ್ತ ಕಣದ ೧/೫ ರಷ್ಟು ಅಳತೆಯ ಅತಿಸೂಕ್ಷ್ಮವಾದ ಅಲ್ಬುಮಿನ್ ಗೋಲಗಳನ್ನು ತಯಾರಿಸಿ ಅವುಗಳಲ್ಲಿ ಬೇಕಾದ ಔಷಧ ಮತ್ತು ಮ್ಯಾಗ್ನೆಟೈಟು (ಕಬ್ಬಿಣದ ಆಕ್ಸೈಡು)ಗಳನ್ನು ಸೇರಿಸಲಾಯಿತು. ಮ್ಯಾಗ್ನೆಟೈಟಿನಿಂದ ದೇಹಕ್ಕೆ ಏನೂ ಅಪಾಯವಾಗುವುದಿಲ್ಲ. ಈ ಪದಾರ್ಥವನ್ನು ರಕ್ತನಾಳದಲ್ಲಿ ಒಳಸೇರಿಸಿ ಯಾವ ಕ್ಷೇತ್ರಕ್ಕೆ ಔಷಧ ಅಗತ್ಯವಿದೆಯೋ ಆ ಭಾಗದ ಮೇಲೆ ಕಾಂತವನ್ನು ಹಿಡಿದಾಗ ರಕ್ತದಲ್ಲಿ ಚಲಿಸುತ್ತಿರುವ ಈ ಸೂಕ್ಷ್ಮ ಗೋಲಗಳು ಅಲ್ಲಿಯೇ ನಿಂತು ಅಲ್ಲಿಯ ಸುತ್ತಮುತ್ತಲೋ ಮಾರಕನಾಶಗಳ ಮಧ್ಯದಲ್ಲೋ

ವನ್ನು ಬಿಟ್ಟುಕೊಟ್ಟವು. ಇಲ್ಲಿ ಉಪಯೋಗಿಸಿದ ಔಷಧ ಪ್ರಮಾಣ ಸಾಮಾನ್ಯವಾಗಿ ಉಪಯೋಗಿಸುವುದಕ್ಕಿಂತ ೧೦೦ಪಟ್ಟು ಕಡಿಮೆ ಇತ್ತು.

ರೋಧಕ ವಸ್ತುಗಳು ಅತಿನಿಷ್ಕೃಷ್ಟವಾಗಿ ತಮಗೇ ವಿಶಿಷ್ಟವಾದ ಕೋಶಗಳಿಗೆ ಹೋಗಿ ತಗುಲಿಕೊಳ್ಳುವುದರಿಂದ ಉತ್ತಮ ಔಷಧ ವಾಹಕಗಳಾಗಬಲ್ಲವು. ಆದರೆ ವ್ಯಕ್ತಿಗಳ ಉಪಯೋಗಕ್ಕಾಗಿ ಅವನ್ನು ಮನುಷ್ಯ ರಕ್ತದಿಂದಲೇ ಪಡೆಯಬೇಕು. ಹೀಗೆ ಅತಿ ಸ್ವಲ್ಪ ರೋಧಕ ಪದಾರ್ಥ ಮಾತ್ರ ಸಿಗುತ್ತದೆ. ಪ್ರಯೋಗಶಾಲೆಯಲ್ಲಿ ಇವನ್ನು ಉತ್ಪಾದಿಸಲು ಪ್ರಾಣಿ ಪ್ರಯೋಗಗಳು ನಡೆದಿವೆ. ಇಲಿಗಳಲ್ಲಿ ರೋಧಕ ವಸ್ತುಗಳು ಉತ್ಪಾದನೆಯನ್ನು ಪ್ರಚೋದಿಸಿ ಬಳಿಕ ದೇಹದ ಪ್ರಮುಖ ವಿರೋಧ ವಸ್ತುಗಳ ಉತ್ಪಾದನಾ ಕ್ಷೇತ್ರವಾದ ಗುಲ್ಮವನ್ನು ಹೊರತೆಗೆದು ಅದರ ಉತ್ಪಾದನಾಕೋಶಗಳನ್ನು ಕ್ಯಾನ್ಸರ್‌ಕೋಶಗಳೊಡನೆ ಬೆರೆಸಿ ಇಟ್ಟರು. ಆಗ ಬಂದ ಮಿಶ್ರಕೋಶ ತಳಿಗಳು ರೋಧಕ ವಸ್ತು ಉತ್ಪಾದನಾಸಾಮರ್ಥ್ಯವನ್ನೂ ಪಡೆದಿದ್ದುವು. ಅಲ್ಲದೆ ಕ್ಯಾನ್ಸರ್ ಕೋಶಗಳಂತೆ ಯಾವ ಎಡೆತಡೆಯೂ ಇಲ್ಲದೆ ನಿರಂತರವಾಗಿ ಸಂತಾನ ವೃದ್ಧಿ ಮಾಡುತ್ತ ಶಕ್ತಿಯನ್ನೂ ಪಡೆದಿದ್ದುವು. ಈ ಕೋಶಗಳಿಗೆ ಹೈಬ್ರಿಡೋಮಾಗಳೆನ್ನುತ್ತಾರೆ. ಇವು ರೋಧಕ ವಸ್ತುಗಳ ಮಿನಿ ಫ್ಯಾಕ್ಟರಿಗಳಾಗು ಸಂಭವವಿದೆ. ಹಾಡ್ಜಕಿನ್ನನ ಕಾಯಿಲೆ ಎಂಬ ಕ್ಯಾನ್ಸರಿನಿಂದ ನರಳುವ ಗುಲ್ಮವನ್ನು ಚಿಕಿತ್ಸೆಯ ಅಂಗವಾಗಿ ಹೊರ ತೆಗೆಯಬೇಕಾಗುತ್ತದೆ. ಅಂತಹ ಗುಲ್ಮಕೋಶಗಳನ್ನು ಪ್ರಯೋಗಿಸಿ ಮಾನವ ಹೈಬ್ರಿಡೋಮಗಳನ್ನು ನಿರ್ಮಿಸುವ ಪ್ರಯತ್ನಗಳೂ ನಡೆದಿವೆ.

ಅಲರ್ಜಿಯನ್ನುಂಟು ಮಾಡುವ ಹಿಸ್ಟಮೀನ್ ಜಠರರಸದ ಸುರಿತವನ್ನೂ ಹೆಚ್ಚಿಸುತ್ತದೆ. ಆದರೆ ಅಲರ್ಜಿಗಾಗಿ ಕೊಡುವ ಮದ್ದುಗಳು ಹಿಸ್ಟಮೀನಿಗೆ ಪ್ರತಿಯಾಗಿ ಕೆಲಸ ಮಾಡಿದರೂ ಅವುಗಳಿಂದ ಜಠರದ ಅಂತಃಸ್ರಾವದ ಮೇಲೆ ಏನೂ ಪರಿಣಾಮ ವಾಗುವುದಿಲ್ಲ. ಅಲರ್ಜಿಗೆ ಕಾರಣವಾಗುವಾಗ ಹಿಸ್ಟಮೀನ್ ತಗುಲಿಕೊಳ್ಳುವ ಅಭಿಗ್ರಾಹಕಗಳೆ ಬೇರೆ ಜಠರದ ಸ್ರಾವ ಹೆಚ್ಚಿಸುವಾಗ ಜಠರಕೋಶಗಳಲ್ಲಿ ತಗಲಿಕೊಳ್ಳುವ ಅಭಿಗ್ರಾಹಕಗಳೇ ಬೇರೆ ಎಂದು ತಜ್ಞರು ಅನುಮಾನಿಸಿದರು. ಜಠರದ ಕೋಶಗಳಿಗೆ ತಗುಲಿಕೊಳ್ಳಬೇಕು, ಆದರೆ ಅವುಗಳೊಳಗೆ ಆಮ್ಲದ ಉತ್ಪಾದನೆಗೆ ಸಂದೇಶ ಕಳುಹಿಸಬಾರದು ಆ ರೀತಿಯಲ್ಲಿ ಹಿಸ್ಟಮೀನಿನ ಅಣುವನ್ನು ಪ್ರಯೋಗಶಾಲೆಯಲ್ಲಿ ಬದಲಾಯಿಸಿದರು. ಇದಕ್ಕಾಗಿ ೭೦೦ ಕ್ಕೂ ಹೆಚ್ಚು ಸಂಯುಕ್ತಗಳನ್ನು ಸಂಶ್ಲೇಷಿಸಬೇಕಾಯಿತು. ಈ ಔಷಧದಿಂದ ಎಷ್ಟೋ ಜನರಿಗೆ ಜಠರದ ಹುಣ್ಣುಗಳು ವಾಸಿಯಾಗಿವೆ. ಇವರಲ್ಲಿ ಎಷ್ಟೋ ಜನ ಈ ಔಷಧಿಯಿಲ್ಲದಿದ್ದರೆ ಶಸ್ತ್ರಕ್ರಿಯೆಯನ್ನೆದುರಿಸಬೇಕಾಗುತ್ತಿತ್ತು.

ಹೀಗೆ ಇನ್ನೂ ಉತ್ತಮ ಔಷಧಗಳಿಗಾಗಿ ಶೋಧ ನಡೆಸುತ್ತಲೇ ಇದೆ. ಕಳೆದ ಶತಮಾನದಿಂದ ವಿಜ್ಞಾನ ಮುನ್ನಡೆದು ಎಷ್ಟೋ ರೋಗಗಳ ನಿವಾರಣೆಯಾದಂತೆ ಅದುವರೆಗೆ ವಾಸಿಯಾಗುವುದೇ ಇಲ್ಲ ಎಂದುಕೊಂಡಿದ್ದ ಇನ್ನೂ ಮೂಲಭೂತ ಕಾರಣಗಳಿಂದ ಬರುವ ರೋಗಗಳು ಈ ರಂಗದ ಮುನ್ನೆಲೆಗೆ ಬರುತ್ತಿವೆ. ಉದಾಹರಣೆಗೆ ರ್ಹ್ಯೂಮಟಾಯಿಡ್ ಆರ್ಥೈಟಿಸ್ ನಂಥ ಆಟೋ ಇಮ್ಯೂನ್ ಕಾಯಿಲೆಗಳು, ವಿವಿಧ ಕ್ಯಾನ್ಸರ್‌ಗಳು, ಮಿದುಳಿನ ರೋಗಗಳು ಗ್ಲೈಕೋಜೆನ್ ಮತ್ತು ಜಿಡ್ಡುಗಳ ಶೇಖರಣೆಯಲ್ಲಿ ಏರುಪೇರಾಗಿ ಬರುವ ಕಾಯಿಲೆಗಳು ಇತ್ಯಾದಿ. ಇವುಗಳಿಗೂ ಸದ್ಯದಲ್ಲಿಯೇ ಪರಿಹಾರ ಸಿಗಬಹುದು. ವಿಜ್ಞಾನಿಗಳ ಜ್ಞಾನದಾಹ ಈ ಕ್ಷೇತ್ರದಲ್ಲಂತೂ ಜನಕಲ್ಯಾಣದಲ್ಲಿ ಪರ್ಯವಸಾನವಾಗುತ್ತದೆಯೆಂದು ನಿಶ್ಶಂಕೆಯಿಂದ ಹೇಳಬಹುದು. ✡



# ಶೇಖ ಮುಜೀಬರ ರಹಸ್ಯಮಯ ಕೊಲೆ

ಎಂ. ಡಿ. ರಾಣೆ

೧೫ ಆಗಸ್ಟ ೧೯೭೫. ಇನ್ನೂ ಕತ್ತಲೆಯಿತ್ತು. ಮುಂಜಾನೆಯ ಬೆಳಕು ದುಃಖದಿಂದ ತಪ್ತವಾಗಿ ಸಾವಕಾಶವಾಗಿ ಸಾಗಿ ಬರುತ್ತಿತ್ತು. ಗುಂಡುಗಳ ಸಪ್ಪಳದ ಅಬ್ಬರದಿಂದ ಢಾಕಾ ಪಟ್ಟಣ ಎಚ್ಚರವಾಯಿತು. ಢಾಕಾ ಆಕಾಶವಾಣಿ ಕೇಂದ್ರದಿಂದ ಮೇಜರ್ ದಾಲಿಮರು ಘೋಷಣೆ ಮಾಡುತ್ತಿದ್ದರು: "ಸೈನಿಕ ಕ್ರಾಂತಿಯ ಮೂಲಕ ಮುಜೀಬರ ಸತ್ತೆಯನ್ನು ಕೊನೆಗೊಳಿಸಲಾಗಿದೆ. ಬಾಂಗಲಾ ದೇಶದ ಹೆಸರನ್ನು 'ಇಸ್ಲಾಮಿಕ್ ರಿಪಬ್ಲಿಕ್ ಆಫ್ ಬಾಂಗ್ಲಾ ದೇಶವೆಂದು ಬದಲಾಯಿಸಲಾಗಿದೆ." ಇತ್ಯಾದಿ. ಮುಂಜಾನೆ ಏಳು ಗಂಟೆಯ ಸುದ್ದಿಯಲ್ಲಿ ಮುಜೀಬ್ ಮತ್ತು ಅವರ ಕುಟುಂಬದ ಸದಸ್ಯರ ಹತ್ಯಾಕಾಂಡದ ಬಗ್ಗೆ ಬಿತ್ತರಿಸಲಾಯಿತು. ವಾಣಿಜ್ಯ ಮಂತ್ರಿಯಾಗಿದ್ದ ಖೋಂಡಕರರು ಮುಜೀಬರ ಸ್ಥಾನದಲ್ಲಿ ಬಂದಿದ್ದರು.

ಜಗತ್ತು ಈ ಸುದ್ದಿಯನ್ನು ನಂಬದಾಯಿತು. ವಂಗಭೂಮಿಯ ಪಿತಾಮಹರನ್ನು ಕೊಲೆ ಮಾಡಲಾಗಿದೆ. ಇದು ನಂಬದಂತಹ ಸುದ್ದಿಯೇ ಆಗಿತ್ತು. ಆದರೂ ಅದು ನಿಜವಾಯಿತು. ಗಾಂಧೀಜಿ, ಲಿಂಕನ್ನರ ಸಾಲಿನಲ್ಲಿ ಮುಜೀಬರು ತಮ್ಮ ಪ್ರಾಣವನ್ನೇ ಅರ್ಪಿಸಬೇಕಾಯಿತು. ದೇಶಕ್ಕಾಗಿ ಅನೇಕ ಯಾತನೆಗಳನ್ನು, ಕರಾಳವಾದ ಜೈಲುವಾಸವನ್ನು ಸಹಿಸಿದ, ಪಾಕಿಸ್ತಾನಿ ಸರ್ವಾಧಿಕಾರಿಗಳ ಕೈಯಲ್ಲಿ ಮರಣವನ್ನು ಸ್ವಲ್ಪದರಲ್ಲಿ ತಪ್ಪಿಸಿಕೊಂಡ ಮುಜೀಬರು ತಮ್ಮ ಜನರ ಅನುಯಾಯಿಗಳ ಕೈಯಲ್ಲಿ ಹುತಾತ್ಮರಾಗಬೇಕಾಯಿತು. ಇದು ವಿಧಿ ವಿಲಾಸ!

ಆಗಸ್ಟ ೧೧ ರಿಂದ ೧೪ ರ ವರೆಗೆ ಸೇರಿದ ಸಭೆಯಲ್ಲಿ ಮುಜೀಬರನ್ನು ಕೊಲ್ಲಲು ಯೋಜನೆಯನ್ನು ಸಿದ್ಧಗೊಳಿಸಲಾಗಿತ್ತು. ಶೇಖ ಮುಜೀಬರು ದೇಶವನ್ನು ೬೧ ಜಿಲ್ಲೆಗಳಲ್ಲಿ ವಿಂಗಡಿಸಿ, ಪ್ರತಿ ಜಿಲ್ಲೆಗೂ ರಾಜ್ಯಪಾಲರನ್ನು ನೇಮಿಸಿ ಅವರು ನೇರವಾಗಿ ತಮ್ಮ ಆಜ್ಞೆಯ ಪ್ರಕಾರ ಕೆಲಸ ಮಾಡಬೇಕೆಂದು ನಿರ್ಧರಿಸಿದ್ದರಿಂದ, ಸಚಿವಾಲಯದ ಭ್ರಷ್ಟ ಅಧಿಕಾರಿಗಳು ಹೆದರಿದ್ದರು. ಆಡಳಿತ ಶಕ್ತಿ ಸಚಿವಾಲಯದಿಂದ ಗ್ರಾಮೀಣ ಪ್ರದೇಶಗಳಿಗೆ ವರ್ಗಾಯಿಸಲ್ಪಡಬಹುದು. ಅಧಿಕಾರದ ವಿಕೇಂದ್ರೀಕರಣವಾಗಿದ್ದಲ್ಲಿ ತಮ್ಮ ಹಿತಾಸಕ್ತಿಗಳಿಗೆ ಧಕ್ಕೆ ತಗಲಬಹುದೆಂಬ ಭೀತಿ ಅಧಿಕಾರಿ ವರ್ಗದಲ್ಲಿ ತಲೆದೋರಿತು. ಒಂದು ಭಾರತ ವಿರೋಧಿ ಗುಂಪು ಅಲ್ಲಿತ್ತು. ಮುಜೀಬ್ ಮತ್ತು ಖೋಂಡಕರರಲ್ಲಿ ಮತಭೇದವಿತ್ತು. ವಯಸ್ಸಿನಿಂದ ಹಿರಿಯರು ಮತ್ತು ವಕೀಲರಾಗಿದ್ದರಿಂದ ಮುಜೀಬರಿಗಿಂತ ತಾವೇ ಶ್ರೇಷ್ಠ ಎನ್ನುವ ಭಾವನೆ ಖೋಂಡಕರರಲ್ಲಿತ್ತು. ಇಷ್ಟರಲ್ಲಿ ಮುಜೀಬರು ಒಂದು ಅಕ್ಷಮ್ಯ ತಪ್ಪನ್ನು ಮಾಡಿದರು. ತಮ್ಮ ನಂಬುಗೆಯ ಆಪ್ತ ಅನುಯಾಯಿಯಾದ ತಾಜುದ್ದೀನರನ್ನು ಮಂತ್ರಿ ಮಂಡಳದಿಂದ ಕಿತ್ತಿ ಹಾಕಿದರು. ಖೋಂಡಕರರಿಗೆ ಆನೆಯ ಬಲ ಬಂದಿತು. ಈ ಸಮಯದಲ್ಲಿ ಭೀಕರ ಬರಗಾಲ ಬಿದ್ದಿತು.

ಅಮೇರಿಕ ಸಮಯಕ್ಕೆ ಸರಿಯಾಗಿ ಸಹಾಯ ಮಾಡಲಿಲ್ಲ. ಭಾರತ ನೀಡಿದ ಸಹಾಯಧನವನ್ನು ಭ್ರಷ್ಟ ಅಧಿಕಾರಿಗಳು ತಾವೇ ತಿಂದು ಭಾರತದ ವಿರುದ್ಧ ಅಪಪ್ರಚಾರ ಮಾಡಲಾರಂಭಿಸಿದರು. ಇದೇ ಸಮಯದಲ್ಲಿ ಮುಜೀಬರು ಏಕ ಪಕ್ಷದ ಆಳಿಕೆಯನ್ನು ಘೋಷಿಸಿದರು! ಬಾಂಗ್ಲಾ ದೇಶ ತಪ್ತವಾಗಿತ್ತು. ಯಾವುದೇ ಸಮಯದಲ್ಲಿ ಪರಿಸ್ಥಿತಿ ವಿಕೋಪಕ್ಕೆ ಹೋಗಬಹುದಿತ್ತು. ಪರಕೀಯ ಶಕ್ತಿಯ ಕೈವಾಡವಿತ್ತು.

೪೨ ಸೈನಿಕ ಅಧಿಕಾರಿಗಳು ವಿದ್ರೋಹದಲ್ಲಿ ಭಾಗವಹಿಸಿದರು. ಸೈನಿಕರಿಗೆ ಏನೂ ಗೊತ್ತಿದ್ದಿಲ್ಲ. ಕೇವಲ ಅಧಿಕಾರಿಗಳ ಆದೇಶಗಳನ್ನು ಪಾಲಿಸಿದರು. ಮುಜೀಬರರನ್ನು ಕೊಲ್ಲಲು ಕ್ರಾಂತಿಕಾರರು ಅನುಕೂಲವಾದ ಸಮಯವನ್ನು ಆಯ್ಕೆ ಮಾಡಿಕೊಂಡರು. ಆ ಸಮಯದಲ್ಲಿ ಸಂರಕ್ಷಕ ದಳದ ಪ್ರಧಾನ ಬ್ರಿಗೇಡಿಯರ್ ನೂರುಜ್ಜಮಾ ದೇಶದ ಹೊರಗಿದ್ದರು. ಮಿಲಿಟರಿ ಇಂಟೆಲಿಜನ್ಸಿನ ಹೊಸ ನಿರ್ದೇಶಕರಾದ ಕರ್ನಲ್ ಜಮೀಲರು ಇನ್ನೂ ಅಧಿಕಾರ ವಹಿಸಿಕೊಂಡಿದ್ದಿಲ್ಲ. ಕ್ರಾಂತಿಯ ದಿನ ಭಾರತೀಯ ಹೈಕಮಿಶನರ್ ಮತ್ತು ರಶಿಯದ ರಾಯಭಾರಿಗಳು ಡಾಕಾದ ಹೊರಗಿದ್ದರು. ಆ ದಿವಸ ರಾತ್ರಿಯಲ್ಲಿ ಟ್ಯಾಂಕುಗಳನ್ನು ರಸ್ತೆಯಲ್ಲಿ ಸಂಚಲನ ಮಾಡಿದ್ದರೂ ಯಾರಿಗೂ ಸಂಶಯ ಬರಬಾರದೆಂದು ಪ್ರತಿ ಗುರುವಾರ ರಾತ್ರಿ ಆರ್ಮ್ಡ್ ರೆಜಿಮೆಂಟ್ ಅಭ್ಯಾಸ ಮಾಡುವ ಸುಳ್ಳು ನೆವದಿಂದ ಟ್ಯಾಂಕುಗಳನ್ನು ಪಟ್ಟಣದ ಹೊರಗೆ ತೆಗೆದುಕೊಂಡು ಹೋಗುತ್ತಿತ್ತು.

೧೫ ಅಗಸ್ಟ್ ಶುಕ್ರವಾರ ನಸುಕು ಕ್ರಾಂತಿಯ ಮುಹೂರ್ತವೆಂದು ನಿರ್ಧರಿಸಲಾಯಿತು. ಆ ದಿವಸ ಮುಜೀಬರು ಡಾಕಾ ವಿಶ್ವವಿದ್ಯಾಲಯದಲ್ಲಿ ಭಾಷಣ ಮಾಡುವವರಿದ್ದರು. ಕ್ರಾಂತಿಕಾರರು ಗುರುವಾರ ದಿವಸವೇ ವಿಶ್ವವಿದ್ಯಾಲಯದ ಆವರಣದಲ್ಲಿ ಗ್ರೆನೆಡನ್ನು ಒಗೆದು ಇದು ಉಗ್ರವಾದಿಗಳ ಕೈವಾಡವೆಂದೂ, ನಿಮ್ಮ ಸುರಕ್ಷಿತತೆಗಾಗಿ ವಿಶ್ವವಿದ್ಯಾಲಯದಲ್ಲಿ ಸೈನ್ಯವನ್ನು ಇಡಬೇಕೆಂದು ಮುಜೀಬರನ್ನು ನಂಬಿಸಿ ಒಪ್ಪಿಸಿದರು. ಗುರುವಾರ, ಆ ಭೀಕರ ರಾತ್ರಿ, ರಸ್ತೆಯಲ್ಲಿ ಟ್ಯಾಂಕುಗಳ ಸಂಚಲನದ



ಗೊತ್ತಿದೆ. ಅವರು ವಿಶ್ವವಿದ್ಯಾಲಯದಲ್ಲಿ ನನ್ನ ಸುರಕ್ಷತೆಗಾಗಿ ಸಿದ್ಧತೆಯನ್ನು ಮಾಡುತ್ತಿದ್ದಾರೆ" ಎಂದರು ಪಾಪ!

ಮೋಂಡಕರರ ಸಂಬಂಧಿಕರಾದ ಕರ್ನಲ್ ಫರೂಕ್ ಮತ್ತು ಮೇಜರ್ ರಶಿದ್ ಮುಜೀಬರು ಸೈನ್ಯ ಮತ್ತು ಟ್ಯಾಂಕ್ ದಳವನ್ನು ಉದ್ದೇಶಿಸಿ ಮಾತನಾಡುತ್ತಾ ಮುಜೀಬುರ್ರಹಮಾನರು ಡಾಕಾ ವಿಶ್ವವಿದ್ಯಾಲಯದಲ್ಲಿ ಟ್ಯಾಂಕ್ ದಳ ಮತ್ತು ಬಾಂಗ್ಲಾ ದಳಗಳನ್ನು ವಿಸರ್ಜಿಸುವ ಘೋಷಣೆ ಮಾಡುವವರಿದ್ದಾರೆ. ಅವರು ಬಾಂಗ್ಲಾ ದೇಶವನ್ನು ಭಾರತಕ್ಕೆ ಮಾರಿದ್ದಾರೆ. ಆದ್ದರಿಂದ ಹೋರಾಡಬೇಕು. ಇಡೀ ಸೈನ್ಯ ಪಡೆ ನಮ್ಮ ಹಿಂದೆ ಇರುವುದು. ಮುಜೀಬರ ಸರಕಾರವನ್ನು ಬದಲಾಯಿಸಬೇಕು ಎಂದು ಪ್ರೇರೇಪಿಸಿದರು. "ನೀವು ಇದರ ಬಗ್ಗೆ ಸಿದ್ಧರಿರುವಿರಾ?" ಎಂದು ಪ್ರಶ್ನಿಸಿದಾಗ ಏನೂ ಅರಿಯದ, ಅಧಿಕಾರಿಗಳಿಗೆ ಯಾವಾಗಲೂ ಅಧೀನ ಇರುವ ಸೈನಿಕರು ಹೌದೆಂದರು.

ವಿದೇಶೀ ಪತ್ರಕರ್ತರ ಪ್ರಕಾರ ರಾತ್ರಿ ೧೨-೩೦ರ ನಂತರ 'ಆಪರೇಶನ್' ಪ್ರಾರಂಭವಾಯಿತು. ವಿದ್ರೋಹಿಗಳನ್ನು ನಾಲ್ಕು ಗುಂಪುಗಳಲ್ಲಿ ವಿಂಗಡಿಸಲಾಯಿತು. ಮೊದಲನೆಯ ಗುಂಪು ಮುಜೀಬರ ನಿವಾಸಸ್ಥಾನ ಮುಂಡಿಯತ್ತ ಸಾಗಿತ್ತು. ಎರಡನೆಯ ಗುಂಪಿನ ಮೇಲೆ ಶೇಖ್ ಮೋನಿಯವರನ್ನೂ ಮತ್ತು ಮೂರನೆಯ ಗುಂಪಿಗೆ ಮುಜೀಬರ

ಸಜಾಜಾತರನ್ನು ಕೊಲ್ಲುವ ಹೊಣೆಗಾರಿಕೆಯಿತ್ತು. ನಾಲ್ಕನೆಯ ಗುಂಪಿಗೆ ಪ್ರತಿ ಆಕ್ರಮಣವನ್ನು ತಡೆಗಟ್ಟುವ ಕೆಲಸ ನೀಡಲಾಯಿತು. ಎರಡನೆಯ ಗುಂಪು ತನ್ನ ಕೆಲಸವನ್ನು ಪೂರ್ಣಗೊಳಿಸಿತು. ಮೂರನೆಯ ಗುಂಪು ಶೇಖ ಫಜಲುಲ್ ಹಕ್, ಅವರ ಪತ್ನಿ, ಸರ್ನಿಯಾಬಾತ ಮತ್ತು ಅವರ ಪರಿವಾರದ ೧೩ ಸದಸ್ಯರನ್ನು ಗುಂಡಿನಿಂದ ಕೊಂದಿತು. ಮೇಜರ್ ದಾಲಿಮ ನಿರ್ದಿಷ್ಟ ಸಮಯ ಕ್ಕಿಂತ ಮುಂಚಿತವಾಗಿಯೇ ಮುಜೀಬರ ಕೊಲೆಯ ವಾರ್ತೆಯನ್ನು ಢಾಕಾ ಆಕಾಶವಾಣಿ ಕೇಂದ್ರದಿಂದ ಬಿತ್ತರಿಸಿದರು.

ಕರ್ನಲ್ ಫರೂಕ್,ಮೇಜರ್ ನೂರ್, ಮೇಜರ್ ಹುದಾ, ಮೇಜರ್ ರಶಿದ್ ಮತ್ತು ಲೆಫ್ಟಿನಂಟ ರಶೀದರು ಶೇಖ ಮುಜೀಬರ ನಿವಾಸದತ್ತ ಹೊರ ಟರು. ಸೋಹನಬಾಗ ಮತ್ತು ಘನಮಂಡಿ ಕಾಲು ವೆಯ ಸೇತುವೆಯ ಬಳಿ ಸೈನ್ಯವನ್ನು ಇಡಲಾ ಯಿತು. ಇತರರು ರಾಷ್ಟ್ರಪತಿಗಳ ನಿವಾಸದತ್ತ ನುಗ್ಗಿದರು. ರಾಷ್ಟ್ರಪತಿಗಳ ನಿವಾಸದ ಗಾರ್ಡ್ ಜನರು ಪ್ರತಿರೋಧ ಮಾಡಲಿಲ್ಲ. ತಮ್ಮ ಹಿರಿಯ ಅಧಿಕಾರಿಗಳನ್ನು ನೋಡಿದ ಕೂಡಲೇ ಸಲ್ಯೂಟ್ ಹೊಡೆದು ಬದಿಗೆ ನಿಂತರು. ಗುಂಡಿನ ಸಪ್ಪಳ ದಿಂದ ಹೆದರಿ ಮುಜೀಬರ ಮಗ ಶೇಖ್ ಕಮಾಲ್ ಕೆಳಗೆ ಬಂದು ಫೋನ್ ಮಾಡುತ್ತಿರುವಷ್ಟರಲ್ಲಿ ಹತ್ಯಾರಿಗಳು ಅಲ್ಲಿಗೆ ಬಂದರು. ಅವರನ್ನು ನೋಡಿ ಅವರು ಗಾರ್ಡ್ಸ್ ಎಂದು ತಿಳಿದುಕೊಂಡು "ನಾನು ಕಮಾಲ ಶೇಖ" ಎನ್ನುವಷ್ಟರಲ್ಲಿ ಸ್ಟೆನ್ ಗನ್ನಿನಿಂದ ಅವರ ದೇಹವನ್ನು ಉರುಳಿಸಲಾ ಯಿತು. ಯೋಜನೆಯ ಪ್ರಕಾರ ಮೇಜರ್ ಹುದಾ ಮುಜೀಬರ ಹತ್ಯೆಯನ್ನು ಮಾಡಲು ಕೆಲ ಸೈನಿಕರ ಕೂಡ ಮಾಳಿಗೆಯ ಹತ್ತಿರ ನಡೆದರು. ಗುಂಡಿನ ಸಪ್ಪಳ ಕೇಳಿ ಮುಜೀಬರೇ ಮಾಳಿಗೆಯಿಂದ ಕೆಳಗೆ ಇಳಿದು ಬರುತ್ತಿದ್ದರು. ಮುಜೀಬರನ್ನು ನೋಡಿ ಮೇಜರ ಹುದಾ, "ಸರ್! ನೀವು ನಮ್ಮ ಸಂಗಡ ಬರಬೇಕು" ಎಂದರು. "ಓಹ್! ನಿಲ್ಲಿ. ಒಂದು ನಿಮಿಷ ತಡೆಯಿರಿ. ನಾನು ಸ್ವಲ್ಪ ಬಟ್ಟೆ ಬದ ಲಾಯಿಸಿ ಪೈಪ್ ತೆಗೆದುಕೊಂಡು ಬರುವೆನು" ಎಂದು ಹೇಳಿ ಮುಜೀಬರು ಮೇಲೆ ಹೋದರು. ಅವರು ಅಲ್ಲಿಂದ ಸೇನಾಧ್ಯಕ್ಷ ಮೇಜರ್ ಜನರಲ್ ಶಫಿ ಉಲ್ಲಾ ಮತ್ತು ಕರ್ನಲ್ ಜಮೀಲರಿಗೆ ಫೋನ್ ಮಾಡಿದರು. ಅಷ್ಟೊತ್ತಿಗೆ ಹುದಾ ಕೆಳಗೆ ಬಂದು ಫರೂಕರಿಗೆ, "ನನ್ನಿಂದಾಗದು ನಾನು ಶೇಖರ ಮೇಲೆ ಗುಂಡು ಹೊಡೆಯಲಾರೆ, "ಎಂದರು. ಇದೇ ಸಮಯದಲ್ಲಿ ಮಿಲಿಟರಿ ಇಂಟೆಲಿಜನ್ಸಿನ ಕರ್ನಲ್ ಜಮೀಲರು ರಾಷ್ಟ್ರಪತಿ ಭವನಕ್ಕೆ ಬಂದು ಸೈನಿಕರಿಗೆ ಹೊರಟು ಹೋಗಲು ಆದೇಶ ನೀಡಿದರು. ಆದರೆ ಅಧಿಕಾರಿ ಮತ್ತು ಸೈನಿಕರು ತಾವು ವಿಶೇಷ 'ಮಿಶನ್' ಮೇಲೆ ಬಂದಿರುವದಾಗಿಯೂ ಅದನ್ನು ಪೂರ್ಣಗೊಳಿಸದೇ ತಿರುಗಿ ಹೋಗುವದಿಲ್ಲೆಂದೂ ತಿಳಿಸಿದರು. ಮಶಿನ್‌ಗನ್ನಿನಿಂದ ಗುಂಡಿನ ಸುರಿ ಮಳೆಯಾಯಿತು. ಕರ್ನಲ್ ಜಮೀಲರ ದೇಹ ಗೇಟಿನ ಬಳಿಯೇ ಉರುಳಿತು. ಒಡೆಯನಿಗಾಗಿ ಜಮೀಲರು ಪ್ರಾಣತೆತ್ತರು.

ಫರೂಕರು, ಹುದಾರೊಂದಿಗೆ ಮಾಳಿಗೆಯ ಮೇಲೆ ಹೋಗಿ ಮುಜೀಬರನ್ನು ಭೆಟ್ಟಿಯಾ ದರು. "ಅಡ್ಡಿ ಇಲ್ಲ. ಎಲ್ಲಿ ಕರೆದುಕೊಂಡು ಹೋಗಲು ಬಯಸುತ್ತಿರೋ ಅಲ್ಲಿ ಒಯ್ಯಿರಿ. ಆದರೆ ನಾನು ಕಮಾಲ ಇಲ್ಲದೇ ಬರುವದಿಲ್ಲ. ಕಮಾಲನನ್ನು ಕರೆಯಿರಿ" ಎನ್ನಲು ಕೊಲೆಗಡುಕರು ಗೊಂದಲಕ್ಕೆ ಬಿದ್ದರು. ರಕ್ತದ ಮಡುವಿನಲ್ಲಿ ಕಮಾಲನ ದೇಹ ಬಿದ್ದಿತ್ತು. ಮುಜೀಬರು ಕೆಳಗೆ ಬಂದಲ್ಲಿ ನಿಶ್ಚಿತವಾಗಿಯೂ ತಮ್ಮ ಮಗನ ಮೃತ ಶರೀರವನ್ನು ನೋಡಬಹುದಿತ್ತು. ಈ ಸಮಯ ದಲ್ಲಿ ಹುದಾ ತನ್ನ ಕರವಸ್ತ್ರದಿಂದ ಮುಜೀಬರ ಕಣ್ಣನ್ನು ಮುಚ್ಚಲು ಮುಂದೆ ಬಂದ. "ಈ ಜನರು ಕಮಾಲ ಭಾಯಿಯನ್ನು ಕೊಂದುಹಾಕಿದ್ದಾರೆ" ಹಿಂದಿನಿಂದ ಒಬ್ಬ ನೌಕರನ ಕೂಗು ಕೇಳಿಬಂದಿತು. ಮುಜೀಬರು ಹುದಾನನ್ನು ಬದಿಗೆ ನೂಕಿ, "ನೀವು ಏನು ಮಾಡುತ್ತೀರಿ? ಕಮಾಲನನ್ನು ಏಕೆ ಕೊಂದಿರಿ? ನಾನು ನಿಮ್ಮ ಕೂಡ ಬರುವದಿಲ್ಲ. ನೆನಪಿನಲ್ಲಿ ಇಟ್ಟುಕೊಳ್ಳಿ, ಎಲ್ಲಿಯವರೆಗೆ ನಾನು ಜೀವಂತ ಇರುವೆನೋ, ಅಲ್ಲಿಯವರೆಗೆ ಈ ದೇಶ ನಾಶಾ ಗಲಿಕ್ಕೆ ಬಿಡುವದಿಲ್ಲ" ಎಂದು ಜೋರಿನಿಂದ ಕೂಗಿ ಮಾಳಿಗೆಯ ಮೆಟ್ಟಿಲುಗಳನ್ನು ಹತ್ತಲು ಉಪಕ್ರಮಿಸಿದರು. ಇದೇ ಸಮಯದಲ್ಲಿ ಹತ್ಯಾರಿ ಸುಭೇದಾರ ಶೇಖ್ ಮುಸ್ಲಿಮುದ್ದೀನ ಅಲ್ಲಿಗೆ ಬಂದು ಬಿಟ್ಟಿದ್ದನು. ಮುಜೀಬರು ಇನ್ನೂ

ಮೇಲಕ್ಕೆ ಮುಟ್ಟಿದ್ದಿಲ್ಲ. ರಿವಾಲ್ವರಿನಿಂದ ಗುಂಡು ಹಾರಿತು...ಶೇಖರು ಉರುಳಿದರು. ಕ್ಷೀಣ ಧ್ವನಿ ಕೇಳಬಂದಿತು! ಶಾಂತವಾಯಿತು! ಮುಜೀಬರು ಹುತಾತ್ಮರಾಗಿಬಿಟ್ಟಿದ್ದರು! ಕೃತಘ್ನ ಅನುಯಾಯಿಗಳ ವಿರುದ್ಧ ದೂರು ನೀಡಲು ಅಲ್ಲಾನ ಸಮೀಪ ಹೋಗಿಬಿಟ್ಟರು !!

ಮಹಾನ್ ಆತ್ಮದ ಅಂತ್ಯವಾಯಿತು. ದೇಶದ ಪ್ರೇಮದ ಕೊನೆಯ ಬೆಲೆಯನ್ನು ಆತ್ಮಬಲಿದಾನದ ಮೂಲಕ ಸಮರ್ಪಿಸಿದರು! ಬಾಗಿಲಿನ ಹಿಂದೆ ಈ ಘೋರ ಕೃತ್ಯವನ್ನು ನೋಡುತ್ತಾ ಮುಜೀಬರ ಧರ್ಮ ಪತ್ನಿ ಬೇಗಂ ಉತ್ತುನ್ನಿಸಾ ನಿಂತುಕೊಂಡಿದ್ದರು. "ತಾವು ಬಂಧನದಲ್ಲಿದ್ದೀರಿ. ನಮ್ಮ ಸಂಗಡ ನಡೆಯಿರಿ" ಕರ್ನಲ್ ನುಡಿದ. "ನಾನು ಇಲ್ಲಿಂದ ಒಂದು ಇಂಚೂ ಸರಿಯಲಾರೆ. ಬೇಕಾದರೆ ನೀವು ನನ್ನನ್ನೂ ಕೊಲ್ಲಬಹುದು," ದೃಢವಾಗಿ ಉತ್ತರಿಸಿದರು ಬೇಗಂ. ಗುಂಡುಗಳು ಮೊರೆದವು. ಬೇಗಂ ಮುಜೀಬರ ನಿರ್ಜೀವ ಶರೀರ ಉರುಳಿತು. ಕೊಲೆಗಡುಕರು ಹುಚ್ಚರಾದರು. ಈ ಹತ್ಯಾಕಾಂಡದ ಯಾವುದೇ ಜೀವಂತ ಸಾಕ್ಷಿಯನ್ನು ಇಡಬಾರದೆಂದು ಅವರು ಎಲ್ಲ ಕೋಣೆಗಳತ್ತ ನುಗ್ಗಿದರು. ಶೇಖ್‌ನಾಸಿರ ಮತ್ತು ಕೆಲ ನೌಕರರು ಶೌಚಾಲಯದಲ್ಲಿ ಅಡಗಿ ಕೊಂಡಿದ್ದರು. ಅವರನ್ನು ಗುಂಡಿಕ್ಕಿ ಕೊಲ್ಲಲಾಯಿತು. ಮುಜೀಬರ ಬೆಡ್‌ರೂಮಿನಲ್ಲಿ ಶೇಖ್ ಜಮಾಲ, ಶೇಖ ರಸೂಲ, ಮತ್ತು ಮುಜೀಬರ ಇಬ್ಬರು ಸೊಸೆಯಂದಿರು–ರೋಜಿಮತ್ತು ರುಕಿಅಡಗಿಕೊಂಡಿದ್ದರು. ಅವರ ಕಥೆಯನ್ನೂ ಮುಗಿಸಲಾಯಿತು. ಈಗ ಕೊಲೆಗಡುಕರ ಮುಂದೆ ೧೦ ವರ್ಷದ ರಸೂಲ ನಿಂತುಕೊಂಡಿದ್ದ. "ನನ್ನನ್ನು ಏಕೆ ಕೊಲ್ಲುತ್ತೀರಿ? ನಾನು ಕೇವಲ ಮಗು. ನನ್ನನ್ನು ಬಿಟ್ಟು ಬಿಡಿ," ರಸೂಲ ನಡುಗುತ್ತಾ ನುಡಿದ. "ಅಚ್ಛಾ. ನಾವು ನಿನ್ನನ್ನು ಬಿಡುತ್ತೇವೆ" ಎಂದು ಧ್ವನಿ ಬಂದಿತು. ಕೂಡಲೇ ಗುಂಡು ತನ್ನ ಕೆಲಸ ಮಾಡಿತು. ರಸೂಲನ ಮಿದುಳು ಹೊರಬಂದಿತು! ಕೊಲೆಗಡುಕರು ರೋಜಿ ಮತ್ತು ರುಕಿಯರ ದೇಹದ ಎಲ್ಲ ಆಭರಣಗಳನ್ನು ಅಪಹರಿಸಿಕೊಂಡರು.

ಧಾನ ಮಂಡಿಯ ೩೨ ನಂಬರಿನ ಬಂಗ್ಲೆಯಲ್ಲಿ ಸ್ಮಶಾನ ಶಾಂತಿ ಪಸರಿಸಿತ್ತು ! ವಿದ್ರೋಹಿಗಳು ಜನರ ಕೋಪದಿಂದ ರಕ್ಷಿಸಿಕೊಳ್ಳಲು ಮುಜೀಬರ ಶವವನ್ನು ಒಂದು ಗೋಣಿ ಚೀಲದಲ್ಲಿ ತುಂಬಿ ಹೆಲಿಕ್ಯಾಪ್ಟರಿನಿಂದ ಫರೀದಪುರದ ತುಂಗಿ ಪಾಡಾ ಸ್ಥಾನಕ್ಕೆ ಸಾಗಿಸಿದರು. ಯಾವುದೇ ಸಂಸ್ಕಾರ ಮಾಡದೇ ಮುಜೀಬರನ್ನು ಹೂಳಲಾಯಿತು!

ಮುಜೀಬರ ಕೊಲೆಯ ಹಿಂದೆ ವಿದೇಶಿ ಕೈವಾಡವಿತ್ತೇ? ಅವರ ಸಲುವಾಗಿ ಪ್ರಾಣ ತೆರಲೂ ಸಿದ್ಧರಿದ್ದ ಅವಾಮಿ ಲೀಗಿನ ಕಾರ್ಯಕರ್ತರು, ಮುಕ್ತಿವಾಹಿನಿ ಸೈನಿಕರು ಆ ಘೋರ ಪ್ರಸಂಗದಲ್ಲಿ ಎಲ್ಲಿದ್ದರು? ಅವರನ್ನು ಬದುಕಿಸಲು ಸಾಧ್ಯವಾಗುತ್ತಿರಲಿಲ್ಲವೇ? ಅವರ ಕೊಲೆಯ ಒಳಸಂಚಿನ ಸುಳಿವು ಯಾರಿಗೂ ತಿಳಿದಿರಲಿಲ್ಲವೇ? ಮುಂತಾದ ಪ್ರಶ್ನೆಗಳು ಇನ್ನೂ ಕತ್ತಲಲ್ಲೇ ಉಳಿದಿವೆ. ಬಹುಶಃ ಹಾಗೆಯೇ ಉಳಿದುಬಿಡಲೂ ಬಹುದು! ✡



"ಸ್ಕೂಲಿಗೆ ಬರಬೇಕಾದ್ರೆ, ಮುಖ ತೊಳೆದುಕೊಂಡು ಬರಬೇಕು ಅಂತಾ, ನಿನಗೆಷ್ಟು ಸಾರಿ ಹೇಳ್ಲಿಲ್ಲಾ ಗುಂಡಾ? ಈವತ್ತು ಬೆಳಗ್ಗೆ, ನೀನು ತಿಂದ ತಿಂಡಿ ಏನು ಅಂತ ಹೇಳ್ಲಾ?"

"ಹೇಳಿ ಸಾರ್ ನೋಡೋಣ."

"ಈವತ್ತು ಮೊಸರನ್ನ ತಿಂದಿದ್ದೀಯಾ, ನೋಡು ಮೂಗಿನ ಹತ್ರ ಅಂಟಕೊಂಡೇ ಇದೆ."

"ಸಾರ್, ಅದು, ನಿನ್ನೆ ಬೆಳಗ್ಗೆ ತಿಂದಿದ್ದು!"

—ಎ. ವೆಂಕಟೇಶಪ್ಪ

# ಕ್ಷಮೆ ಕೇಳಿ ಮುದ ಪಡೆ

ಶ್ರೀಮತಿ ಲಲಿತಾ ಶ್ರೀಕಂಠಯ್ಯ

"ಹೇಗಿದೆ ನನ್ನ ಸಿಲೆಕ್ಷನ್?"

"ನಿಮ್ಮ ಸೆಲೆಕ್ಷನ್ನು ಅಂದಮೇಲೆ ಕೇಳಬೇಕಾ, ಫಸ್ಟ್‌ಕ್ಲಾಸ್. ಆದರೆ..."

"ಏನು ಆದರೆ?"

"ಏನಿಲ್ಲ ಬಿಡಿ."

"ಅದೇನು ಹೇಳಿ ಬಿಡು."

"ಈ ತಿಂಗಳು ತೊಗೊಳ್ಳೋ ಬದಲು ನೆಕ್ಸ್ಟ್ ಮಂಥ್ ತೊಗೊಂಡಿದ್ದರೆ ಚೆನ್ನಾಗಿತ್ತು ಅನ್ಸುತ್ತೆ ಅಲ್ಲವೇ? "

"ಯಾಕೆ, ಈ ತಿಂಗಳು ಏನಾಗಿದೆ?"

"ಏನೂ ಇಲ್ಲ. ರಾಜು– ಸುಮಾರಿಗೆ ಕಾಲೇಜು ಫೀ, ಪುಸ್ತಕಗಳಿಗೆ ದುಡ್ಡು ಸರಿಮಾಡಬೇಕಲ್ಲಾ."

"ಅದಾ! ಹೇಗೋ ಸರಿಮಾಡಿದರಾಯ್ತು."

"ಹೇಗೋ ಅಂದ್ರೆ ಹ್ಯಾಗಾಗುತ್ತೆ? ಬರುವುದರಲ್ಲಿ ಎಡ್ಜೆಸ್ಟ್ ಮಾಡಿಕೊಳ್ಳಬೇಕಲ್ಲ. ಸಾಲ ಅಂದ್ರೆ ಯಾರು ಕೊಡ್ತಾರೆ?"

"ಪ್ರತಿ ತಿಂಗಳು ಇದ್ದದ್ದೇ ಪುರಾಣ ನಿಂದು!" ನೀನು ಸಂಪಾದನೆ ಮಾಡಿದ್ರಲ್ಲಿ ಹೆಚ್ಚು ಪಾಲು ಕೊಡಬೇಕಾಗುತ್ತಲ್ಲಾ ಅಂತ ಯೋಚ್ನೆನೋ? ನಿನ್ನ ಸಂಪಾದನೆ ಯಾರಿಗೆ ಬೇಕು ಬಿಡು! ಅದೂ ಆ ಜುಜುಬಿ ಸಂಬಳ! ಪ್ರೈಮರಿ ಸ್ಕೂಲ್ ಟೀಚರದು ಎಷ್ಟು ಬರುತ್ತೆ ಮಹಾ?"

"ಈಗೇಕೆ ಆ ವಿಷಯವೆಲ್ಲಾ ಬಿಡಿ," ಬಾಯಲ್ಲಿ ಹಾಗೆ ನುಡಿದರೂ ಅತ್ತಿಗೆಯ ಮನ ನೊಂದಿತ್ತು. ಕಣ್ಣಲ್ಲಿ ಗಂಗೆ ಇಣುಕುತ್ತಿದ್ದಳು.

*

"ಪ್ಲೀಸ್ ಸುಮ, ನಿನ್ನ ಹಿಸ್ಟರಿ ನೋಟ್ಸ್ ಕೊಟ್ಟರೆ. ನಿನ್ನೇದು ಬರಕೊಂಡು ಕೊಡ್ತೀನಿ".

"ಊಹುಂ, ಆಗೋಲ್ಲ."

"ಹಾಗನ್ನಬೇಡ ಪ್ಲೀಸ್."

"ನಿಂದು ಗೋಳು ತಪ್ಪಿದ್ದೇ ಇಲ್ವಲ್ಲೇ."

"ದಯಮಾಡಿ ಹಾಗನ್ನಬೇಡ ಸುಮಿ. ಈಸಲ, ಒಂದು ಸಲ!"

"ಒಂದ್ಸಲ, ಒಂದ್ಸಲ ಅಂತ ನಿನ್ನ ಪುರಾಣ ಮುಗಿಯೋದೇ ಇಲ್ಲ. ಅಮಾವಾಸ್ಯೆಗೊಂದಿನ, ಹುಣ್ಣಿಮೆಗೊಂದಿನ ಕಾಲೇಜಿಗೆ ಬಾ."

"ಏನು ಮಾಡೋದೆ, ಅಮ್ಮನಿಗೆ ಹುಷಾರಿರಲಿಲ್ಲ."

"ನಿಮ್ಮಮ್ಮ ಯಾವತ್ತು ತಾನೆ ಚೆನ್ನಾಗಿರುತ್ತಾರೆ ಹೇಳು! ದಿನಾ ಒಂದು ತಪ್ಪಿದರೆ ಒಂದು!" ಗೆಳತಿಯ ಮುಖ ಚಿಕ್ಕದಾಯಿತು ಎಂದೇನೋ ಸುಮ ಸ್ವಲ್ಪ ಮೆತ್ತಗಾದಳು– "ಸರಿ ಇದೇ ಲಾಸ್ಟ್ ಟೈಮು. ಮತ್ತೇನಾದ್ರೂ ಕೊಡೋಲ್ಲಾ" ಸಿಡುಕುತ್ತಾ ಮುಂದಿದ್ದ ಡೆಸ್ಕ್ ಮೇಲೆ ಎಸೆದು ಹೋದಳು.

ಮನೆ ಒಳಗೆ [illegible]



ಭಯ ಹುಟ್ಟಿಸಿತು. ಸುಮ, "ಯಾಕಮ್ಮ ಅತ್ತಿಗೆ ಇನ್ನೂ ಸ್ಕೂಲಿಂದ ಬಂದಿಲ್ವಾ!" ಅಂದಳು.

"ಬಂದಿದಾಳೆ, ರೂಮಲ್ಲಿದ್ದಾಳೆ. ಅವಳನ್ನು ಕರಿ. ಇಬ್ಬರಿಗೂ ಬಡಿಸ್ತೀನಿ."

"ಯಾಕಮ್ಮಾ, ಇಷ್ಟು ಹೊತ್ತಾದ್ರು ಅತ್ತಿಗೇದಿನ್ನೂ ಊಟ ಆಗಿಲ್ವಾ?" ಸುಮ ಕೇಳುತ್ತಿದ್ದಂತೆ, "ಯಾಕೆ, ಯಾರಿಗೋಸ್ಕರ ಕಾಯಬೇಕಾಗಿತ್ತು?" ಅಣ್ಣ ಕೈ ಒರೆಸುತ್ತಾ ಒಳಬಂದ.

"ನಿನಗೋಸ್ಕರ" ತಾಯಿ ಉತ್ತರಿಸಿದಳು.

"ನನಗೋಸ್ಕರ. ಅಂತಹದೇನು! ನನಗೋಸ್ಕರ ಕಾಯಲೀ ಅಂತೇನೂ ಹೇಳಿರಲಿಲ್ಲವಲ್ಲಾ"

"ಹಾಗೇನೂ ಹೇಳಿರಲಿಲ್ಲ ನಿಜ! ಆದರೆ ಅವಳ ಹೊಟ್ಟೆ ತುಂಬಿಸಿದ್ದೀಯಲ್ಲಾ?" ಅಮ್ಮ ವ್ಯಂಗ್ಯ ಅರ್ಥವಾಗಿರಬೇಕು. ಆದರೂ ಬೇಕೆಂದೇ "ಏನು ಅಂತಹದು ಸ್ಪೇಶಲ್ ಮಾಡಿದ್ದೆ." ಎಂದ.

"ಬೆಳಿಗ್ಗೆ ನೀನು ಆಡಿದ್ದ ಮಾತು, ಅಲ್ಲಾ ಕಣೋ ಒಂದು ಸ್ವಲ್ಪಾನೂ ತಾನು ತನ್ನದು ಅಂತ ನೋಡಿಕೊಳ್ಳದೇ ಸಂಬಳ ಎಲ್ಲಾ ನಿನ್ನ ಕೈಲಿ ತಂದುಹಾಕೋ ಹುಡುಗೀಗೆ ಅಂತ ಮಾಡುಗಿನೇನೋ ಆ ಮಾತಾಡಿ ಹೊಟ್ಟೆ ಉರಿಸೋದು? "ಅಮ್ಮ ಚುರುಕು ಮುಟ್ಟಿಸಿದಳು.

"ಈಗೇನು ಮಾಡು ಅಂತೀಯಾಮ್ಮ," ಅಣ್ಣ

ನಿಗೂ ತನ್ನ ತಪ್ಪು ಅರ್ಥವಾಗಿರಬೇಕು.

"ಏನು ಮಾಡ್ಬೇಕು ಅಂತ ನನ್ನ ಕೇಳ್ತಿದೀಯಲ್ಲೋ, ನಾನು ಹೇಳಿ ಕೊಡಬೇಕೇನೋ!" ಅಮ್ಮ ನಕ್ಕುಬಿಟ್ಟಳು.

ಅಣ್ಣ ಪೆಚ್ಚಾಗಿ ಅತ್ತಿಗೆಯ ರೂಮಿಗೆ ಕಾಲಿಟ್ಟ.

ದುಃಖದಿಂದ ಮ್ಲಾನಗೊಂಡ ಅತ್ತಿಗೆಯ ಮುಖವನ್ನು ಮೇಲೆತ್ತುತ್ತಾ, "ಕ್ಷಮಿಸು ರಾಜಿ, ಬೆಳಿಗ್ಗೆ ಆವೇಶದಲ್ಲಿ ಏನೇನೋ ಮಾತಾಡಿಬಿಟ್ಟೆ"ಅತ್ತಿಗೆಯ ದುಃಖದ ಕಟ್ಟೆ ಒಡೆದಿತ್ತು. ಕಣ್ಣೀರನ್ನು ಒರೆಸಿ ಅವಳ ಮೃದುವಾದ ಕೈಗಳನ್ನು ಒತ್ತಿ "ರಾಜೀ" ಎಂದ. ಹೃದಯ ಮಾತಾಡಿತ್ತು.

*

ಬಾಗಿಲಿಗೂ ಮನೆಗೂ ಎಡೆತಾಗುತ್ತಿದ್ದ ಪಕ್ಕದ ಮನೆಯ ಅಜ್ಜಿಯನ್ನು ಸುಮ ಪ್ರಶ್ನಿಸಿದಳು.

"ಏನಜ್ಜಿ, ಯಾರನ್ನೋ ಕಾಯುತ್ತಿರುವಂತಿದೆ?"

"ಇನ್ಯಾರನಮ್ಮ, ನನ್ಮಗ ರಘೂನಾ!"

"ಅಯ್ಯೋ ಇನ್ನೂ ಐದು ಗಂಟೆ. ಇನ್ನೊಂದು ಗಂಟೆನಾದರೂ ಆಗಬೇಕಜ್ಜಿ ಅವನುಬರೋಕೆ"

"ಹೌದೇ! ನನಗಂತೂ ಕಾತರ ನೋಡು. ಒಳಗೆ ಕುಳಿತುಕೊಳ್ಳೋಕೆ ಆಗ್ತಾಯಿಲ್ಲ ಬಂದನೇನೋ ಅಂತ ನೋಡೋ ಹಾಗಾಗುತ್ತೆ."!

"ಏನಜ್ಜಿ, ಅಂತಹ ಆತುರದ ಸಮಾಚಾರ!"

"ಏನೂ ಇಲ್ಲ ಕಣೆ ತಾಯಿ, ಬೆಳಿಗ್ಗೆ ನಮ್ಮ ರಘೂಗೆ ಎರಡು ಮಾತಾಡ್ದೆ"

"ತಾಯಿ ಅಂದ್ಮೇಲೆ ಹೇಳ್ದೆ ಇರೋಕಾಗುತ್ತ್ಯೆ?"

"ಹಾಗಲ್ಲಮ್ಮ, ಪಬ್ಬಕ್ಕೆ ಸಾಲತೊಗೊಂಡು ಬಟ್ಟೆ ಹೊಲಿಸುಕೋತೇನಮ್ಮಾ ಅಂದ."

"ಅದಕ್ಕೇ"

"ಯಾವಾಗ್ಲೂ ನಿನ್ನ ಬಟ್ಟೆ ಬರೇನೆನೇ ನೋಡಿಕೊಂಡ್ರೆ ಹೇಗೋ, ನಿನ್ನ ತಂಗೀಗೆ ಒಂದು ಸೀರೇನಾದ್ರು ತಂದ ಕೊಟ್ಟಿದ್ದೀಯಾ ಎಂದೆ. ಸುಮ್ಮನಿದ್ದ. ನನಗೂ ಅದೇನು ರೇಗಿತ್ತೋ ಅವರು, ನೋಡು, ತಮ್ಮ, ತಂಗೀರಿಗೇ ಅಂತ ಎಷ್ಟು ಮಾಡ್ತಾರೆ, ನೀನೂ ಇದೀಯಾ!? ಎಂದು ಯಾರ್‍ಯಾರೋ ದೊಡ್ಡ ಮನುಷ್ಯರ ಹೆಸರು ಹೇಳಿದೆ."

"ಅದಕ್ಕೆ ರಘು ಏನಂದ.?"

"ಸುಮ್ಮನೆ ನಕ್ಕು ತಟ್ಟೆಯಲ್ಲೇ ಕೈತೊಳೆದು ಎದ್ದ."

"ಅದೇನ್ಮಹಾ ಬಿಡಿ ಅಜ್ಜೀ!"

"ಒಂದು ವೇಳೆ ನಮ್ಮ ರಘೂನೂ ತಿರುಗಿ ಬಿದ್ದು, 'ನೀನು ಹೇಳಿದವರ ಮನೆಯವರೆಲ್ಲಾ ಆಸ್ತಿ ಮಾಡಿಟ್ಟಿದ್ದಾರೆ. ನೀನು ನನಗೇನು ಆಸ್ತಿ ಮಾಡಿಟ್ಟಿದ್ದೀಯಾ, ಅಥವಾ ತುಂಬಾ ಸಂಬಳ ತರೋಂತಾ ಓದು ಓದಿಸಿದ್ದೀಯಾ ಅಂತ ಕೇಳಿದ್ರೆ ನನ್ನ ಮರ್ಯಾದೆ ಏನಾಗ್ತಿತ್ತು ಹೇಳು! ಪಾಪ ಇದ್ದುದರಲ್ಲೇ ಸವರಿಸಿಕೊಂಡು ಹೋಗುತ್ತಾನೆ."

"ಈಗೇನು ಮಾಡಬೇಕೂಂತ ಅಜ್ಜಿ"

"ಏನಿಲ್ಲ. ಅವನು ಬಂದ ತಕ್ಷಣ ಒಂದೆರಡು ಸಮಾಧಾನದ ಮಾತು ಹೇಳಬೇಕು. ಏನೋ ಅಂದು ಬಿಟ್ಟೆ ಅಂತ"

"ಅಂದ್ರೆ ಕ್ಷಮೆ ಕೇಳ್ತೀರಾ."

"ಯಾಕೆ ಕೇಳಬಾರ್ದಮ್ಮ? ತಪ್ಪು ಮಾಡಿದ ಮೇಲೆ ಯಾರ ಹತ್ತಿರವಾದ್ರೇನು? ಅವನದೂ ಮನಸ್ಸೇ ಅಲ್ವೇ"–ಸುಮಾ ಬೆರಗಾಗಿ ನಿಂತಿದ್ದಳು.

*

"ಸುಮ, ಬರ್‍ತೀಯೇನಮ್ಮಾ"–ತಂದೆಯ ಧ್ವನಿ ಎಚ್ಚರಿಸಿತ್ತು.

"ಹಾಂ ಬಂದೇ ಅಪ್ಪಾ!" ರಾಯರ ದಿನದ ಸವಾರಿ ಹಳೆಯ ವೈದ್ಯ ಗೆಳೆಯನ ಷಾಪಿನ ಕಡೆಗೆ ಹೊರಟಿತ್ತು. ದಿನದಂತಿರದ ಸುಮಾ ಯಾಂತ್ರಿಕವಾಗಿ ಹೆಜ್ಜೆ ಇಟ್ಟಳು. ಬೆವರೊರಸುತ್ತಾ ಬಂದ ಗೆಳೆಯ, "ಏನಯ್ಯಾ, ಬಂದು ತುಂಬಾ ಹೊತ್ತಾಯ್ತೇನಯ್ಯಾ?" ಎಂದು ವಿಚಾರಿಸಿದ.

"ಅದಿರಲಿ, ನೀನು ಎಲ್ಲಿಂದ ಬರುತ್ತಿದ್ದೀ–ಯಾ" ಕೇಳಿದರು ರಾಯರು.

"ಪೋಸ್ಟ್ ಆಫೀಸಿನಿಂದ"

"............"

"ಹೂಂ ಕಣಯ್ಯ. ಪೇಶೆಂಟ್‌ಗೋಸ್ಕರ ಮಾಡಬೇಕಲ್ಲಾ!"

"ಹಾಗಂದ್ರೆ ಏನಯ್ಯಾ?"

"ಅದೇ ಆ ಹಿರಣ್ಣಯ್ಯ ದಿನಾ ಒಂದೊಂದು ಖಾಯಿಲೆ ಹೇಳುತ್ತಾ ಬರುತ್ತಿದ್ದನಲ್ಲಾ."

"ಹೂಂ ನಿನ್ನೇನೂ ನೋಡಿದನಲ್ಲಾ."

"ಅವನಿಗೇನೂ ಖಾಯಿಲೆ ಇರಲಿಲ್ಲ. ಎಷ್ಟು ಪರೀಕ್ಷೆ ಮಾಡಿದ್ರೂ ಚೆನ್ನಾಗೇ ಇದ್ದ."

"ಮತ್ತೆ"

"ಈವತ್ತು ಬಂದಾಗ ಕೇಳೇಬಿಟ್ಟೆ. ಏನಾದ್ರು ಯೋಚಿಸ್ತೀರಾ? ನಿಮ್ಮ ಮನಸ್ಸಿನಲ್ಲಿರೋ–ದನ್ನು ಹೇಳದಿದ್ದರೆ ನಾನು ಔಷಧಿ ಕೊಡಲಾರೆ ಅಂತ' ಬಹಳ ಮೀನಾ ಮೇಷ ಎಣಿಸಿ ಹೇಳಿದ, 'ಡಾಕ್ಟರೇ, ನಾನು ನಮ್ಮ ತಂದೆ ಎಸ್ಟೇಟನ್ನ ನೋಡ್ಕೋತಿದ್ದೀನಿ. ಅದರಲ್ಲಿ ಅರ್ಧ ನನ್ನ ತಮ್ಮನಿಗೂ ಪಾಲುಂಟು. ಅವನು ದೂರದೇಶದಲ್ಲಿದ್ದಾನೆ. ಅವನ ಪಾಲಿನ ದುಡ್ಡನ್ನೂ ನಾನೇ ಬಳಸಿಕೊಳ್ಳುತ್ತಿದ್ದೇನೆ' ಅಂದ."

"ಅದಕ್ಕೆ ನೀನೇನು ಮಾಡಿದೆ?"

"ತಕ್ಷಣ ಒಂದು ಚೆಕ್ ಬರೆಸಿ, [illegible] ಪತ್ರ ಬರೆಸಿ ಪೋಸ್ಟ್ ಮಾಡಿಸಿ [illegible]

ಪೋಸ್ಟ್ ಮಾಡಿ ಜೋರಾಗಿ ಅಳೋಕೆ ಶುರು ಮಾಡಿದ್ದ "ಥ್ಯಾಂಕ್ಸ್ ಡಾಕ್ಟರೇ, ನಿಮ್ಮಿಂದ ಇನ್ನು ಗುಣವಾದಂತೆಯೇ ಅಂದ."

ಸುಮ ಮೂಕಳಾಗಿದ್ದಳು.

*

ತಾನು ಮಾಡಿದ ತಪ್ಪನ್ನು ಗುರುತಿಸಿ ವ್ಯಕ್ತಿಯತ್ತ ಕ್ಷಮಾಪಣೆ ಬೇಡುವುದು ಒಚ್ಚು. ನೀವು ಆಡಿದ ಮಾತೋ, ಮಾಡಿದ ಕೆಲಸವೋ ನಿಮ್ಮ ನಡುವಿನ ಸಂಬಂಧವನ್ನು ಮುರಿದಿರಬಹುದು. ಅದನ್ನು ಸರಿ ಮಾಡಬೇಕಾದದ್ದು ನಿಮ್ಮ ಧರ್ಮ!

ಆದರೆ ಅದು ಅಷ್ಟು ಸುಲಭವಲ್ಲ. ಒಂದೊಮ್ಮೆ ನಿಮ್ಮ ಮನಸ್ಸು ಮಾಡಿ. ಅದು ಅಷ್ಟು ಮುಗಿದರೆ ಕ್ಷಮೆ ಕೇಳಿ. ಹೃದಯ ಹಗುರ ಮಾಡಿಕೊಳ್ಳಬಹುದು. ಕ್ಷಮೆ ಕೇಳುವುದರಿಂದ ಮನಸ್ಸಿಗೆ ಆದ ಗಾಯವೂ ಮಾಯುತ್ತದೆ. ಹೃದಯವೂ ನಿರ್ಮಲವಾಗುತ್ತದೆ.

ಮಾನವನಿಗೆ ಕ್ಷಮಾಪಣೆ ಕೇಳುವ ಕಲೆ ಮುಖ್ಯವಾಗಿ ಬೇಕು. ನಿಮ್ಮ ಜೀವನದಲ್ಲಿ ಘಟನೆಗಳು ಬಗ್ಗೆ ತಿರುಗಿ ನೋಡಿ—ಅಣ್ಣನಂತೆ ಕಠಿಣ ತೀರ್ಮಾನ ತೆಗೆದುಕೊಂಡಿರಬಹುದು. ಇಲ್ಲ, ಸುಮಳಂತೆ ಕಠೋರವಾದ ಮಾತುಗಳನ್ನಾಡಿರಲೂಬಹುದು, ಇಲ್ಲವೆ ಹಿರಣ್ಣಯ್ಯನಂತೆ ಮತ್ತೊಬ್ಬರ ದುಡ್ಡನ್ನು ಲಪಟಾಯಿಸಿರಬಹುದು. ಅನಂತರ ನೀವು ಪಶ್ಚಾತ್ತಾಪಪಟ್ಟ ಘಟನೆಗಳನ್ನು ನೆನೆಸಿಕೊಳ್ಳಿ, ನಿಜಕ್ಕೂ ಹೆದರಿಕೆ ಆಗುತ್ತದೆಯೇ? ನಮ್ಮಲ್ಲಿನ ಮನಸ್ಸಾಕ್ಷಿ ನಮ್ಮ ತಪ್ಪನ್ನು ಗುರುತಿಸಿದ ಮೇಲೆ ಪಶ್ಚಾತ್ತಾಪ ವ್ಯಕ್ತಪಡಿಸಿದಾಗಲೇ ಸಮಾಧಾನ ಹೊಂದುವುದು.

ಸಾಮಾನ್ಯವಾಗಿ ಜನ ಕ್ಷಮೆ ಕೇಳಲು ಹಿಂದೇಟು ಹೊಡೆಯುತ್ತಾರೆ— ಅವಮಾನಪಡಬೇಕಾಗುತ್ತದೆ ಎಂದು! ಅದರ ಸಂಭವ ಅತ್ಯಲ್ಪ. ಏಸು ಕ್ರಿಸ್ತನು ಮನುಷ್ಯರನ್ನು ಕ್ಷಮಿಸಲು ಹೇಳಿರುವುದು ಒಂದಲ್ಲ! ಎರಡಲ್ಲ! ಎಪ್ಪತ್ತೇಳು

ಪಶ್ಚಾತ್ತಾಪದಿಂದ ಪರಿಶುದ್ಧವಾಗುತ್ತದೆ. ಸಾಮಾನ್ಯವಾಗಿ ಮನುಷ್ಯರಾರೂ ದುಃಖ ಕೋಪಗಳನ್ನು ಯಾವಾಗಲೂ ಅನುಭವಿಸಲು ಇಷ್ಟಪಡುವುದಿಲ್ಲ.

ಕ್ಷಮೆ ಕೇಳುವಾಗ ಕೆಲವು ವಿಷಯಗಳನ್ನು ಗಮನದಲ್ಲಿಡುವುದು ಒಳಿತು. ಮಾತಿನಲ್ಲಿ ಕ್ಷಮೆ ಕೇಳಲು ಹಿಂಜರಿಯುತ್ತಿದ್ದ ಯಾವುದಾದರೂ ಉಪಾಯಗಳನ್ನು ಉಪಯೋಗಿಸಿ-ಹೂಗಳು ಪ್ರೀತಿಯನ್ನು ಹೊರಸೂಸುತ್ತವೆ; ಪ್ರೀತಿಯ ಕೊಡುಗೆಯನ್ನು ಅವರಿಗೆ ಕಳುಹಿಸಿ. ಆತ್ಮೀಯರಾದರೆ ಕೈಗಳನ್ನು ಒತ್ತಿ. ಹೃದಯದ ಮೂಕಭಾಷೆಗೆ ಬೆಲೆ ಕಟ್ಟಲು ಸಾಧ್ಯವಿಲ್ಲ.

ಕ್ಷಮೆ ಕೇಳುವುದು ಪ್ರಾಮಾಣಿಕತೆಯ ಕುರುಹೇ ವಿನಾ ಮತ್ತೊಬ್ಬರನ್ನು ಉದ್ಧರಿಸಲು ಅಲ್ಲ! ಕ್ಷಮೆ ಕೇಳುವಾಗ ಘನತೆಯಿಂದ ತಲೆಯೆತ್ತಿ ಕೇಳಿ. ನೀವು ತಪ್ಪು ಮಾಡುತ್ತೀರಿ. ತಪ್ಪನ್ನು ತಿದ್ದುವ ನಿಮ್ಮ ಪ್ರಯತ್ನಕ್ಕೆ






"ಇದೀಗ ಎಂಟನೆಯ ಅದ್ಭುತ! ಆಘಾತ ಆಗಲಿಕ್ಕೆ, ಅವರ ಹತ್ತಿರ ಹೃದಯವೂ ಇತ್ತೆ?"

ಗೌರವ ಸಲ್ಲಬೇಕು.

ಕ್ಷಮಾಪಣೆ ಕೇಳಬೇಕಾದಾಗ ಸರಿಯಾದ ಸಮಯದಲ್ಲಿ ಕೇಳಿ, ತಡಮಾಡಿದರೆ ತೊಂದರೆ ಯಾದೀತು. ಇಲ್ಲಾ ನೀವು ಕ್ಷಮೆ ಕೇಳಬೇಕಾದ ವ್ಯಕ್ತಿ ಪರಲೋಕ ಪ್ರಯಾಣ ಮಾಡಿ ಯಾನು! ನಂತರ ಜೀವನವಿಡೀ ಮನಸ್ಸು ಬೇಸರಪಡುವಂತಾದೀತು !!

ಇನ್ನೊಬ್ಬರು ನಿಮ್ಮ ಬಳಿ ಕ್ಷಮೆ ಬೇಡ ಬೇಕಾದಂತಹ ಪರಿಸ್ಥಿತಿ ಇದ್ದಾಗ ಸಾವಧಾನ ವಾಗಿ ವರ್ತಿಸಿ, ನಿಮ್ಮಿಬ್ಬರ ಮಧ್ಯದ ಸ್ನೇಹಿತನ ಬಳಿ ನಿಮ್ಮ ಮನಸ್ಸಿನ ಭಾವನೆಗಳನ್ನು ಹೊರ ಗೆಡಹುವಂತಹ ಚೀಟಿಯನ್ನು ಬರೆದು ಕಳಿಸಿ, ಆ ವ್ಯಕ್ತಿಯಾದರೂ ಇಂತಹ ಅಶಾಂತ ಪರಿ ಸ್ಥಿತಿಯಲ್ಲಿ ಹೆಚ್ಚು ದಿನ ಇರ ಬಯಸುವು ದಿಲ್ಲ. ಆತನಿಗೆ ಕ್ಷಮೆ ಕೇಳಲು ಅವಕಾಶಕೊಡಿ.

ನೀವೇನೂ ತಪ್ಪು ಮಾಡದಿದ್ದರೆ, ಕ್ಷಮೆ ಕೇಳುವ ಅವಶ್ಯಕತೆ ಇಲ್ಲ. ಮಾಡಿದ ತಪ್ಪಿನ ಪ್ರಾಯಶ್ಚಿತ್ತಕ್ಕೂ ಕ್ಷಮಾಪಣೆ ಕೇಳುವುದಕ್ಕೂ ವ್ಯತ್ಯಾಸವನ್ನು ಗುರುತಿಸಿ ಜೈಯುಂಟಹ ಅಧಿ ಕಾರವಿದ್ದವರು ತಮ್ಮ ಕೆಳಗಿನವರನ್ನು ತಪ್ಪಿಗಾಗಿ ದಂಡಿಸಿದರೆ, ಅದಕ್ಕಾಗಿ ಕ್ಷಮೆ ಬೇಡುವ ಅವಶ್ಯ ಕತೆ ಇಲ್ಲ.

ನೀವು ಯಾರಿಗಾದರೂ ಕಠಿಣವಾಗಿ ಮಾತಾ ಡಿದ್ದರೆ ಇಲ್ಲವೆ ಅವರನ್ನು ತಿರಸ್ಕರಿಸಿ ನೋವುಂಟು ಮಾಡಿದ್ದರೆ, ಇಂದೇ ಕಾರ್ಯ ತತ್ಪರ ರಾಗಿ—ಚೀಟಿಯನ್ನು ಬರೆಯಿರಿ. ಇಲ್ಲವೆ ಫೋನಿ ನಲ್ಲಿ ಮಾತಾಡಿ. ಪುಸ್ತಕವನ್ನೋ ಹೂಗಳನ್ನೋ, ಸಿಹಿಯನ್ನೋ ಕಳಿಸಿ ಕೊಡಿ. ಅದು ನಿಮ್ಮ ಸಂದೇಶವನ್ನು ಸಾರುತ್ತದೆ: "ನಾನು ಇಲ್ಲಿ ಅಶಾಂತನಾಗಿದ್ದೇನೆ. ನನ್ನ ನಡವಳಿಕೆಯಿಂದ ನಮ್ಮಿಬ್ಬರ ಮಧ್ಯೆ ಏರ್ಪಟ್ಟ ದೊಡ್ಡ ಕಂದ ರಕ್ಕೆ ಸೇತುವೆಯನ್ನು ಕಟ್ಟಲು ಆಸೆ ಪಟ್ಟು ಕಳಿಸುತ್ತಿದ್ದೇನೆ. ನೀವು ಇದನ್ನು ಸ್ವೀಕರಿಸುತ್ತೀ ರೆಂದು ನಂಬುತ್ತೇನೆ."

ಕ್ಷಮೆ ಹೃದಯದ ಎಂತಹ ಗಾಯವನ್ನಾದರೂ ಮಾಗಿಸೀತು. ✪



"ಆಕಾಶವಾಣಿ. ಇದು, ರಾತ್ರಿ ಏಳು ಗಂಟೆಯ ವಿಶೇಷ ವಾರ್ತಾ ಸಮಾಚಾರ. ಇನ್ನು ಅರ್ಧ ಘಂಟೆಯೊಳಗಾಗಿ ಭಯಂಕರ ಭೂಕಂಪವಾಗುವ ಸೂಚನೆಯಿದ್ದು, ಅದರ ಪರಿಣಾಮವಾಗಿ, ಈ ನಗರ ಮತ್ತು ಸುತ್ತಲಿನ ಅನೇಕ ಹಳ್ಳಿಗಳು ಸಂಪೂರ್ಣ ವಾಗಿ ನಾಶವಾಗುವ ಸಂಭವವಿದೆ. ನಾಗರಿಕರು ಸೂಚನೆಯನ್ನು ಗಮನಿಸಿ ಸೂಕ್ತ ಮುನ್ನೆಚ್ಚರಿಕೆ ಕಾರ್ಯಗಳನ್ನು ಕೈಗೊಳ್ಳುವುದು.

"ಇಲ್ಲಿಗೆ ವಾರ್ತಾ ಸಮಾಚಾರ ಮುಗಿಯಿತು. ಭೂಕಂಪದ ನಂತರ ವಾರ್ತೆಯನ್ನು ಮುಂದುವರಿಸಲಾಗುವುದು."

■ ■ ■

ಗುಂಡ, ತನ್ನ ಮದುವೆಗಾಗಿ ಸಾಲ ಬೇಕೆಂದು, ಬ್ಯಾಂಕಿಗೆ ಅರ್ಜಿ ಸಲ್ಲಿಸಿದ. ಕೇವಲ ಒಂದೇ ವಾರದಲ್ಲಿ, ತಿರಸ್ಕೃತವಾದ ಅವನ ಅರ್ಜಿ ಮರಳಿ ಬಂತು. ತಿರಸ್ಕೃತ ವಾದುದಕ್ಕೆ ಬ್ಯಾಂಕಿನವರು ಕೊಟ್ಟ ಕಾರಣ ಹೀಗಿತ್ತು: "ನಾವು ಸಾಲ ಕೊಡುವುದು, ದೇಶ ಹಿತ ಸಾಧಿಸುವ ಯೋಜನಾ ಕಾರ್ಯಗಳಿಗೆ ಮಾತ್ರ!"

# ಸ್ವಚ್ಛ, ಆಹ್ಲಾದಕರ ಶ್ವಾಸ
# ಆರೋಗ್ಯಕರ, ಗಟ್ಟಿ ಹಲ್ಲುಗಳು



## ಕೋಲ್ಗೇಟ್ ಡೆಂಟಲ್ ಕ್ರೀಮ್‌ನ ಕೊಡುಗೆ

ಪ್ರತಿ ಸಲ ಊಟವಾದ ಮೇಲೆ ಕೋಲ್ಗೇಟ್‌ನಿಂದ ಹಲ್ಲುಜ್ಜಿರಿ. ಇದು ಜಗತ್ತಿನಾದ್ಯಂತ ದಂತವೈದ್ಯರು ಶಿಫಾರಸು ಮಾಡುವ ರೀತಿಯಲ್ಲಿ ನಿಮ್ಮ ಹಲ್ಲುಗಳಿಗೆ ರಕ್ಷಣೆ ನೀಡುತ್ತದೆ.

ಹಲ್ಲುಗಳೆಡೆಯಲ್ಲಿ ಉಳಿಯುವ ಆಹಾರ ಕಣಗಳಲ್ಲಿ ರೋಗಾಣುಗಳು ಬೆಳೆಯುತ್ತವೆ. ಇವು ಉಸಿರಿನ ದುರ್ವಾಸನೆಗೆ ಕಾರಣವಾಗುತ್ತವೆ– ಆಮೇಲೆ ನೋಯುವ ದಂತ ಕ್ಷಯವನ್ನುಂಟುಮಾಡುತ್ತವೆ.

ಆದುದರಿಂದ ಯಾವಾಗಲೂ ಆಹಾರವನ್ನು ಸೇವಿಸಿದ ನಂತರ ಕೋಲ್ಗೇಟ್ ರೀತಿಯಲ್ಲಿ ಹಲ್ಲುಜ್ಜಿರಿ. ನಿಮ್ಮ ಶ್ವಾಸವನ್ನು ಶುಚಿಗೊಳಿಸಲು, ಹಲ್ಲುಗಳನ್ನು ಬಿಳುಪಾಗಿಸಲು ಮತ್ತು ದಂತಕ್ಷಯವನ್ನು ಎದುರಿಸಲು ಇದು ಅತ್ಯಂತ ಪರಿಣಾಮಕಾರಿ ಎಂದು ಪ್ರಮಾಣಿತವಾಗಿದೆ.

ಕೋಲ್ಗೇಟ್‌ನಲ್ಲಿ ಆಹ್ಲಾದಕರವಾದ ಪೆಪ್ಪರ್‌ಮಿಂಟ್‌ನ ರುಚಿಯಿದೆ. ಆದ್ದರಿಂದ, ಅದರಿಂದ ಹಲ್ಲುಜ್ಜುವುದು ಆನಂದದಾಯಕವಾಗುತ್ತದೆ.

ಕೋಲ್ಗೇಟ್‌ನ ವಿಶ್ವಸನೀಯ ಸೂತ್ರವು ಕೆಲಸ ಮಾಡುವ ರೀತಿ:



ಉಸಿರಿನ ದುರ್ವಾಸನೆಯನ್ನು ಮತ್ತು ದಂತಕ್ಷಯವನ್ನು ಉಂಟುಮಾಡುವ ರೋಗಾಣುಗಳು ನಿಮ್ಮ ಹಲ್ಲುಗಳೆಡೆಯಲ್ಲಿ ಸಿಕ್ಕಿಕೊಂಡ ಆಹಾರ ಕಣಗಳಲ್ಲಿ ಬೆಳೆಯುತ್ತವೆ..



ಕೋಲ್ಗೇಟ್‌ನ ಅಪೂರ್ವವಾದ ಕಾರ್ಯಶೀಲ ನೊರೆ ಹಲ್ಲುಗಳೆಡೆಯನ್ನು ಆಳವಾಗಿ ಪ್ರವೇಶಿಸುತ್ತದೆ ಮತ್ತು ಅಪಾಯಕರವಾದ ಆಹಾರ ಕಣಗಳನ್ನೂ ರೋಗಾಣುಗಳನ್ನೂ ಹೋಗಲಾಡಿಸುತ್ತದೆ.



ಫಲಿತಾಂಶ: ಆಕರ್ಷಕವಾದ, ಬಿಳುಪಾದ ಹಲ್ಲುಗಳು. ಆತ್ಮವಿಶ್ವಾಸವನ್ನುಂಟುಮಾಡುವ ಶುಚಿಯಾದ ಉಸಿರು ಮತ್ತು ದಂತಕ್ಷಯದ ವಿರುದ್ಧ ರಕ್ಷಣೆ.

**ಕೋಲ್ಗೇಟ್ ಡೆಂಟಲ್ ಕ್ರೀಮ್‌ನಿಂದ ಉಸಿರಿನ ದುರ್ವಾಸನೆಯನ್ನು ನಿವಾರಿಸಿರಿ... ದಂತಕ್ಷಯವನ್ನು ಎದುರಿಸಿರಿ.**




ಹಲ್ಲುಗಳ ಸಂಪೂರ್ಣ ರಕ್ಷಣೆಗಾಗಿ ಕೋಲ್ಗೇಟ್ ಟ್ರಿಗಾರ್ಡ್ ಟೂತ್‌ಬ್ರಶ್‌ಗಳನ್ನು ಉಪಯೋಗಿಸಿರಿ .. ಅವು ಮೂರು ಪಟ್ಟು ಅಧಿಕ ಉತ್ತಮವಾಗಿರುತ್ತವೆ. ಹಲ್ಲಿನ ಎನಾಮೆಲನ್ನು ರಕ್ಷಿಸುತ್ತವೆ.

1 ಹಲ್ಲುಗಳ ಪ್ಲಾಕ್‌ನ ವಿರುದ್ಧ
2 ರಕ್ಷಣೆ ನೀಡುತ್ತವೆ.
3 ಒಸಡುಗಳನ್ನು ರಕ್ಷಿಸುತ್ತವೆ.

DC.G.74 KN

# ಇದುವೆ ಜೀವ ಇದು ಜೀವನ

ನಾನು ಈ ಹಿಂದೆ ವಾಣಿಜ್ಯ ವಿದ್ಯಾಶಾಲೆಯೊಂದರಲ್ಲಿ ಬೋಧಕನಾಗಿ ಕೆಲಸ ಮಾಡುತ್ತಿದ್ದ ಸಮಯ. ಕೆಲವು ಹಳೆಯ ವಿದ್ಯಾರ್ಥಿಗಳು ಟೈಪ್ ಮಾಡುತ್ತಿದ್ದರು. ಮತ್ತೆ ಕೆಲವರು ನಾಲ್ಕು ದಿವಸಗಳ ಹಿಂದಷ್ಟೇ ಬಂದು ಸೇರಿದವರು. ಪ್ರಾಯಶಃ ಅವರು ಬೆರಳಚ್ಚು ಯಂತ್ರವನ್ನು ಇದಕ್ಕೆ ಹಿಂದೆಂದೂ ನೋಡಿರಲಾರರು. ನಾನು ನನ್ನ ಬೇರೆ ಯಾವುದೋ ಕೆಲಸದಲ್ಲಿ ನಿರತನಾಗಿದ್ದೆ. ಇದ್ದಕ್ಕಿದ್ದಂತೆ ಮೌನ ಮುರಿದು, "ಸರ್" ಎನ್ನುವ ಧ್ವನಿ ಕೇಳಿಸಿತು. ನಾನು ತಲೆಯೆತ್ತಿ ನೋಡಿದೆ. ಹೊಸದಾಗಿ ಸೇರಿದವರಲ್ಲೊಬ್ಬ ಎದ್ದು ನಿಂತಿದ್ದ. ಅವನ ಮುಖ ಪೇಲವವಾಗಿ, ಯಾವುದೋ ಮಹಾಪರಾಧ ವೆಸಗಿದವನಂತೆ ದೀನ ಸ್ವರದಲ್ಲಿ, "ಸರ್, ನಾನು ಹಾಕಿದ್ದ ಪೇಪರ್ ಈ ಮಿಷನ್ನಿನ ಒಳಗಡೆ ಹೋಗಿಬಿಡ್ತು ಸರ್!" ಎಂದು ನುಡಿದ. ನನಗೆ ಅವನ ಮಾತನ್ನು ಕೇಳಿದ ಸ್ವಲ್ಪ ಹೊತ್ತು ಅವನು ಏನು ಹೇಳುತ್ತಿದ್ದಾನೆನ್ನುವುದು ಹೊಳೆಯಲಿಲ್ಲ. ಅಷ್ಟು ಹೊತ್ತಿಗೆ ಇವನ ಮಾತನ್ನು ಕೇಳಿಸಿಕೊಂಡ ಇತರ ವಿದ್ಯಾರ್ಥಿಗಳು 'ಗೊಳ್' ಎಂದು ಜೋರಾಗಿ ನಗಲು ಪ್ರಾರಂಭಿಸಿದರು. ನಾನು ಸಾವಧಾನವಾಗಿ ವಿಷಯವನ್ನು ಪರಿಶೀಲಿಸಿದೆ. ನನಗೂ ನಗು ತಡೆಯಲಾಗಲಿಲ್ಲವಾದರೂ ನಾನು ನಗಲಿಲ್ಲ. ಆದದ್ದಿಷ್ಟೇ, ಆ ಹುಡುಗ ತನಗೆ ಟೈಪು ಮಾಡಲು ಕೊಟ್ಟ ವಿಷಯದ ಕಡೆಗೆ ನೋಡುತ್ತಾ ಟೈಪು ಮಾಡುತ್ತಿದ್ದ. ಪೇಪರ್ ಮುಗಿದದ್ದು ಅವನ ಗಮನಕ್ಕೆ ಬಂದಿರಲಿಲ್ಲ. ಪೇಪರ್ ಮುಗಿದ ನಂತರವೂ ನಾಲ್ಕು ಸಾಲನ್ನು ಸಿಲಿಂಡರ್ ಮೇಲೆ ಹೊಡೆದಿದ್ದ. ಪೇಪರ್ ಮುಂದಕ್ಕೆ ಬಿದ್ದುಹೋಗಿತ್ತು. ಸ್ವಲ್ಪ ಸಮಯದ ನಂತರ ಏನೋ ವ್ಯತ್ಯಾಸ ಕಂಡಿರಬೇಕು. ನೋಡುತ್ತಾನೆ। ಮಿಷಿನ್ನಿನಲ್ಲಿ ಪೇಪರ್ ಇರಲಿಲ್ಲ. ಪೇಪರನ್ನು ಮಿಷನ್ನು ನುಂಗಿ ಹಾಕಿರಬೇಕೆಂಬುದೇ ಅವನ ಎಣಿಕೆಯಾಗಿತ್ತು. ಅನಂತರ ಅವನಿಗೆ ಸರಿಯಾಗಿ ವಿವರಿಸಿದೆ. ಮುಂದೆಂದೂ ಅವನ ಪೇಪರನ್ನು ಮಿಷನ್ನು ನುಂಗಿ ಹಾಕಲಿಲ್ಲ.

—ಹೊಸ್ಕೆರೆ ಶಂ. ಶಿವಸ್ವಾಮಿ

ಫೆಬ್ರುವರಿ ಎಂಟರ ರಾತ್ರಿ ಸುಮಾರು ೧೧ ಘಂಟೆಗೆ ಬೆಂಗಳೂರಿಗೆಂದು ದಾವಣಗೆರೆಯಲ್ಲಿ ಬಸ್ ಹತ್ತಿದೆ. ಜೊತೆಯಲ್ಲಿ ನನ್ನ ಮಾವನವರಿದ್ದರು (ಮುದುಕರು). ಒಂದೆರಡು ನಿಮಿಷಗಳಲ್ಲಿ ಬಸ್ಸು ಹೊರಟಿತು. ಕಂಡಕ್ಟರ್ ಇನ್ನೂ ಟಿಕೆಟ್ಟು ಕೊಡುತ್ತಲೇ ಇದ್ದ. ಎರಡು ಸೀಟರ್ ಕಡೆಗೆ ಒಬ್ಬ ಯುವಕನ ಪಕ್ಕದಲ್ಲಿ ಜಾಗಮಾಡಿ ನನ್ನ ಮಾವನವರನ್ನು ಕುಳ್ಳಿರಿಸಿದೆ. ನಾನು ಸೀಟಿಗಾಗಿ ತಡಕಾಡುತ್ತಿದ್ದೆ. ಪಕ್ಕದಲ್ಲೇ ಮೂರು ಸೀಟರ್ ಕಡೆಯಲ್ಲಿ ಮಧ್ಯದಲ್ಲಿ ಕುಳಿತ ಯುವಕ ತನ್ನ ಎಡಪಕ್ಕದಲ್ಲಿ ಸೀಟಿನ ಮೇಲೆ ಇಟ್ಟಿದ್ದ ತನ್ನ ಬ್ಯಾಗ್ ತೆಗೆದು ನನ್ನನ್ನು ಸ್ವಾಗತಿಸಿದ. ನೀಲಿ ಗ್ಯಾಬರ್ಡಿನ್ ಪ್ಯಾಂಟ್, ಟೆರಿಕಾಟ್ ಶರ್ಟ್, ಹೈಹೀಲ್ಡ್ ಶೂಸ್, ಓಮ್ಯಾಕ್ಸ್ ಕೈಗಡಿಯಾರ ಇತ್ಯಾದಿಯಾಗಿ ಎಲ್ಲಾ ರೀತಿಯಲ್ಲೂ ಅತ್ಯಾಧುನಿಕ ಯುವಕ. ಈತನಿಗೆ ತರುಣಿಯನ್ನು ಪಕ್ಕದಲ್ಲಿ ಕೂಡಿಸಿಕೊಳ್ಳುವ ಹಂಬಲವನ್ನು ಕಂಡು ಬೇಸರವಾದರೂ ಅಷ್ಟೊಂದು ಸಮಯ ನಿಲ್ಲಬೇಕೆಂಬ ಭಯದಿಂದ ಅವನ ಪಕ್ಕದಲ್ಲೇ ಕುಳಿತೆ. ಇನ್ನೆರಡು ನಿಮಿಷಗಳಲ್ಲಿ ದೀಪಗಳು ಆರಿದವು

ನನ್ನ ಪಕ್ಕದಲ್ಲಿದ್ದ ಯುವಕ ಏನೋ ನೆನಪಾದವನಂತೆ ಎದ್ದು, ನನ್ನ ಮಾವನವರ ಪಕ್ಕದಲ್ಲಿದ್ದ ಯುವಕನಿಗೆ, "ದಯವಿಟ್ಟು ನೀವು ಇಲ್ಲಿ ಬನ್ನಿ, ಇವರು ಅಲ್ಲಿಗೆ ಹೋಗಲಿ, ಅಲ್ಲಿ ಇವರು ಆರಾಮವಾಗಿ ಕೂಡಬಹುದು," ಎಂದ. ಅವನು ಏನೂ ಮಾತನಾಡದೆ ನನ್ನ ಜಾಗಕ್ಕೆ ಬಂದ, ನಾನು ನನ್ನ ಮಾವನವರ ಪಕ್ಕದಲ್ಲಿ ಕುಳಿತೆ. ಎಲ್ಲಾ ಯುವಕರೂ ಒಂದೇ ಎಂದು ತಿಳಿದಿದ್ದ ನನಗೆ ಅಂದು ಬಸ್ಸಿನಲ್ಲಿ ಜ್ಞಾನೋದಯವಾಯಿತು. —ಪ್ರಭಾ

ಸೈನ್ಯದಲ್ಲಿ ಅಧಿಕಾರಿಯಾಗಿರುವ ನನ್ನ ಮಿತ್ರರೊಬ್ಬರಿಗೆ ಬಂದ ಅನುಭವವಿದು:

ಒಮ್ಮೆ ಅವರಿಗೆ ಹಿಮಾಲಯದ ದಟ್ಟ ಅಡವಿಗಳಲ್ಲೊಂದಾದ ಶಿವಾಲಿಕ ಶ್ರೇಣಿಯ ಅಡವಿಯಲ್ಲಿ ಒಂದು ಡಾಕ್ ಬಂಗಲೆಯಲ್ಲಿ ತಂಗುವ ಪ್ರಸಂಗ ಬಂತು. ಅಲ್ಲಿಯ ಹಳೆಯ ಸಂದರ್ಶಕರ ಪುಸ್ತಕ ಕಣ್ಣಿಗೆ ಬಿದ್ದಾಗ ಸಹಜ ಕುತೂಹಲದಿಂದ ಒಂದೊಂದೇ ಪುಟ ತೆರೆದು ಓದುತ್ತ ಕುಳಿತರು.

ಒಂದು ಪುಟದಲ್ಲಿ ಕಂಡ ಒಕ್ಕಣೆಯಿದು: "ಯುರೋಪಿನಲ್ಲಿ ಮಾತ್ರ ಕಂಡುಬರುವ ಅನೇಕ ಪಕ್ಷಿಗಳು ಈ ಅರಣ್ಯದಲ್ಲಿ ನೋಡಸಿಕ್ಕುತ್ತವೆ. ಈ ಅಂಶವನ್ನು ತಜ್ಞರು ಪರಿಶೀಲಿಸಬೇಕು. ಇಲ್ಲಿಂದ ತುಸು ದೂರದಲ್ಲೇ ಒಂದು ಸುಂದರ ಜಲಾಶಯವಿದೆ. ಅದರ ಸಮೀಪದಲ್ಲಿ ಹಲವಾರು ಬಗೆಯ ಬೆಲೆಬಾಳುವ ಗಿಡಮರಗಳಿವೆ. ಅಲ್ಲಿಗೆ ಹೋಗಲೊಂದು ಕಾಲುದಾರಿಯಿದೆ. ಅಲ್ಲಿ ನಾನು ಅನೇಕ ಹುಲಿ ಹೆಜ್ಜೆಗಳನ್ನೂ ಕಂಡಿದ್ದೇನೆ. ........." ಎಂದೆಲ್ಲ ಬ್ರಿಟಿಷ್ ಅರಣ್ಯಾಧಿಕಾರಿ ಬರೆದಿದ್ದ.

ಇನ್ನೊಂದು ಪುಟದಲ್ಲಿ, "ಗೋಡೆಗೆ ಹೊಸದಾಗಿ ಬಣ್ಣ ಹಚ್ಚಿಸಬೇಕು. ಮಂಚಗಳಿಗೆ ಡನ್‌ಲಪ್ ಗಾದಿಗಳನ್ನು ಒದಗಿಸಬೇಕು. ಕೋಣೆಯಲ್ಲಿರುವ ಅಲಂಕಾರಿಕ ವಸ್ತುಗಳನ್ನೆಲ್ಲ ಕೂಡಲೇ ಬದಲಿಸಬೇಕು," ಎಂದೊಬ್ಬ ಭಾರತೀಯ ಅಧಿಕಾರಿ ಬರೆದಿದ್ದ.

— ಎ. ಎನ್. ನಾಡಗೀರ

ನನ್ನ ಸಹೋದ್ಯೋಗಿ ಮಿತ್ರರೊಬ್ಬರನ್ನು ಜನಗಣತಿಯ ಕಾರ್ಯಕ್ಕೆ ನಿಯೋಜಿಸಲಾಗಿದೆ. ಈ ಕಾರ್ಯದ ಮೇಲೆ ಅವರು ಒಂದು ಮನೆಗೆ ಹೋದಾಗ, ಆ ಮನೆಯ ವಯಸ್ಸಾದ ಗೃಹಿಣಿಯು ನನ್ನ ಮಿತ್ರರನ್ನು ಬಹಳ ಆದರದಿಂದ ಆಹ್ವಾನಿಸಿ, ಒಂದು ಲೋಟ ಒಳ್ಳೆಯ ಕಾಫಿಯನ್ನು ಕೊಟ್ಟು, ಮದುವೆಯ ವಯಸ್ಸಿಗೆ ಬಂದಿರುವ ತಮ್ಮ ಹೆಣ್ಣುಮಕ್ಕಳನ್ನು ಪರಿಚಯಿಸುತ್ತ ಹೇಳಿದರಂತೆ: "ಸ್ವಾಮೀ, ಈ ನನ್ನ ಹೆಣ್ಣುಮಕ್ಕಳು ಸುಶಿಕ್ಷಿತರು. ನಾವು ಬಡಬ್ರಾಹ್ಮಣರು; ಹೀಗಾಗಿ ಈ ಹೆಣ್ಣುಮಕ್ಕಳಿಗೆ ನೌಕರಿಯೂ ಸಿಗುತ್ತಿಲ್ಲ, ನೆಂಟಸ್ತಿಕೆಯೂ ಕುದುರುತ್ತಿಲ್ಲ. ನೀವು ಹೇಗಿದ್ದರೂ ಜನಗಣತಿಯ ಕೆಲಸಕ್ಕಾಗಿ ನೂರಾರು ಮನೆಗಳಿಗೆ ಭೇಟಿಕೊಡುತ್ತೀರಲ್ಲ, ದಯವಿಟ್ಟು ನಮ್ಮ ಮಕ್ಕಳ ನೆಂಟಸ್ತಿಕೆಗೆ ಸರಿಹೊಂದುವ ಹುಡುಗರು ಸಿಕ್ಕಿದರೆ, ಅವರ ವಿವರಗಳನ್ನು ನನಗೆ ತಿಳಿಸಿ. ಅವರ ನಕ್ಷತ್ರ ಮತ್ತು ಗೋತ್ರಗಳನ್ನು ಕೇಳುವುದನ್ನು ಮಾತ್ರ ಮರೆಯಬೇಡಿ. ಬಡವರಾದ ನಮ್ಮನ್ನು ಮರೆಯಬೇಡಿ. ಹೀಗೆಯೇ ಆಗಿಂದಾಗ್ಗೆ ದಯವಿಟ್ಟು ಬರುತ್ತಾ ಇರೀಪ್ಪಾ. ನಮಸ್ಕಾರ!" —ಎಸ್. ಬಾಲಚಂದ್ರರಾವ



# ವೆಂಕಟಗಿರಿ ಆಕೆಯ ಕುಲದೈವವಾದರು

**ಶಾರದಾ ಜಡೆ**

ಸುಮಾರು ೨೫ ವರುಷಕ್ಕೂ ಹಿಂದಿನ ಘಟನೆ. ಶ್ರೀಮಾನ್ ಗಿರಿಯವರಿನ್ನೂ ಟ್ರೇಡ್ ಯೂನಿಯನ್ ಪ್ರೆಸಿಡೆಂಟ್ ಆಗಿದ್ದ ಕಾಲ. ಕಾರ್ಮಿಕ ಸಂಘಟನೆಗಾಗಿ ಭಾರತದಾದ್ಯಂತ ಮಿಂಚಿನವೇಗದಲ್ಲಿ ಸಂಚರಿಸುತ್ತಿದ್ದರು. ಅವರು ಕೆಚ್ಚೆದೆಯ ದಲಿತ ನಾಯಕರೆಂದೂ, ದಲಿತರಿಗಾಗಿ ಅವರ ಹೃದಯ ಸದಾ ಮಿಡಿಯುವುದೆಂದೂ ಪತ್ರಿಕೆಯಲ್ಲಿ ಓದಿ ತಿಳಿದಿದ್ದೆ. ಈಗ ಕಂಡುಕೇಳುವ ಸುಯೋಗವೂ ಕೂಡಿ ಬಂತು. ಸುದೈವದಿಂದ ಅವರು ನಮ್ಮ ಹೊಸಪೇಟೆಗೂ ಬಂದರು. ಅವರ ಭಾಷಣ ಕೇಳಲು ಮುಂಚಿತವಾಗಿಯೇ ಹೋಗಿ ಕುಳಿತೆ.

ಶ್ರೀ ಗಿರಿಯವರು ಐ. ಎಸ್. ಆರ್. ಸಕ್ಕರೆ ಕಾರ್ಖಾನೆ ಕಾರ್ಮಿಕ ಸಂಘದ ಕಾರ್ಯಕ್ರಮ ಮುಗಿಸಿಕೊಂಡು ನೇರವಾಗಿ ನಾವು ಕಾಯುತ್ತಿದ್ದ ಟ್ರೇನಿಂಗ್ ಸ್ಕೂಲಿಗೆ ಬಂದರು. ಅವರು ಸಾದಾ ಖಾಕಿ ಉಡುಪು ಧರಿಸಿದ್ದರೆಂದು ನೆನಪು. ಕಾರ್ಯಕರ್ತರು ತೋರಿದ ಸ್ವಾಗತ, ಹಾರ ಇವುಗಳ ಕಡೆ ಅವರ ಗಮನವೇ ಇದ್ದಂತಿರಲಿಲ್ಲ. ಯಾವ ಔಪಚಾರಿಕ ಮರ್ಯಾದೆಗೂ ಕಾಯದೆ ದಡದಡನೆ ಒಳಗೆ ಬಂದವರೇ ವೇದಿಕೆ ಏರಿ ಕುಳಿತೇಬಿಟ್ಟರು ! ಕಾರ್ಯಕರ್ತರು ಪರಿಚಯಾತ್ಮಕ ಮಾತೆರಡನ್ನು ಹೇಳಿ ಮುಗಿಸುವುದಕ್ಕೂ ಇಲ್ಲ, ಶ್ರೀ ಗಿರಿಯವರು ತಟ್ಟನೆ ಎದ್ದುನಿಂತು, ಭಾಷಣ ಶುರುಮಾಡಿದರು. ಕಾರ್ಮಿಕರ ಹಕ್ಕುಬಾಧ್ಯತೆ ಕುರಿತು ಉಜ್ವಲ ಭಾಷಣ. "ಕಾರ್ಮಿಕರಿಗೆ, ಹಕ್ಕುಬಾಧ್ಯತೆಗಳನ್ನು ಯಾರು ಕೊಡುತ್ತಾರೆ? ಅವನ್ನು ಅವರೇ ಸ್ವಪ್ರಯತ್ನದಿಂದ ಗಳಿಸಿಕೊಳ್ಳಬೇಕು. ಅದಕ್ಕೆ ಮುಖ್ಯವಾಗಿ ಸಂಘಟನೆ ಬೇಕು," ಎಂದು ಭಾಷಣದುದ್ದಕ್ಕೂ ಸವಾಲು. ಕಾರ್ಮಿಕರಿಗೆ ಮಾತ್ರವೇ ಅಲ್ಲ. ಮಾಲೀಕರಿಗೂ ಇತ್ತು ಎಚ್ಚರಿಕೆ: "ಮಾಲೀಕರೇ! ಬೆವರಿನ ಬೆಲೆಯನ್ನು ಅರ್ಥಮಾಡಿಕೊಳ್ಳಿ, ದಲಿತರ ಕಣ್ಣಿಂದ ನೀರಿಳಿಸಿದ್ದಾದರೆ, ನೀವು ನಾವೆನ್ನದೆ ಒಟ್ಟು ದೇಶವೇ ನಾಶವಾದೀತು !" ಹೀಗೆ ಸಾಗಿತ್ತು ಆ ನಾಯಕನ ವಾಗ್ಧಾರೆ !

ಅದೇ ಸಮಯಕ್ಕೆ, ನನ್ನ ಹಿಂದೆ ಕುಳಿತಿದ್ದವರೊಬ್ಬರು ನನ್ನನ್ನು ಒತ್ತಿದಂತಾಯಿತು. ಅವರಿಗೆ ಸರಿಯಾಗಿ ಕೂಡಲು ಆಗದಂತೆ ಸ್ಥಳ ಸಂಕೋಚವಾಗಿದೆಯೋ ಏನೋ, ಎಂದುಕೊಂಡು ನಾನು ಇನ್ನೂ ಸ್ವಲ್ಪ ಮುಂದಕ್ಕೆ

ಕೊಟ್ಕೊಂಡಿ," ಎಂದು ತೆಲುಗಿನಲ್ಲಿ ಹೇಳಿದೆ. ಆಗ, ಹೊಸಪೇಟೆಯಲ್ಲಿ ತೆಲುಗು ಭಾಷೆಯ ಪ್ರಾಬಲ್ಯವೇ ಇತ್ತು. ಅಲ್ಲದೆ ಆಕೆಯನ್ನು ನೋಡಿದರೆ, ಆಂಧ್ರ ಪ್ರದೇಶದವರಂತೆ ಕಾಣುತ್ತಿದ್ದರು, ಅದಕ್ಕೇ ತೆಲಗಿನಲ್ಲಿ ಹೇಳಿದೆ. ಆಕೆಗೆ ಸುಮಾರು ೩೦ ವರ್ಷವಿರಬಹುದು, ಬಿಳಿಸೀರೆ, ರವಿಕೆ ತೊಟ್ಟಿದ್ದರು. ನಾನು ತೆಲಗಿನಲ್ಲಿ ಹೇಳಿದ್ದು ಆಕೆಗೆ ಹಿತವೆನಿಸಿತೋ ಏನೋ, ಸರಿದು ನನ್ನ ಪಕ್ಕಕ್ಕೆ ಕೂತುಕೊಂಡರು. ಒಮ್ಮೆ ಏಕೋ ನಾನು ತಿರುಗಿ ನೋಡಿದಾಗ ಆಕೆ, ತನ್ನ ಸೀರೆಯ ಸೆರಗಿನಿಂದ ಕಣ್ಣೊರಸಿಕೊಳ್ಳುತ್ತಿರುವುದು ಕಾಣಿಸಿತು; ಮನಸ್ಸಿಗೆ ವ್ಯಥೆಯಾಯಿತು. 'ಏಕೆ ?' ಎಂದು ಸನ್ನೆಮಾಡಿದೆ. ಆಕೆ, ತನ್ನ ಕೈಲಿ ಮುದುರಿಟ್ಟುಕೊಂಡಿದ್ದ ಒಂದು ಕಾಗದವನ್ನು ತೋರಿಸಿ, "ಇದನ್ನು ಗಿರಿಯವರಿಗೆ ಕೊಡಬೇಕಾಗಿದೆ, ನಾನು ವೇದಿಕೆಯ ಮೇಲೆ ಹೋಗಲಾರೆ, ಇನ್ನವರು ಹೊರಟೇ ಹೋಗುತ್ತಾರೆ, ಸಿಕ್ಕುವುದಿಲ್ಲ," ಎಂದು ಬಹಳ ಮೆಲ್ಲನೆ ಉಸುರಿದರು. ಅವಳ ಪೇಚಾಟವನ್ನು ನೋಡಲಾರದೆ ನಾನು, "ನಾನು ಬೇಕಾದ್ರೆ ಕೊಡ್ತೀನಿ, ನೀವು ನನ್ನ ಜೊತೆಗೆ ಬನ್ನಿ," ಎಂದೆ. ಆಕೆ, ತಕ್ಷಣ ಆ ಕಾಗದವನ್ನು ನನ್ನ ಕೈಗೆ ಕೊಟ್ಟುಬಿಟ್ಟಳು. ಅಷ್ಟರಲ್ಲಿ, ವಂದನಾರ್ಪಣೆ ಮುಗಿದು, ಗಿರಿಯವರು ವೇದಿಕೆಯಿಂದಿಳಿದು ಹೊರಗೆ ಹೊರಡುವವರಿದ್ದರು. ನಾನು ಬೇಗನೆ ಹೋಗಿ ವಂದಿಸಿ, ಆ ಪತ್ರವನ್ನು ಅವರ ಕೈಗಿತ್ತೆ. ತೆರೆದು ನೋಡಿದರು; ಏನೋ ಹೊಳೆದಂತಾಗಿ, "ಆಕೆ ಎಲ್ಲಿ?" ಎಂದರು. ಹಿಂದಿರುಗಿ ನೋಡಿದರೆ ಆಕೆ ನನ್ನ ಜೊತೆ ಬಂದೇ ಇಲ್ಲ. ಮತ್ತಿಷ್ಟು ದೂರ ಹೋಗಿ, ಗೋಡೆಗೆ ಆತುಕೊಂಡು ಕಣ್ಣೊರಸಿಕೊಳ್ಳುತ್ತಿದ್ದಾಳೆ. ನಾನು ವಿನಮ್ರವಾಗಿ, "ಆಕೆ ಏಕೋ ಅಳುತ್ತಿದ್ದಾಳೆ ಸಾರ್, ಇಲ್ಲಿಗೆ ಬರಲು ಹೆದರಿದಂತಿದೆ," ಎಂದು ಹೇಳಿ, ಆಕೆ ಇದ್ದ ಕಡೆ ಕೈ ತೋರಿಸಿದೆ. ಗಿರಿಯವರು ಸುತ್ತಲಿದ್ದವರನ್ನು ಸೀಳಿಕೊಂಡು, ಬಾಣದಂತೆ ಆಕೆ ಇದ್ದೆಡೆಗೆ ಹೆಜ್ಜೆ ಹಾಕಿದರು. ಆಕೆಗೇನೋ ಸಮಾಧಾನ ಹೇಳಿದಂತೆ ತೋರಿತು. ಎರಡೇ ಕ್ಷಣ! ಆ ಕಾಗದವನ್ನು ತಮ್ಮ ಜೇಬಿನಲ್ಲಿಟ್ಟುಕೊಂಡು ಮತ್ತೆ ಅಷ್ಟೇ ಬಿರುಸಾಗಿ ಹಿಂದಕ್ಕೆ ಬಂದರು, ಕಾರು ಹತ್ತಿ ಹೊರಟುಹೋದರು. ನೆರೆದಿದ್ದ ಜನವೆಲ್ಲಾ ಚಕಿತರಾದರು. ಆದರೆ ಸಮಾಚಾರವೇನೆಂದು ಮಾತ್ರ ಯಾರಿಗೂ ತಿಳಿಯಲಿಲ್ಲ. ಅಷ್ಟರಲ್ಲಿ ಆಕೆಯೂ ಹೊರಟು ಹೋಗಿದ್ದರು.

ಮುಂದೆ ಕೆಲದಿನಗಳ ನಂತರ ನಾನು ಡ್ಯಾಮಿಗೆ ಹೋಗಿದ್ದಾಗ, ಮತ್ತೆ ಆಕೆಯನ್ನು ಕಂಡೆ. ಆಕೆಯೇ ಮೊದಲು ನನ್ನ ಗುರುತು ಹಿಡಿದು, ಕೈಮುಗಿದರು. ಈಗ ತುಂಬಾ ಗೆಲುವಾಗಿದ್ದಂತೆ ತೋರಿತು. ಆದರಿಂದ, ಧೈರ್ಯಮಾಡಿ, "ಶ್ರೀ ಗಿರಿಯವರ ಭಾಷಣದ ದಿನ ನೀವೇನೋ ವ್ಯಥೆಯಲ್ಲಿದ್ದ ಹಾಗಿತ್ತು ಈಗ ಹಾಯಾಗಿದ್ದೀರಾ ?" ಎಂದು ಕೇಳಿದೆ. ಆಕೆ, ನನ್ನ ಎರಡೂ ಕೈಗಳನ್ನೂ ಬಿಗಿಯಾಗಿ ಹಿಡಿದುಕೊಂಡು, "ನೀವಿಲ್ಲಿ ಸ್ವಲ್ಪ ಕೂಡ್ತೀರಾ, ಎಲ್ಲಾ ಹೇಳ್ತೀನಿ" ಎಂದರು. ನನಗೂ ವಿಷಯ ತಿಳಿದುಕೊಳ್ಳುವ ಹಂಬಲ. ಇಬ್ಬರೂ ಅಲ್ಲೇ ಒಂದು ಮರವಡಿಯಲ್ಲಿ ಕುಳಿತೆವು. ಆಕೆ, ಸಂಗತಿಯನ್ನೆಲ್ಲಾ ವಿವರಿಸಿದರು:

"ನನ್ನ ಯಜಮಾನರು ಆಂಧ್ರಪ್ರದೇಶದ



"ಈಗ್ತಾನೆ ಡ್ಯೂಟಿ ಮುಗಿಸ್ಕೊಂಡ್ಬಂದ್ರಮ್ಮ ನಮ್ಮ ಜವಾನ್ರು. ಈಗೀಗ ಜೀವನ ಮಾಡೋದೆ ಕಷ್ಟವಾಗ್ಬಿಟ್ಟದೆ ನಮ್ಗೆ ಪೋಲಿಸ್ನೋರ ಹಾವಳಿಯಿಂದ."

ಕಾರಖಾನೆಯೊಂದರಲ್ಲಿ ಮೆಕ್ಯಾನಿಕ್ಕು. ನಮ್ಮ ಗ್ರಹಚಾರ, ಒಂದುದಿನ ಕೆಲಸ ಮಾಡುತ್ತಿರುವಾಗಲೇ ಮಿಷಿನ್ನಿನ ಚಕ್ರ ಬಡಿದು ಪ್ರಾಣಬಿಟ್ಟರು. ಕಾರ್ಖಾನೆಯವರು ಪರಿಹಾರ ಧನ ಕೊಡುತ್ತೇವೆಂದು ಬರೆದುಕೊಟ್ಟರು. ಆದರೆ, ಆರೆಂಟು ತಿಂಗಳಾದರೂ ಏನೂ ಕೊಡಲಿಲ್ಲ. ಮಾಲೀಕರಲ್ಲೂ ಸಂಘಕ್ಕೂ ತಾಕಲಾಡಿದ್ದಾಯಿತು. ಎರಡು ಸಣ್ಣ ಮಕ್ಕಳು. ನನಗೆ ಕೈಯಲ್ಲಿ ಕಾಸಿಲ್ಲ. ನಮ್ಮವರಿಗೆ ಕುಡಿಯುವ ಚಟ ಬೇರೇ ಇತ್ತು. ಅದರಿಂದಾಗಿ ಮೈತುಂಬಾ ಸಾಲವಾಗಿತ್ತು. ಸಾಲಗಾರರ ತಗಾದೆ ಸಹಿಸಲಾರದೇ ಇಲ್ಲಿ ನನ್ನ ತಮ್ಮನ ಮನೆಗೆ ಬಂದೆ. ಅವನೂ ಬಡವ. ಅವನ ಮೇಲೆ ಬಿದ್ದ ಭಾರ ಕಡಿಮೆಯಾಗಲಿ ಎಂದು ಎಲ್ಲಾದರೂ ಕೂಲಿಯಾದರೂ ಮಾಡಬೇಕೆಂದುಕೊಂಡೆ, ಅಷ್ಟರಲ್ಲಿ ಗಿರಿಯಪ್ಪ ಹೊಸಪೇಟೆಗೆ ಬಂದಿದ್ದಾರೆ ಎಂದು ಸುದ್ದಿ ತಿಳಿಯಿತು ಕೂಡಲೆ ಆ ಪತ್ರ ತೆಗೆದುಕೊಂಡು ಓಡಿಬಂದೆ. ಹಿಂದೆ ನಮ್ಮ ಕಾರ್ಖಾನೇಲಿ ಸಂಘ ಮಾಡಿಸಿದ್ದೂ ಅವರೇ. ಅವರು ಅಲ್ಲೂ ಭಾಷಣ ಮಾಡಿ, ಇಲ್ಲಿ ಹೇಳಿದ್ದೆಲ್ಲಾ ಹೇಳಿದ್ದರು. ಅದಕ್ಕೇ, ಅವರಿಗೆ ಪತ್ರ ತೋರಿಸಿದರೆ ಏನಾದರೂ ಸಹಾಯ ಆಗಬಹುದು ಎಂದುಕೊಂಡು ಹೊರಟು ಬಂದೆ. ಆದರೆ ನಾನು ಬರುವ ಹೊತ್ತಿಗೆ, ಅವರು ಬಂದು ವೇದಿಕೆ ಏರಿಬಿಟ್ಟಿದ್ದರು. ನನಗೆ ಅಲ್ಲಿಗೆ ಹೋಗಲು ಅಂಜಿಕೆ. ಇದ್ದ ಒಂದು ಆಸೇನೂ ಕೊಚ್ಚಿಹೋಯಿತೇ ಎಂದು ಎಂದು ಅಳುತ್ತಿದ್ದೆ. ಅಷ್ಟರಲ್ಲಿ ನೀವು ಬಂದು, ತುಂಬಾ ಉಪಕಾರ ಮಾಡಿದಿರಿ. ನಿಮ್ಮನ್ನು ಯಾವಾಗಲೂ ನೆನೆಯುತ್ತೇನೆ," ಎಂದರು. ನಾನು, "ಅದೇನು ಮಹಾ ಉಪಕಾರ ಬಿಡಿ, ಮುಂದೇನಾಯಿತು, ಹೇಳಿ," ಎಂದೆ. ಆಕೆ, ಮುಂದುವರಿಸಿದರು: "ಮುಂದೆ ಒಂದು ತಿಂಗಳಲ್ಲಿ ಕಾರ್ಖಾನೆಯವರೇ ನನ್ನನ್ನು ಕರೆಸಿ, ಎಲ್ಲಾ ಹಣ ಕೊಟ್ಟರಮ್ಮಾ. ಗಿರಿ ಅಪ್ಪ ಏನು ಹೇಳಿದರೋ ಏನು ಮಾಡಿದರೋ, ಒಂದೂ ಗೊತ್ತಿಲ್ಲ. ಈಗ ಸಾಲ ಎಲ್ಲಾ ತೀರಿಸಿ ಬಾಕೀ ಉಳಿದಿದ್ದರಲ್ಲಿ ಒಂದು ಸಣ್ಣ ಅಂಗಡಿ ಹಾಕಿಸಿ ಕೊಟ್ಟಿದ್ದಾನೆ, ತಮ್ಮ. ಹೇಗೋ ತಕ್ಕಮಟ್ಟಿಗೆ ನೆಮ್ಮದಿಯಾಗಿದ್ದೇವಮ್ಮಾ. ಎಲ್ಲಾ ಅವರ ಕೃಪೆ," ಎಂದು ಮುಗಿಸಿದಳು.

ಆಕೆಯ ಕುಲದೈವ ಶ್ರೀ ವೆಂಕಟಾಚಲಪತಿಯಂತೆ. ಪ್ರತಿ ಶನಿವಾರ ಪೂಜೆ. ಆ ಪಟದ ಪಕ್ಕದಲ್ಲೇ ಶ್ರೀ ವೆಂಕಟಗಿರಿಯವರ ಫೋಟೋವನ್ನು ಹಾಕಿದ್ದಾಳಂತೆ. ಅದಕ್ಕೂ ಕೂಡಿಯೇ ಹೂವಿನ ಹಾರ ಹಾಕಿ, ಕೈಮುಗಿಯುತ್ತಾಳಂತೆ. ಒಂದು ಕುಲದೈವ, ಮತ್ತೊಂದು ಇಷ್ಟ ದೈವ!

ನಮ್ಮ ನೆಚ್ಚಿನ ನಾಯಕ ಗಿರಿಯವರು ಇಂದು ನಮ್ಮ ಬಳಿ ಇಲ್ಲ. ಆದರೆ ಅವರು ಅದೆಷ್ಟು ದೀನ ದಲಿತರ ಮನೆಯಲ್ಲಿ ಪೂಜೆಗೊಳ್ಳುತ್ತಿದ್ದಾರೋ ಏನೋ. ●



ಕಲಾಕ್ಷೇತ್ರ ಕಾರ್ಯಕ್ರಮವೊಂದಕ್ಕೆ ಆಗಮಿಸಿದ್ದ ಮಹನೀಯರೊಬ್ಬರ ೬೦೦ ರೂ. ಇದ್ದ ಪರ್ಸು ನೂಕು-ನುಗ್ಗಲಿನಲ್ಲಿ ಬಿದ್ದುಹೋಯಿತು. ಪರ್ಸಿಗಾಗಿ ಹುಡುಕಾಡಿ. ಅವರಿವರನ್ನು ವಿಚಾರಿಸಿ ಸೋತ ಮಹನೀಯರು ಕೊನೆಗೆ ವೇದಿಕೆ ಹತ್ತಿ ಬಿನ್ನಯಿಸಿಕೊಂಡರು.

"ನಾಗರಿಕರೇ, ನೂಕುನುಗ್ಗಲಿನಲ್ಲಿ ನನ್ನ ಪರ್ಸ್ ಬಿದ್ದು ಹೋಗಿದೆ. ಪ್ರಜ್ಞಾವಂತರೇ ನೆರೆದಿರೋ ಇಲ್ಲಿ, ಬಹುಶಃ ಯಾರೂ ಅದನ್ನು ಅಪಹರಿಸಲಾರರು. ಆಕಸ್ಮಿಕವಾಗಿ, ಅದು ಯಾರಿಗಾದರೂ ದೊರೆತಿದ್ದಲ್ಲಿ ದಯವಿಟ್ಟು ತಂದುಕೊಡಿ. ಅವರ ಪ್ರಾಮಾಣಿಕತೆಗೆ ೫೦ ರೂ. ಬಹುಮಾನ ನೀಡುತ್ತೇನೆ...." ಮಹನೀಯರ ಬಿನ್ನಹ ಇನ್ನೂ ಮುಗಿದಿರಲಿಲ್ಲ ಅಷ್ಟರಲ್ಲಿ, ಮೂಲೆಯಿಂದೊಬ್ಬರು, "ನಾನು ೬೦ ರೂ. ಕೊಡುತ್ತೇನೆ."

—ಎ. ವೆಂಕಟೇಶಪ್ಪ



ಪುಸ್ತಕ ವಿಭಾಗ

# ನಾಧದ್ವೀಪದ ಪ್ರಜಾಪ್ರಭುದೇವನ ಜಾತ್ರೆ



ಯಾತ್ರಿಕ

# ನಾಥ ದ್ವೀಪದ ಪ್ರಜಾಪ್ರಭುದೇವನ ಜಾತ್ರೆ

**ತಾಮ್ರಪತ್ರ-ತಾಡಪತ್ರಗಳ ಮೇಲೆ ಬಹಳ ಪ್ರಾಚೀನ ಲಿಪಿಯಲ್ಲಿ ಬರೆದಿರುವ ಈಗೀಗ ದೊರೆಕಿದ "ನಾಥ ಪುರಾಣ" ಪ್ರಾಯಶಃ ಹಾಲಿ ಇರುವ ಹದಿನೆಂಟು ಪುರಾಣ ಗಳಿಗಿಂತ ಹಿಂದೆಯೇ ರಚಿತವಾಗಿ ಆಗಲೇ ಕಳೆದುಹೋಗಿದ್ದ ಕೃತಿಯಾಗಿರಬೇಕು. ದ್ವಾಪರ ಯುಗದ ಅಂತ್ಯಭಾಗದಲ್ಲಿದ್ದ ನಾಥ ದ್ವೀಪ ಈಗ ಎಲ್ಲೂ ಇಲ್ಲ. ಪ್ರಾಯಶಃ ಸಮುದ್ರದ ಪಾಲಾಗಿರಬೇಕು. ಆದರೆ ಅದು ಪ್ರವೃದ್ಧಮಾನವಾಗಿದ್ದಾಗ ಭಾರತ-ವರ್ಷದೊಡನೆ ಬಹಳ ನಿಕೃಷ್ಟ ಸಂಬಂಧವಿಟ್ಟುಕೊಂಡು ಆಗ ಇಲ್ಲಿ ಚಾಲ್ತಿಯಲ್ಲಿದ್ದ ಆ ಕಾಲದ ರಾಜಕೀಯ ಸಾಮಾಜಿಕ ಸಂಸ್ಕೃತಿಯನ್ನೂ ಸ್ವಲ್ಪಮಟ್ಟಿಗೆ ಆಮದು ಮಾಡಿಕೊಂಡು ತನ್ನದೇ ಒಂದು ಅಪೂರ್ವವಾದ "ನಾಥ ಸಂಸ್ಕೃತಿ" ಯನ್ನು ಬೆಳೆಸಿತು. ಆದರೆ ನಮಗೆ ಇದುವರೆವಿಗೂ ದೊರಕಿರುವ ಪುರಾಣ ಅಪೂರ್ಣ; ಕಡೆಯ ಒಂದೋ ಎರಡೂ ಕಾಂಡಗಳು (ಅದರಲ್ಲಿ "ಅಗ್ನಿಕಾಂಡ" ಎಂದು ಹೆಸರಿದ್ದ ಭಾಗವೂ ಇದ್ದಿರಬೇಕು) ಸಿಕ್ಕಿಲ್ಲ. ಯಾವುದೋ ಒಂದು ದೊಡ್ಡ ಅನಾಹುತ (ದೈವಿಕವೋ, ಮಾನುಷಿಕವೋ, ಸಾಮಾಜಿಕವೋ, ರಾಜಕೀಯವೋ ಗೊತ್ತಿಲ್ಲ; ಪತ್ರಗಳು ದೊರಕಿದ ಹೊರತು ಹೇಳುವುದಕ್ಕಾಗುವುದಿಲ್ಲ) ನಡೆದು ಇಡೀ ನಾಥ ದ್ವೀಪವೇ ಪ್ರಾಯಶಃ ಬೆಂಕಿಯ ಪಾಲಾಗಿ ಮುಂದಕ್ಕೆ ನಾಥ ದ್ವೀಪದ ಮತ್ತು ನಾಥ ಸಂಸ್ಕೃತಿಯ ಹೆಸರೂ ಉಳಿಯಲಿಲ್ಲ. ಈಗ ಸಿಕ್ಕಿದ ತಾಡಪತ್ರಗಳಿರದಿದ್ದರೆ ಇದೆಲ್ಲ ಇನ್ನೂ ಅಜ್ಞಾತವಾಗಿಯೇ ಇರುತ್ತಿತ್ತು. ನಾಥ ದ್ವೀಪದ ಸ್ವರ್ಣಯುಗದಲ್ಲಿನ ಜೀವನ, ಅವರು ವೈಭವದಿಂದ ಆಚರಿಸುತ್ತಿದ್ದ ಪ್ರಜಾಪ್ರಭುದೇವನ ಜಾತ್ರೆ-ಇವುಗಳ ವಿಚಾರ ಇಲ್ಲಿ ಸಂಕ್ಷೇಪವಾಗಿ ವಿವರಿಸಿದೆ.**

ಬಹಳ ಬಹಳ ಹಿಂದಿನ ಮಾತು. ದ್ವಾಪರ ಯುಗದ ಕಡೆ ಕಡೆ ದಿನಗಳು ಎನ್ನೋಣ. ದ್ವಾಪರದ ಪ್ರಾರಂಭದಲ್ಲೇ ಕೆಲವು ಸಾಹಸಿಗಳು ಭಾರತ ವರ್ಷವನ್ನು ಬಿಟ್ಟು ಮಹಾಸಾಗರವನ್ನು ದಾಟಿ ಬಂದು ಫಲವತ್ತಾದ, ಆದರೆ ನಿರ್ಜನ-ವಾದ ದ್ವೀಪವನ್ನು ಕಂಡು ಅಲ್ಲಿಳಿದು, ನೆಲೆಸಿ ರಾಜ್ಯ ಕಟ್ಟಿ ತಮ್ಮದೇ ಒಂದು ವಿಚಿತ್ರವಾದ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದ್ದರು. ದ್ವೀಪಕ್ಕೆ ಅವರು ಆಗ ಇಟ್ಟ ಹೆಸರು ಅಮರ ನಾಥ ದ್ವೀಪ (ಅನಂತರ ಅದು ನಾಥ ದ್ವೀಪ ವಾಯಿತು.) ಈಗ ನೀವು ಯಾವ ಭೂಪಟ ಗಳನ್ನಾಗಲಿ ಅಟ್ಲಾಸಿನ ಕೊನೆಯಲ್ಲಿ ಕೊಟ್ಟಿರುವ ಪದಸೂಚಿಯನ್ನಾಗಲಿ ಎಷ್ಟು ಹಿಂತಿರುವಿ ಮುಂತಿರುವಿ ನೋಡಿದರೂ ನಾಥ ದ್ವೀಪವನ್ನು ಕಾಣಲಾರಿರಿ. ದ್ವಾಪರಯುಗದ ಕಡೆ ಕಡೆ ದಿನಗಳ ಅಲ್ಲೋಲ ಕಲ್ಲೋಲ ಪ್ರಳಯಾದಿಗಳಲ್ಲಿ ಇದೂ ಹೆಸರಿಲ್ಲದೆ ಅಳಿದು ಹೋಯಿತು. ಅದೇ ಕಾಲದಲ್ಲೇ ಪ್ರಾಯಶಃ ಅಟ್ಲಾಂಟಿಸ್ ದ್ವೀಪವೂ ತನ್ನ ವೈಭವದೊಡನೆ ಅಟ್ಲಾಂಟಿಕ್ ಸಾಗರದ ತಳಕ್ಕೆ ಹೋಗಿ ಸೇರಿರಬೇಕು. ನಾಥ ಪುರಾಣದಲ್ಲಿ ಅಲ್ಲಲ್ಲಿ ಸೂಚಿತವಾಗಿರುವ ವಿಷಯಗಳಿಂದ ಇನ್ನು

ಮಾತ್ರ ಹೇಳಬಹುದು. ಆಗಿನ ಲವಣಸಾಗರದ ಮಧ್ಯದಲ್ಲಿ ಆಗಿನ ಭೂಮಧ್ಯ ರೇಖೆಯು ಎರಡೂ ಕಡೆಗಳಲ್ಲಿ ಚೆಲ್ಲಾಪಿಲ್ಲಿಯಾಗಿ ಹರಡಿದ್ದ ಜಂಬೂ ದ್ವೀಪಸ್ತೋಮದ ಒಂದು ಅಜ್ಞಾತ ಮೂಲೆಯಲ್ಲಿದ್ದ ತ್ರಿಕೋಣಾಕಾರದ ದ್ವೀಪ, ಪುರಾಣದ ನಾಥ ದ್ವೀಪ.

ನಾಥ ದ್ವೀಪದ ಜನಗಣತಿ ಪುರಾಣದ ಪ್ರಕಾರ ಹತ್ತು ಅಕ್ಷೋಹಿಣಿ, ಎಂದರೆ ಪುರಾಣಗಳಿಗೆ ಸ್ವಾಭಾವಿಕವಾದ ಗೆದ್ದಲು ಹುತ್ತವನ್ನು ಬೃಹದ್ಗಿರಿಯೆಂದು ಹೇಳುವ ಅತ್ಯುಕ್ತಿಯನ್ನು ಗಮನಿಸಿ ಹತ್ತು ಲಕ್ಷವಿರಬಹುದು ಎನ್ನೋಣ. ದ್ವೀಪದ ಮೇಲು ಮೈಯ ವಿಸ್ತಾರ ಅಂದಿನ ಯೋಜನಗಳ ಲೆಕ್ಕದಲ್ಲಿ ಕೊಟ್ಟಿರುವುದರಲ್ಲಿ ಅತಿಶಯೋಕ್ತಿಯನ್ನು ಕಳೆದು ಇಂದಿನ ಲೆಕ್ಕದಲ್ಲಿ ಹೇಳಿದರೆ ಸುಮಾರು ಒಂದು ಲಕ್ಷ ಚದರ ಕಿಲೋಮೀಟರುಗಳು, ಎಂದರೆ ಪ್ರತಿ ಒಂದು ಚದರ ಕಿಲೋಮೀಟರಿನಲ್ಲಿ ಹತ್ತೇ ಹತ್ತು ಜನಗಳು ಮಾತ್ರ, ಅಥವಾ ಪ್ರತಿಯೊಬ್ಬ ನರಪಿಳ್ಳೆಗೂ ಹತ್ತು ಹೆಕ್ಟೇರುಗಳು (ಅಥವಾ ಇಪ್ಪತ್ತೈದು ಎಕರೆಗಳು ಎನ್ನೋಣ)! ಈಗಿನ ಪ್ರಪಂಚದ ಸ್ಥಿತಿ ನೆನೆದರೆ ಆಗಿನ ಅಮರನಾಥ ದ್ವೀಪ ಭೂಲೋಕದ ಸ್ವರ್ಗವಾಗಿದ್ದಿರಬೇಕು.

ಆದರೆ ಭೂಲೋಕದ ಸ್ವರ್ಗಗಳಿಗೆ ಶತ್ರುಗಳು ಬಹಳ ಜಾಸ್ತಿ. ಸುತ್ತ ಮುತ್ತ ಇರುವ ಭೂಲೋಕದ ನರಕಗಳಿಂದ ಜನಗಳು ಬಂದು ಹಲ್ಲೆ ಮಾಡಿ ಆಕ್ರಮಿಸಿ ಸ್ವರ್ಗದ ಜನಗಳನ್ನು ಗುಲಾಮರನ್ನಾಗಿ ಮಾಡಿ ತಾವು ಸ್ವರ್ಗಸುಖಗಳನ್ನೆಲ್ಲಾ ಅನುಭವಿಸುವುದು ಇಂದಿನ ಮಾತಲ್ಲ. ಅಮರನಾಥ ದ್ವೀಪದ ಸ್ವರ್ಣಯುಗದಲ್ಲಿ ಅಲ್ಲಿನ ಅಮರರ ಅರಸು ವರ್ಗದವರು ಕಾಲ ಕಳೆದಂತೆಲ್ಲ ಸುಖಾಸಕ್ತರಾಗಿ ಸುರಾ-ಸ್ತ್ರೀಲೋಲರಾಗಿ ತಾಮಸಿಗಳಾಗಿ ದೇಶವಾಸಿಗಳ ಯೋಗಕ್ಷೇಮಕ್ಕೆ ಗಮನ ಕೊಡದೆ ಇದ್ದಾಗ ಹೊರಗಿನಿಂದ ಶತ್ರುಗಳು ಬಂದು ಆಕ್ರಮಿಸಿದರಂತೆ. ಪುರಾಣದಲ್ಲಿ ಕೊಟ್ಟಿರುವ ಪ್ರಕಾರ ಈ ಶತ್ರುಗಳು, ಪೆಲನ್ನರು, ಹೆವನರು, ಪಠಣರು, ಮುಸಲರು ಮತ್ತು ಶ್ವೇತೀಯರು ಒಬ್ಬರಾದ ಮೇಲೊಬ್ಬರು ಆಕ್ರಮಿಸಿ ಕ್ರಮವಾಗಿ ಎರಡು, ನಾಲ್ಕು, ಆರು, ಎಂಟು ಮತ್ತು ಹತ್ತು ಸಹಸ್ರ ವರ್ಷಗಳ ಪರ್ಯಂತ ಅಮರನಾಥ ದ್ವೀಪವನ್ನಾಳಿದರಂತೆ. ಕಡೆಯದಾಗಿ ಬಂದ ಶ್ವೇತೀಯರು ಇಲ್ಲಿಯ ಅಮರರ ದುಸ್ಥಿತಿಯನ್ನು ನೋಡಿ "ಅನಾಥ"ರೆಂದು ಅವರಿಗೆ ಹೆಸರು ಕೊಟ್ಟರಂತೆ. ಅವರಿದ್ದ ಹತ್ತು ಸಹಸ್ರ ವರ್ಷಗಳ ಕಾಲ ಈ ದ್ವೀಪಕ್ಕೆ ಅನಾಥ ದ್ವೀಪವೆಂದೂ ಜನಗಳಿಗೆ ಅನಾಥರೆಂದೂ ಹೆಸರು ನಿಂತಿತು. ಶ್ವೇತೀಯರು ತಮ್ಮ ಇಲ್ಲಿನ ರಾಜ್ಯವನ್ನು ದೇಶೀಯರಿಗೇ ಹಿಂದಿರುಗಿಸಿ ತಾವು ಸ್ವದೇಶಕ್ಕೆ ಪ್ರಯಾಣ ಮಾಡಿದ ಮೇಲೆ ಇಲ್ಲಿಯ ಜನಗಳು, ತಾವು ಈಗ ನಾಥರೆಂದೂ ತಮ್ಮ ರಾಜ್ಯ ನಾಥ ದ್ವೀಪವೆಂದೂ ಕರೆದರಂತೆ. ಅಂದಿನಿಂದ, ಮೂರು ಸಹಸ್ರ ವರ್ಷಗಳ ಕಾಲ ಪರ್ಯಂತ ಇದು ನಾಥ ದ್ವೀಪವಾಗಿಯೇ ನಿಂತಿತು.

ಶ್ವೇತೀಯರ ಕಾಲದಲ್ಲಿ ತಾನೆ ಅವರು ತಮ್ಮ ಶ್ವೇತ ರಾಜ್ಯದಲ್ಲಿ ತಾವು ನಡೆಸುತ್ತಿದ್ದ ಪ್ರಜಾಪ್ರಭುದೇವನ ಜಾತ್ರೆ ಕ್ರಮವನ್ನು ಇಲ್ಲಿ ಇವರಿಗೆ ಸಾಂಗವಾಗಿ ವಿವರಿಸಿ ತಾವೇ ಎದುರಿಗೆ ನಿಂತು ಅನಾಥರಿಂದಲೇ ಮಾಡಿಸುತ್ತಿದ್ದರೆಂದು ನಾಥ ಪುರಾಣದಲ್ಲಿ ಹೇಳಿದೆ. ಇದಕ್ಕೆ ಮುಂಚೆ ನಾಥ ದ್ವೀಪೀಯರು ಪೂಜಿಸುತ್ತಿದ್ದ ದೇವನ ಹೆಸರು (ಪ್ರತ್ಯಯ ರಹಿತ) ಪ್ರಭುದೇವ ಎಂದೂ ಆತನ ಜಾತ್ರೆ "ಸುರದೇವಾಗಮ"ದಲ್ಲಿ ವಿಧಿಸಿದ್ದಂತೆ ಆಚರಿಸುತ್ತಿದ್ದರೆಂದೂ ಪುರಾಣ ತಿಳಿಸುತ್ತದೆ. ಆದರೆ ಇದನ್ನೆಲ್ಲಾ ಪೂರಾ ಮಾರ್ಪಡಿಸಿ ಶ್ವೇತೀಯರು ಪ್ರಭುದೇವನನ್ನು ಪ್ರಜಾಪ್ರಭುದೇವನನ್ನಾಗಿ ಮಾಡಿ ಅವನ ಪೂಜೆ ಜಾತ್ರೆ ಮುಂತಾದ್ದಕ್ಕೆಲ್ಲ ತಮ್ಮ ದೇಶದಲ್ಲಿ ಬಳಕೆಯಲ್ಲಿದ್ದ "ಅಸುರ ದೇವಾಗಮ"ವನ್ನು ಇಲ್ಲೂ ಆಚರಣೆಗೆ ತಂದರಂತೆ. ಆಗಿನ ಅನಾಥ ಮುಖಂಡರಿಗೆ ಈ ಕ್ರಮ ಬಹಳ ಹಿಡಿಸಿ ಹೋದದ್ದರಿಂದ ತಾವು ನಾಥರಾದ ಮೇಲೂ ಪ್ರಜಾಪ್ರಭುವಿನ ಜಾತ್ರೆಯನ್ನು ಅದೇ ಕ್ರಮದಲ್ಲೇ ನಡೆಸಿಕೊಂಡು ಬಂದರೆಂದೂ ನಾಥ

ಪುರಾಣದಲ್ಲಿ ಹೇಳಿದೆ.

ನಾಥ ದ್ವೀಪದ ಜನಗಳ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಪುರಾಣದಲ್ಲಿ ಅಲ್ಲಲ್ಲಿ ಪ್ರೋಕ್ತವಾಗಿರುವುದನ್ನು ಈಗ ಇಲ್ಲಿ ಒಂದೆಡೆಯಲ್ಲಿ ಕ್ರಮವಾಗಿ ಸೇರಿಸಿ ಕೊಡೋಣ. ಒಟ್ಟು ಜನಗಳಲ್ಲಿ 'ಮುಕ್ಕಾಲು ಪಾಲಿಗಿಂತ ಸ್ವಲ್ಪ ಹೆಚ್ಚು' ಎಂದರೆ ೧೦ ಲಕ್ಷದಲ್ಲಿ ಸುಮಾರು ೮ ಲಕ್ಷ ಜನಕ್ಕೆ 'ನಾಥ'ರು ಎಂದೇ ಹೆಸರಿದ್ದ ಹಾಗೆ ತೋರುತ್ತದೆ. ಅವರೇ ದ್ವೀಪದ ಒಡೆಯರು ಎಂದೂ, ದ್ವೀಪದ ಆಡಳಿತ ಅವರ ಹೆಸರಿನಲ್ಲೇ ಅವರ ಹಿಡಿತದಲ್ಲೇ ಅವರಿಗಾಗಿಯೇ ನಡೆಯುತ್ತಿತ್ತು ಎಂದೂ ಅನೇಕ ಕಡೆಗಳಲ್ಲಿ ಘಂಟಾಘೋಷಿತವಾಗಿದೆ. ಅಲ್ಲಲ್ಲಿ ಅನೇಕ ಶ್ಲೋಕಗಳಲ್ಲಿ ನಾಥರ ಸದ್ಗುಣಗಳ ಬಗ್ಗೆ ಪ್ರಶಂಸೆ ಇದೆ. ನಾಥರು ದೇಹಶ್ರಮ ಪಡಬಲ್ಲರು, ಬೆವರು ಸುರಿಸಿ ಕೆಲಸ ಮಾಡುತ್ತಾರೆ ಎಂದು ಒಂದು ಕಡೆ ಹೇಳಿದ್ದರೆ, ಇವರು ವಾರದಲ್ಲಿ ಮೂರು ನಾಲ್ಕು ದಿನಗಳಾದರೂ ಒಪ್ಪತ್ತು ಊಟ ಮಾಡಿ ಇನ್ನೊಪ್ಪತ್ತು ನೀರು ಕುಡಿದೇ ಜೀವಿಸಬಲ್ಲರು ಎಂದೂ ಇನ್ನೊಂದು ಕಡೆ ಹೇಳಿದೆ. ನಾಥರ ಊಟ ಬಹಳ ಸರಳ, ಆರೋಗ್ಯಕರ. ಮಣ್ಣಿನ ತಟ್ಟೆಯಲ್ಲಿ ಮೂರು ನಾಲ್ಕು ಒಣಕಲು ರೊಟ್ಟಿ ಅಥವಾ ಒಂದು ಮುದ್ದೆ ಹಿಟ್ಟು. ರೊಟ್ಟಿಗೊಂದರಂತೆ ಹಸಿಮೆಣಸಿನಕಾಯಿ, ಸ್ವಲ್ಪ ಉಪ್ಪು, ಎರಡು ಮೂರು ನೀರುಳ್ಳಿಗಳು, ಪಕ್ಕದಲ್ಲಿ ಮಡಕೆ ತುಂಬ ಚಿಲುಮೆಯಿಂದ ತಂದ ತಿಳಿನೀರು ಇದು ಒಬ್ಬ ನಾಥನ ಊಟ. ಅವರ ಹಲ್ಲುಗಳು ಬೆಳ್ಳಗೆ ಸ್ವಚ್ಛವಾಗಿದ್ದು ಅವರು ನಕ್ಕಾಗ ಅವರ ಹಲ್ಲುಗಳನ್ನೇ ನೋಡುತ್ತಿರೋಣ ಎಂದು ತೋರುತ್ತಿತ್ತಂತೆ. ಅವರು ತಿನ್ನುತ್ತಿದ್ದ ಆರೋಗ್ಯಕರ ಆಹಾರದಿಂದಲೂ ಮಿತ ಭೋಜನದಿಂದಲೂ ವಾರದಲ್ಲಿ ಎರಡು ಮೂರು ದಿನಗಳಾದರೂ ಆಚರಿಸುತ್ತಿದ್ದ ಒಪ್ಪೊತ್ತೂಟ ಮತ್ತು ಆಗಾಗ ಕೈಗೊಳ್ಳುತ್ತಿದ್ದ ಉಪವಾಸವ್ರತಗಳಿಂದಲೂ ಅವರು ದೀರ್ಘಗಾತ್ರರಾಗಿ ಬೆಳೆಯುತ್ತಿದ್ದರಂತೆ. ಅವರಲ್ಲಿ ಯಾರಿಗೂ ಬೊಜ್ಜು, ತೂಗು ಹೊಟ್ಟೆ, ವಾಯುವಿನ ತೊಂದರೆ ಎನ್ನುವುದು ಬರುತ್ತಿರಲಿಲ್ಲ. ಅವರ ಹೆಂಗಸರ ಕೃಶೋದರ ಕಾರಣದಿಂದ ಮೇಲಿದ್ದ ಸ್ತನ ದ್ವಯಗಳು ಎದ್ದು ಕಾಣುತ್ತಿದ್ದುದು ನೋಡಿ ಸಮಾಜದ ಇತರ ವರ್ಗಗಳ ಸ್ತ್ರೀಯರಿಗೆ ಅಸೂಯೆಯೂ ಅವರ ಗಂಡಸರಿಗೆ ದೃಷ್ಟಿ ಚಾಪಲ್ಯವೂ ಆಗುತ್ತಿತ್ತಂತೆ! ನಾಥ ವರ್ಗದವರು ಒಂದೆಡೆಯಿಂದ ಇನ್ನೊಂದೆಡೆಗೆ ಹೊಲಗದ್ದೆಗಳ ನಡುವೆ ಇದ್ದ ಕಾಲುದಾರಿಗಳಲ್ಲಿ ಸಾಲು ಸಾಲಾಗಿ ಪ್ರಯಾಣ ಮಾಡುತ್ತಿರುವುದನ್ನು ನೋಡಿದರೆ ಆಕಾಶದಲ್ಲಿ · ಮೋಡಗಳ ನಡುವೆ ಸಾಲು ಸಾಲಾಗಿ, ದೇಶದಿಂದ ದೇಶಕ್ಕೆ ಹಾರಿಹೋಗುತ್ತಿದ್ದ ಕೊಕ್ಕರೆಗಳ ಹಾಗಿರುತ್ತಿತ್ತಂತೆ. ಅಂದರೆ ಅವರ ನಡೆ ಅಷ್ಟು ಹಗುರ, ಅಷ್ಟು ಲಾವಣ್ಯಮಯವಾಗಿತ್ತು.

ನಾಥ ವರ್ಗದವರಲ್ಲಿ ಎಲ್ಲೋ ಕೆಲವರಿಗಿದ್ದ ಅಲ್ಪ ಸ್ವಲ್ಪ ನೆಲ ಬಿಟ್ಟು ಬಾಕಿ ಯಾರಿಗೂ ಯಾವ ನೆಲವೂ ಇರಲಿಲ್ಲವಂತೆ. ಇಡೀ ದೇಶವೇ ಅವರದು ಎಂದು ಪುರಾಣದಲ್ಲಿ ಸೂಚಿತವಾಗಿದ್ದರೂ ವ್ಯವಸಾಯದ ಜಮೀನು ಮಾತ್ರ ಮುಕ್ಕಾಲು ಮೂರುವೀಸ ಪಾಲು ಸಮಾಜದ ಇತರರಿಗೇ ಸೇರಿತ್ತು. ಆದ್ದರಿಂದ ಭೂಸ್ವಾಮಿಗಳು ಇವರಿಗೆ ಆಗಾಗ, ಎಂದರೆ ತಿಂಗಳಿನಲ್ಲಿ ಎಂಟು ಹತ್ತು ಅಥವಾ ಹದಿನೈದು ದಿನಗಳು ಎನ್ನಬಹುದು, ಯಾವುದಾದರೂ ನೆಲ ಉತ್ತು ಬೀಜ ಬಿತ್ತುವ, ಕಳೆ ಕೀಳುವ, ಧಾನ್ಯ ಕೊಯ್ಲಿನ ಅಥವಾ ಇತರ ವ್ಯವಸಾಯಿಕ ಕೆಲಸಗಳನ್ನೋ, ಮಣ್ಣು ಅಗೆಯುವ, ಮರ ಕಡೆಯುವ, ನೀರು ಹೊರುವ, ಕಲ್ಲು ಒಡೆಯುವ, ಸಾಮಾನು ಸಾಗಿಸುವ ಇತರ ಕೆಲಸಗಳನ್ನೋ ವಹಿಸಿದರೆ ಅವನ್ನು ಪರಿಶ್ರಮಿಸಿ ಬೆವರು ಸುರಿಸಿ ಮಾಡಿ ಅವರು ಕೊಟ್ಟ ಪ್ರತಿಫಲವನ್ನು ಮರುಮಾತಾಡದೆ ತೆಗೆದುಕೊಳ್ಳುತ್ತಿದ್ದರಂತೆ.

ನಾಥರಿಗಿದ್ದಷ್ಟು ವ್ಯಕ್ತಿ ಸ್ವಾತಂತ್ರ್ಯ ಸಮಾಜದ ಮಿಕ್ಕ ಮೂರು ಪಂಗಡದವರಿಗಿರಲಿಲ್ಲವೆಂದೂ ತಿಳಿಯುತ್ತದೆ. ಮನೆ–ಮಠ, ಆಸ್ತಿ–ಪಾಸ್ತಿ, ವಸ್ತ್ರಾದಿಗಳು (ಗಂಡಸರಿಗೆ ನಡುವಿಗೆ ಕಟ್ಟುವ ನಾಲ್ಕು ಮೊಳದ ಒಂದು ಮುಂಡು, ಹೆಂಗಸರಿಗೆ ಮಾನ ಮುಚ್ಚುವಷ್ಟು ಕುಪ್ಪಸ ಆರು ಮೊಳದ ಸೀರೆ

ಮಾಡುವಾಗ ದಾರಿಯಲ್ಲಿ ತಮ್ಮ ಮೇಲೆ ಬೀಳಬಹುದಾದ ಕ್ರೂರ ಮೃಗಗಳನ್ನು ತಮ್ಮ ಸ್ತ್ರೀಯರ ಮೇಲೆ ದೃಷ್ಟಿ ಬೀರುವ ಊರಿನ ಲಂಪಟರನ್ನೂ ಓಡಿಸಲು ಬೇಕಾದ ಒಂದು ದೊಣ್ಣೆ ಹೊರತು) ಮುಂತಾದ ಯಾವ ಶೃಂಖಲೆಗಳಾಗಲಿ ಪೀಕಲಾಟಗಳಾಗಲಿ ಇಲ್ಲದಿದ್ದರಿಂದ ನಿಶ್ಚಿಂತೆಯಾಗಿ ಇಷ್ಟ ಬಂದಲ್ಲಿಗೆ ಹೋಗಿ ಕೆಲಸ ಸಿಕ್ಕಲ್ಲಿ ಮಾಡಿ ನೂರಕ್ಕೆ ನೂರರಷ್ಟು ಸ್ವತಂತ್ರರಾಗಿದ್ದರಂತೆ.

ಧನ್ಯ ಜನಗಳು ಈ ನಾಥರು. ಇಂತಹ ಜನಗಳಿದ್ದ ದೇಶ ಎಷ್ಟು ಆದರ್ಶ ದೇಶವೋ! ನಾಥರೇ ನಾಥ ದ್ವೀಪದ ಬೆನ್ನೆಲುಬು, ಬಾಕಿಯವರೆಲ್ಲ ಅಲಂಕಾರಗಳು ಎಂದು ಇವರನ್ನು ನಾಥ ಪುರಾಣ ಹೊಗಳಿದೆ. ಈಗ ಈ ಅಲಂಕಾರ ಹಂಗಡಗಳನ್ನು ಸ್ವಲ್ಪ ತಿಳಿಯೋಣ.

ಸಂಖ್ಯಾಬಲದ ಪ್ರಕಾರ ನೋಡಿದರೆ ನಾಥರಿಗಿಂತ ಕೆಳಗೆ ಇದ್ದವರು ಕಾರ್ಯಕ ಅಥವಾ ಕಾರಿಗರು. ದ್ವೀಪದಲ್ಲಿ ಇವರ ಸಂಖ್ಯೆ ಸುಮಾರು ಒಂದು ನೂರ ತೊಂಭತ್ತು ಸಾವಿರ ಇದ್ದಿರಬಹುದು. ಸಮಾಜದ ಎಲ್ಲಾ ವೃತ್ತಿಗಳೂ ಇವರ ಕೈಯಲ್ಲಿತ್ತು. ಇದರಲ್ಲಿ ಮುಖ್ಯವಾದದ್ದು ಆರಂಭ. ದ್ವೀಪದ ನೂರು ಭಾಗ ವ್ಯವಸಾಯಿಕ ನೆಲದಲ್ಲಿ ಸುಮಾರು ಅರುವತ್ತು ಭಾಗ ಕಾರಿಗ ಜನರಲ್ಲಿ ಒಬ್ಬರಲ್ಲ ಇನ್ನೊಬ್ಬರಿಗೆ ಸೇರಿದ್ದಿತು ಎನ್ನಬಹುದು. ಅವರು ಮೇಲೆ ಹೇಳಿದ ನಾಥರನ್ನು ಕೂಲಿ ಇಟ್ಟು ಕೆಲಸ ಮಾಡಿಸಿ ತಾವು ಮೇಲುವಿಚಾರಣೆ ನಡೆಸುತ್ತಿದ್ದರು. ಕಾರಿಗ ವರ್ಗದ ಇತರರು, ಗೃಹ ಕೈಗಾರಿಕೆ, ಸಣ್ಣ ಪುಟ್ಟ ಅಂಗಡಿ ವ್ಯಾಪಾರ, ಮಕ್ಕಳು ಓದು ಬರಹ ಕಲಿಯುವ ಶಾಲೆಗಳು, ವನಸ್ಪತಿ ವೈದ್ಯ, ಪುರೋಹಿತ–ಪೂಜಾರಿ ಕೆಲಸ, ಸಣ್ಣ ಪುಟ್ಟ ಕಾರಕೂನಗಿರಿ, ಸರಕಾರಿ ಆಡಳಿತದ ಕೆಳ ದರ್ಜೆ ಅಧಿಕಾರ, ಕಾಯಿದೆಯ ರಕ್ಷಣೆಯ ಕೋಲುಗಾರಿಕೆ ಮುಂತಾದ ಒಂದಲ್ಲ ಒಂದು ವೃತ್ತಿಯನ್ನು ಅವಲಂಬಿಸಿದ್ದರು. ಶ್ವೇತೀಯರು ದ್ವೀಪ ಬಿಟ್ಟು ಹೋದಂದಿನಿಂದ ನಾಥರ ವಶದಲ್ಲಿದ್ದ ಅಲ್ಪ ಸ್ವಲ್ಪ ಜಮೀನು ಕೂಡ ಒಂದಲ್ಲ ಒಂದು ಮಾರ್ಗದಲ್ಲಿ ಕಾರಿಗ ವ್ಯವಸಾಯಿಗಳ ಕೈ ಸೇರಿತಂತೆ. ನಾಥ ವರ್ಗ ರಾಜ್ಯದ ಬೆನ್ನು ಮೂಳೆಯಾದರೆ ಕಾರಿಗ ವರ್ಗ ಮೈಯಿನ ಇತರ ಮೂಳೆಗಳಂತೆ ಇತ್ತು ಎಂದರೆ ತಪ್ಪಲ್ಲ.

ನಾಥ ದ್ವೀಪ ಸಮಾಜದಲ್ಲಿ ಮೂರನೆಯ ಸ್ಥಾನ ಮುನ್ನಿಗರಿಗೆ ಸೇರಿತ್ತು. ಪ್ರಾಯಶಃ ಇವರ ಒಟ್ಟು ಸಂಖ್ಯೆ ಕೇವಲ ಒಂಬತ್ತು ಸಾವಿರದ ಮುನ್ನೂರು ಅಥವಾ ನಾನೂರು ಇದ್ದಿರಬಹುದು. ಆದರೆ ಇವರು ದ್ವೀಪದ ನರಗಳೂ ಮೆದುಳೂ ಇದ್ದಂತೆ. ದ್ವೀಪದ ರಾಜಕೀಯದಲ್ಲಿ ಮೊದಲಿಲಿಂದ ಇವರಿಗೆ ಪ್ರಥಮ ಸ್ಥಾನವಿದ್ದಿದ್ದರಿಂದ ಇವರಿಗೆ ಮುನ್ನಿಗರೆಂಬ ಹೆಸರು ಬಂದಿರಬೇಕು. ಶ್ವೇತೀಯರು ಬರುವುದಕ್ಕಿಂತ ಮುಂಚೆ ಇದ್ದ ಸಣ್ಣ ಪುಟ್ಟ ರಾಜೋಪರಾಜರೂ ಅವರ ಮಂತ್ರಿಗಳೂ ಈ ವರ್ಗಕ್ಕೆ ಸೇರಿದವರು. ಶ್ವೇತೀಯರ ಕಾಲದಲ್ಲಿ ಅವರ ಸೇವೆ ಮಾಡಿ ಶ್ವೇತ ದ್ವೀಪದಲ್ಲಿ ನಡೆಸುತ್ತಿದ್ದ ಆಡಳಿತದ ರೀತಿ ಮತ್ತು




"ಹಲೋ.. ಮಹಾಲಕ್ಷ್ಮೀ ಸ್ಟೋರ್ಸ್... ನಮ್ಮ ಪೇಪರವೇಟ್ ಆರ್ಡರ್ ಕ್ಯಾನ್ಸಲ್ ಮಾಡಿ!"

ಪ್ರಜಾಪ್ರಭುವಿನ ಪೂಜೆ ಮತ್ತು ಜಾತ್ರೆಯ ವಿಧಿಗಳು ಎಲ್ಲವನ್ನೂ ಸಾಂಗವಾಗಿ ಕಲಿತು ಈ ಕ್ರಮದಲ್ಲಿಯೂ ನಾಥರ ಸೇವೆಯನ್ನು ಮಾಡುವುದಕ್ಕೆ ಅನುಕೂಲವಿದೆ ಎಂದು ತಿಳಿದು ಶ್ವೇತೀಯರು ದ್ವೀಪ ಬಿಟ್ಟು ಹೋಗಿದ್ದೆ ತಡ, ಅವರ ರಾಜಕೀಯ ಸ್ಥಾನಗಳಲ್ಲಿ ತಾವು ಕುಳಿತು ಅವರ ಮಾದರಿಯಲ್ಲೇ ಕಾರ್ಯಕಲಾಪಗಳನ್ನು ನಡೆಸಲು ಪ್ರಾರಂಭಿಸಿದರಂತೆ. ನಾಥ ಪುರಾಣದ ರಚನೆಯಾಗುವ ವೇಳೆಗೆ ಆಗಲೇ ಮೂರು ಸಹಸ್ರ ವರ್ಷಗಳ ಕಾಲ ಪರ್ಯಂತ ವಿರಾಮವಿಲ್ಲದೆ ಮುನ್ನಿಗರು ನಾಥ ವರ್ಗದ ಬಡತನ ನೀಗಿಸಲೂ ಅವರನ್ನು ಉದ್ಧಾರ ಮಾಡಲೂ ಪ್ರಯತ್ನ ಪಟ್ಟಿದ್ದರಂತೆ.

ಮುನ್ನಿಗರು ಒಟ್ಟಿನಲ್ಲಿ ಎತ್ತರವಾದ, ದೃಢವಾದ ಮೈಯುಳ್ಳವರು, ಗೌರಾಂಗರು. ಬಾಲ್ಯದಲ್ಲಿ ನಾನಾ ವಿದ್ಯೆಗಳನ್ನೂ ಕಸರತ್ತುಗಳನ್ನೂ ತಮ್ಮ ಪಂಗಡದವರಿಗೇ ಏರ್ಪಡಿಸಿದ್ದ ಶಾಲೆಗಳಲ್ಲಿ ಕಲಿತು ಶಾಲೆಯಿಂದ ಹೊರಬಿದ್ದ ಮೇಲೂ ಮುನ್ನಿಗ ಸಮಾಜದ ಖ್ಯಾತಿ-ಪ್ರತಿಷ್ಠೆಗಳನ್ನು ಮುಂದುವರಿಸಲು ಬೇಕಾದ ಇತರ ಕುಶಲ ತಂತ್ರಗಳನ್ನು ತಮ್ಮ ಬಂಧುಬಳಗದವರನ್ನು ಸದಾ ನೋಡಿ ಕಲಿಯುತ್ತಿದ್ದರು. ನಾಥ ಸಭೆ ಮತ್ತು ದ್ವೀಪ ಸಭೆ ಎಂಬ ಎರಡು ಸಭೆಗಳ ಸದಸ್ಯರಾಗಿ ಚುನಾಯಿತರಾಗಿ ನಾಥರ ಸೇವೆ ಮಾಡುವುದಲ್ಲದೆ ಮುನ್ನಿಗರು ಬೇರೆ ಉನ್ನತ ಉದ್ಯೋಗಗಳಲ್ಲೂ ಸೇರಿ ಸೇವೆ ಸಲ್ಲಿಸುತ್ತಿದ್ದರು. ದೇಶದ ಆಡಳಿತದ ಉನ್ನತ ಸೇವಾ ವರ್ಗದಲ್ಲಿ ಸಚಿವ, ಉಪಸಚಿವ, ಜಂಟಿ ಸಚಿವ, ಕಾಯ್ದೆ ರಕ್ಷಣೆ ಸಿಬ್ಬಂದಿಯ ಮುಖ್ಯಸ್ಥ, ಉಪ ಮುಖ್ಯಸ್ಥ, ನ್ಯಾಯಾಧೀಶ, ಉಪ ನ್ಯಾಯಾಧೀಶ ಇತ್ಯಾದಿಗಳಾಗಿ, ಅಥವಾ ಹೊನ್ನಿಗರು ಸ್ಥಾಪಿಸಿದ ಕಾರ್ಖಾನೆಗಳ ಮುಖ್ಯ ಕಾರ್ಯವಾಹಕ, ಕಾರ್ಯ ನಿರ್ವಾಹಕ ಮಂಡಳಿಯ ಸದಸ್ಯ, ಅಥವಾ ಹೊನ್ನಿಗರಿಗೆ ಸೇರಿದ ಧನ ಕೋಠಿಗಳ ಉನ್ನತ ಸೇವಾ ವರ್ಗದಲ್ಲಿ, ಹೀಗೆ ಹೆಚ್ಚು ಕಡಿಮೆ ದೇಶದ ಎಲ್ಲಾ ನರ ಕೇಂದ್ರಗಳಲ್ಲೂ ಇವರು ಸೇವೆ ಸಲ್ಲಿಸುವುದು ನಾಥ ದ್ವೀಪಕ್ಕೆ ಭಾರತವರ್ಷದಿಂದ ವಲಸೆ ಬಂದ ಕಾಲದಿಂದಲೇ ಪರಂಪರೆಯಾಗಿ ಬಂದಿತ್ತು. ಶ್ವೇತೀಯರು ಬಿಟ್ಟು ಹೋಗುವುದಕ್ಕೆ ಮುಂಚಿನಿಂದ ಬಂದ ತಮ್ಮ ವಂಶಪಾರಂಪರ್ಯವಾದ ಅನುಭವಸಾಗರದೊಂದಿಗೆ ಶ್ವೇತೀಯರ ಕಾಲದಲ್ಲಿ ಹರಿದು ಬಂದ ನವಾನುಭವ ಪ್ರವಾಹವನ್ನೂ ಸಮ್ಮಿಳಿಸಿ ಈಗ ಸ್ವತಂತ್ರ ನಾಥ ದ್ವೀಪದ ನಾಥಜನಗಳ ಕಷ್ಟ ನಿವಾರಣೆಗೆ ಕಂಕಣಬದ್ಧರಾಗಿ ನಿಂತಿದ್ದರು.

ನಾಥ ದ್ವೀಪವಾಸಿಗಳಲ್ಲಿ ನಾವು ಹೇಳಬೇಕಾಗಿ ಉಳಿದವರು ಸುಮಾರು ಎರಡು ನೂರು ಮನೆತನಗಳ, ಎಂದರೆ ಸಾವಿರ ಮಂದಿಗಿಂತ ಹೆಚ್ಚಿಲ್ಲದ ಸ್ವರ್ಣಸ್ಥರು ಅಥವಾ ಹೊನ್ನಿಗರು.

ಇವರು ಮುಸಲರ ಕಾಲದಿಂದೀಚೆ ಹುಟ್ಟಿಕೊಂಡ ಅಥವಾ ಹೊರಗಿನಿಂದ ಬಂದ ಜನವೆಂದೂ ಶ್ವೇತೀಯರ ಕಾಲದಲ್ಲಿ ಪ್ರವೃದ್ಧಮಾನರಾಗಿ ಈಗಂತೂ ನಾಥ ದ್ವೀಪವನ್ನೇ ಬೆಲೆಗೆ ಕೊಂಡುಕೊಳ್ಳುವಷ್ಟು ಶ್ರೀಮಂತರಾಗಿದ್ದರೆಂದೂ ನಾಥ ಪುರಾಣಿಕರು ಬರೆದಿದ್ದಾರೆ. ಇವರ ಸಾಮಾಜಿಕ ಅಂತಸ್ತನ್ನು ತೋರಿಸುವ ಮನೆಯ ಮೇಲಿನ ಹೊನ್ನಿನ ಕಲಶ ಬಿಟ್ಟರೆ ಇವರು ಮಾತ್ರ ವೈಯಕ್ತಿಕವಾಗಿ ಜನಗಳ ಕಣ್ಣಿಗೆ ಬೀಳುತ್ತಿರಲೇ ಇಲ್ಲ, ಜನಗಳು ಓಡಾಡುವ ಜಾಗಗಳಲ್ಲಿ ಇವರು ಓಡಾಡುತ್ತಿರಲಿಲ್ಲ. ಹಾಲಿನಂತೆ ಬಿಳಿ ಮೈ ಮತ್ತು ಕೆಂಗಣ್ಣುಗಳುಳ್ಳ ಅರಬಾಶ್ವ ಜೋಡಿ ಕಟ್ಟಿದ ಚಿನ್ನದ ಸಾರೋಟುಗಳಲ್ಲೇ ಇವರ ಓಡಾಟ, ಒಬ್ಬ ಹೊನ್ನಿಗನ ಒಂದು ಊಟದ ಖರ್ಚಿನಲ್ಲಿ ಮುನ್ನಿಗರಿಬ್ಬರು ಒಂದು ವಾರ ಪೂರ್ತಿ, ಅಥವಾ ಕಾರಿಗರು ನಾಲ್ವರು ಒಂದು ತಿಂಗಳು ಪೂರ್ತಿ, ಅಥವಾ ನಾಥರು ಹತ್ತು ಜನ ಆರು ತಿಂಗಳು ಪೂರ್ತಿ ಊಟ ಮಾಡಬಹುದಾಗಿತ್ತಂತೆ. ಇವರೇನಾದರೂ ಚಿನ್ನವನ್ನೇ ಊಟ ಮಾಡುತ್ತಿದ್ದರೇನೋ, ಅದಕ್ಕೇ ಇಷ್ಟು ಖರ್ಚಿರಬಹುದು ಎಂದರೆ ಅದೂ ಸ್ವಲ್ಪ ಮಟ್ಟಿಗೆ ನಿಜ. ಇವರು ಚಿನ್ನದ ತಟ್ಟೆಯಲ್ಲಿ ಮುಂದೆ ಕುಳಿತ ನಂತರ ಕಿಂಕಾಪಿನ ಉಡುಪನ್ನೂ ಯಜಮಾನನ ಸೇವಕರು

ಮುದ್ರಿಸಿರುವ ಕೈಯುಗಲ ಚಿನ್ನದ ಪವಾಲಿಯನ್ನು ಧರಿಸಿದ ಮಾಣಿ ಬಿಸಿ ಬಿಸಿ ಸ್ವರ್ಣಭೋಗ ಅಕ್ಕಿ ಅನ್ನ ಬಡಿಸಿದ ಮೇಲೆ ಮತ್ತೊಬ್ಬ ಅಂತಹ ಮಾಣಿ ಆವಿ ಸೂಸುತ್ತಿರುವ ಅನ್ನದ ಮೇಲೆ ಎರಡು ಕೈಯುಗಲ ಚಿನ್ನದ ರೇಕನ್ನು ಹರಡಿ ದೂರ ಹೋಗಿ ನಿಲ್ಲುತ್ತಿದ್ದ. ಚಿನ್ನ ಕರಗಿ ಅನ್ನದೊಳಗೆ ಪ್ರವಹಿಸಿದ ಮೇಲೆ ಇನ್ನೊಬ್ಬ ಮಾಣಿ ಬಂದು ಅದರ ಮೇಲೆ ಎರಡು ದೊಡ್ಡ ಸವಟು ಆ ದಿನ ಕರದ ಬಿಳಿ ಹಸುವಿನ ಹಾಲು ಕೆನೆಯಿಂದ. ಕಾಸಿದ ತುಪ್ಪ ಬಡಿಸಿದ ಮೇಲೆ ಹೊನ್ನಿಗ ಮಹಾಶಯರು ಆಪೋಶನ ತೆಗೆದುಕೊಂಡು ಊಟ ಪ್ರಾರಂಭ ಮಾಡುತ್ತಿದ್ದರು. ಇವರಿಗೆ ಊಟಕ್ಕೆ ಬಡಿಸುತ್ತಿದ್ದ ಅಕ್ಕಿ ವಿಚಾರ ಕೇಳಿ. ಈ ಅಕ್ಕಿ ಭಾರತವರ್ಷದಿಂದ ಇವರಿಗೋಸ್ಕರ ನಾಥ ದ್ವೀಪಕ್ಕೆ ಆಮದು ಆಗುತ್ತಿತ್ತು. ಅಕ್ಕಿ ಕೈಲಾಸ-ಮಾನಸ ಸರೋವರಗಳಿಗೆ ಅನತಿ ದೂರದಲ್ಲಿರುವ ಕಿನ್ನರ ಪ್ರಾಂತ್ಯದಲ್ಲಿ ಕಿನ್ನರರು ಚಮರೀ ಮೃಗದ ಗೊಬ್ಬರವನ್ನು ವರ್ಷವೆಲ್ಲ ಶೇಖರ ಮಾಡಿ ಹಿಮ ಕರಗಿದಾಗ ಅಲ್ಲೇ ಹತ್ತಿರ ಗಂಗಾ ಮೂಲದ ಪ್ರಾಂತ್ಯದಲ್ಲಿ ಹಿಮಗಿರಿಗಳ ನಡುವೆ ಕಣಿವೆಗಳಲ್ಲಿ ಅಲ್ಲಲ್ಲಿ ಅಂಗೈ ಅಗಲದ ಪ್ರಮಾಣದಲ್ಲಿ ಚದುರಿದ್ದ ತಮ್ಮ ಗದ್ದೆಗಳಿಗೆ ಹಾಕಿ ಆ ಪ್ರಾಂತ್ಯದಲ್ಲಿ ಮಾತ್ರ ಬೆಳೆಯುವಲ್ಲಿ ಸ್ವರ್ಣಭೋಗ ಸುವಾಸಿನಿ ಎಂಬ ಸ್ವರ್ಣ ಚಂಪಕ ಹೂವಿನ ಸುವಾಸನೆ ಇರುವ ಭತ್ತದ ಒಂದು ಜಾತಿ ಬೆಳೆ ಬೆಳೆಯುತ್ತಿದ್ದರಂತೆ. ಗಂಗಾ ಮೂಲದಲ್ಲಿ ಬೆಳೆದ ಈ ಅಕ್ಕಿ ಗಂಗಾ-ನಾವೆಗಳಲ್ಲಿ ಗಂಗಾ ಮುಖಕ್ಕೆ ಬಂದು ಅಲ್ಲಿಂದ ಸಾಗರವನ್ನು ಹಡಗಿನಲ್ಲಿ ದಾಟಿ ನಾಥ ದ್ವೀಪಕ್ಕೆ ಬರುತ್ತಿತ್ತು. ಈ ಅಕ್ಕಿಯ ಬೆಲೆ ಅಲ್ಲೇ ನಾಥ



ದ್ವೀಪದಲ್ಲಿ ಬೆಳೆಯುತ್ತಿದ್ದ ಇತರ ಅಕ್ಕಿಗಳ ಬೆಲೆಗಿಂತ ನೂರು ಮಡಿ ಹೆಚ್ಚಿತ್ತು ಎನ್ನುವುದು ಅತಿಶಯವಲ್ಲ. ಹೊನ್ನಿಗರಲ್ಲದೆ ಎಲ್ಲೋ ಅಲ್ಲಿ ಇಲ್ಲಿ ಕೆಲವು ಬಹಳ ಮುಖ್ಯ ಸ್ಥಾನಗಳಲ್ಲಿದ್ದ ಮುನ್ನಿಗ ಅಧಿಕಾರಿಗಳನ್ನು ಬಿಟ್ಟು ಇನ್ನು ಯಾರಿಗೂ ಈ ಕಿನ್ನರ ಕೈಲಾಸದ ಅಕ್ಕಿ ಅನ್ನವನ್ನು ತಿನ್ನುವ ಸುಯೋಗ ಇರುತ್ತಿರಲಿಲ್ಲ. ಹೀಗೇ ಪುರಾಣ ಪ್ರೋಕ್ತವಾದ ಹೊನ್ನಿಗರ ಊಟದ ವಿವಿಧ ವಸ್ತುಗಳನ್ನು ನಾವು ವಿವರಿಸುತ್ತಾ ಹೋದರೆ ಕೊನೆ ಮೊದಲಿಲ್ಲ. ಅವರ ಒಪ್ಪೊತ್ತಿನ ಊಟದ ಖರ್ಚು ಎಷ್ಟಿದ್ದಿರಬಹುದು ಎಂದು ನೀವೇ ಊಹಿಸಬಹುದು.

ನಾಥ ದ್ವೀಪದ ಧನದಲ್ಲಿ ಹೆಚ್ಚು ಭಾಗ ಒಂದಲ್ಲ ಒಂದು ವಿಧದಲ್ಲಿ ಹೊನ್ನಿಗರು ತಮ್ಮ ಸುಪರ್ದಿನಲ್ಲಿಟ್ಟುಕೊಂಡು ದೇಶದ ಆರ್ಥಿಕ ಸ್ಥಿತಿ ಕೀಲಕ್ಕೆ ಎಣ್ಣೆ ಹಾಕಿದ ಚಕ್ರದಂತೆ ಹೋಗುವ ಹಾಗೆ ಮಾಡಿದ್ದರಂತೆ. ಇದು ಅವರು ವಂಶ ಪಾರಂಪರ್ಯವಾಗಿ ಮಾಡುತ್ತಾ ಬಂದಿದ್ದ ಕೆಲಸ. ಶ್ವೇತೀಯರು ಸ್ವದೇಶಕ್ಕೆ ತೆರಳಿದ ಮೇಲೆ ಇಲ್ಲಿ ಪ್ರಾರಂಭಿಸಿದ್ದ ಪ್ರಜಾಪ್ರಭುದೇವನ ಜಾತ್ರೆಯನ್ನು ನಡೆಸಲು ತಾವು ಧಾರಾಳವಾಗಿ ಖರ್ಚು ಮಾಡುತ್ತಿದ್ದುದೆಲ್ಲ ಮುಂದಿನ ಜಾತ್ರೆ ವೇಳೆಗೆ ಹತ್ತು ಮಡಿಯಾಗಿ ತಮಗೆ ಬರುತ್ತಿದ್ದುದನ್ನು ನೋಡಿದ ಮೇಲಂತೂ ಇತರ ಕ್ಷುದ್ರ ದೇವತೆಗಳಲ್ಲಿದ್ದ ನಂಬಿಕೆಯನ್ನು ನೀಗಿ ಸದಾ ಪ್ರಜಾಪ್ರಭುದೇವನ ಗುಣಗಾನವನ್ನೇ ಮಾಡುತ್ತಿದ್ದರಂತೆ.

ನಾಥ ಪುರಾಣ ರಚಿಸಿದ ಋಷಿವರ್ಯರು ಭಾರತ ವರ್ಷದಿಂದ ನಾಥ ದ್ವೀಪಕ್ಕೆ ಹೋಗಿ ಸ್ವಲ್ಪ ಇಷ್ಟು ನೋಡಿದುದನ್ನೆಲ್ಲ ಶ್ಲೋಕಗಳ ರೂಪದಲ್ಲಿ ರಚಿಸುವ ವೇಳೆಗೆ ದ್ವೀಪವು 'ನಾಥರ ಸ್ವಭಾವಸಿದ ಸರ್ವತಂತ್ರ ಸ್ವತಂತ್ರ ಸಮಾಜಸ್ವಾಮ್ಯ ಗಣರಾಜ್ಯ'ವೆಂದು ಘೋಷಿಸಲ್ಪಟ್ಟು ಮೂರು ಸಹಸ್ರ ವರ್ಷಗಳಾಗಿದ್ದಿರಬೇಕು. ಕಲಿಯುಗದ ಕಾರ್ಮೋಡಗಳು ಇನ್ನೂ ಕವಿದಿರಲಿಲ್ಲ. ನಾಥರು ತಮ್ಮ ಒಪ್ಪೊತ್ತೂಟ ಮತ್ತು ಪೂರಲುಪವಾಸ

ಹೊತ್ತು ರೊಟ್ಟಿ ಅಥವಾ ಹಿಟ್ಟು ಸಿಗುವ ಕಾಲ ಬರಬಹುದು ಎಂದು ಚಾತಕ ಪಕ್ಷಿಗಳಂತೆ ತಾಳ್ಮೆಯಿಂದ ಬಾಯಿ ಬಿಟ್ಟುಕೊಂಡು ಕಾದಿದ್ದರು. ಮುನ್ನಿಗರು ಕೂಡ ತಮ್ಮ ನಾಥರ ಹಸಿವನ್ನು ನೀಗಿಸಲು ಪ್ರಜಾಪ್ರಭುದೇವನ ಪೂಜಾ–ಜಾತ್ರಾ ಕ್ರಮಗಳ ಸರಿಯಾದ ಆಚರಣೆಯಿಂದಲೇ ಸಾಧ್ಯವೆಂದೂ ಸದ್ಯಕ್ಕೆ ಮುಂದೇನು ಮಾಡುವುದು ಎಂದು ತಿಳಿಯದಿದ್ದರೂ ಪ್ರಜಾಪ್ರಭುದೇವನ ಸಮ್ಮುಖದಲ್ಲಿ ತಮ್ಮ ಅಭಿಪ್ರಾಯಗಳನ್ನು ಪರಸ್ಪರ ಚರ್ಚೆ ಮಾಡುವುದರ ಮೂಲಕವೇ ಎಂದೋ ಹೇಗೋ ಸರಿಯಾದ ಮಾರ್ಗ ಕಾಣಬಹುದು ಎಂದೂ ದೃಢ ನಂಬಿಕೆಯಿಟ್ಟು ಇದಕ್ಕೆ ಸಂಬಂಧಪಟ್ಟ ವಾದವಿವಾದಗಳಲ್ಲಿ ತಮ್ಮ ಶಕ್ತಿ ಮೀರಿ ಭಾಗವಹಿಸುತ್ತಿದ್ದರು. ಈ ವಾದ ವಿವಾದಗಳ ವರದಿಯನ್ನು ಕೇಳಿಯೇ ನಾಥರ ಅರ್ಧ ಹಸಿವೆಲ್ಲ ಇಂಗುತ್ತಿತ್ತು. ಈಗ ನಾವು ದೇವನ ಪೂಜೆ ಮತ್ತು ಜಾತ್ರೆ ಹೇಗೆ ನಡೆಯುತ್ತಿತ್ತು ಎಂದು ಸಂಕ್ಷೇಪವಾಗಿ ತಿಳಿದುಕೊಳ್ಳೋಣ.

“ವ್ಯವಸ್ಥಾ ಸಹಸ್ರ”ವೆಂಬ ಒಂದು ಸಾವಿರ ಶ್ಲೋಕಗಳ ಗ್ರಂಥದಲ್ಲಿ ದೇಶದ ಆಡಳಿತದ ಕಾರ್ಯಕ್ರಮ ವಿವರಿಸಲ್ಪಟ್ಟಿತ್ತು. ಮೊದಲನೆಯ ನೂರು ಶ್ಲೋಕಗಳ “ಲಕ್ಷಣ ಶತಕ” ಎಂಬ ಅಧ್ಯಾಯದಲ್ಲಿ ಗಣತಂತ್ರದ ಗುಣ ಲಕ್ಷಣಗಳು, ಧ್ಯೇಯ ಮತ್ತು ರಚನೆಗಳು ವಿಸ್ತರಿಸಲ್ಪಟ್ಟಿದ್ದವು. “ನಾಥ ಸಭಾ ಶತಕ” “ದ್ವೀಪ ಸಭಾ ಶತಕ” “ಪ್ರಜಾ ಪ್ರಭು ದೇವ ಲಕ್ಷಣ ಶತಕ,” “ಪ್ರಭುದೇವಪೂಜಾವಿಧಿ ಶತಕಂ” “ಪಂಚ ವಾರ್ಷೀಯ ಪೂಜಾ ವಿಧಿ ಶತಕ” ಎಂಬ ಇತರ ಅನೇಕ ಭಾಗಗಳಿದ್ದ ಈ ಗ್ರಂಥ ಕಂಠಪಾಠ ರೂಪದಲ್ಲಿ ಚಲನೆಯಲ್ಲಿತ್ತು. ಇದರ ಮೇಲೆ ಹುಟ್ಟಿದ ಹತ್ತಾರು ಟೀಕೆಗಳು, ತಾತ್ಪರ್ಯಗಳು, ಕೌಮುದಿಗಳು ಮುಂತಾದುವು ಕಂಠಪಾಠ ಗ್ರಂಥಗಳಾಗಿ ಬಳಕೆಯಲ್ಲಿದ್ದವು.

ಗಣಾಧ್ಯಕ್ಷರೇ ದ್ವೀಪದ ಸರ್ವಶ್ರೇಷ್ಠ ವ್ಯಕ್ತಿ. ಇವರ ಸಹಾಯಕ್ಕೆ ಮಂತ್ರಿಮಂಡಲವಿರುತ್ತಿತ್ತು.

ಬೇಕಾದ ಹತ್ತು ಜನಗಳನ್ನು ಆರಿಸಿಕೊಂಡು ತಮ್ಮ ಮಂತ್ರಿಮಂಡಲವನ್ನು ನಿರ್ಮಿಸಿಕೊಳ್ಳುತ್ತಿದ್ದರು. ಗಣಾಧ್ಯಕ್ಷರು ಹತ್ತು ವರ್ಷಕ್ಕೊಮ್ಮೆ ನಾಥಸಭಾಸದಸ್ಯರು ಐದು ವರ್ಷಕ್ಕೊಮ್ಮೆ ಪಂಚವರ್ಷೀಯ ಜಾತ್ರೆಯಲ್ಲಿ ಪ್ರಜೆಗಳಿಂದ ಚುನಾಯಿತರಾಗಿ ಬರುತ್ತಿದ್ದರು. ಜಾತ್ರಾ ಕಾರ್ಯಕಲಾಪಗಳಿಗೋಸ್ಕರವೂ ಆಡಳಿತದ ಅನುಕೂಲಕ್ಕೋಸ್ಕರವೂ ದ್ವೀಪವು ನೂರು ಭಾಗಗಳಾಗಿ ವಿಭಾಗವಾಗಿತ್ತು. ಒಂದೊಂದು ಭಾಗದಿಂದಲೂ ನಾಥ ಸಭೆಗೆ ಒಬ್ಬ ಸದಸ್ಯರು ಚುನಾಯಿತರಾಗಿ ಬರುತ್ತಿದ್ದರು.

ನಾಥ ದ್ವೀಪದಲ್ಲಿ ನಾಥ ಸಭೆ ಮತ್ತು ದ್ವೀಪ ಸಭೆ ಎಂಬ ಎರಡು ಚುನಾಯಿತ ಸಭೆಗಳಿದ್ದವು. ನಾಥ ಸಭೆಯು ನೂರು ಮಂದಿ ಸದಸ್ಯರೂ ಪ್ರಜೆಗಳಿಂದ ನೇರವಾಗಿ ಐದು ವರ್ಷಗಳಿಗೊಮ್ಮೆ ಚುನಾಯಿತರಾಗುತ್ತಿದ್ದರೆಂದು ಮೇಲೆ ತಿಳಿಸಿದೆವಲ್ಲವೆ? ಅವರಿಗೆ ಇರಬೇಕಾದ ಅರ್ಹತೆಯ ವಿಷಯ ಸ್ವಲ್ಪ ಕೇಳಿ ಅಭ್ಯರ್ಥಿಗೆ ವಯಸ್ಸು ಮೂವತ್ತು ವರ್ಷವಾದರೂ ಆಗಿರಬೇಕು, ಐವತ್ತೈದಕ್ಕೆ ಹೆಚ್ಚಿರಕೂಡದಾಗಿತ್ತು. ದ್ವೀಪಸಭಾ ಸದಸ್ಯತ್ವದ ಅಭ್ಯರ್ಥಿಗೆ ವಯಸ್ಸು ಅರವತ್ತಕ್ಕಿಂತ ಕಡಿಮೆಯಾಗಿರಕೂಡದೆಂದೂ ಒಂದು ಸಲ ಸದಸ್ಯನಾಗಿ ಚುನಾಯಿತನಾದ ಮೇಲೆ ಅವನ ಸದಸ್ಯತ್ವ ಜೀವಾವಧಿ ಮುಂದುವರಿಯುವುದಾಗಿಯೂ "ಅರ್ಹತಾ ಪಂಚಕ"ದಲ್ಲಿ ನಮೂದಾಗಿತ್ತು.

ನಾಥ ಸಭೆಯ ಸದಸ್ಯ ಬಡವನಾಗಿದ್ದರೂ ಪರವಾಗಿಲ್ಲ ಆದರೆ ಬಲ್ಲಿದನಾಗಿರಬೇಕು. ತನ್ನ ಸಂಸಾರದವರ ಅಥವಾ ಆಪ್ತ ಬಂಧುಗಳ ಇಲ್ಲವೇ ಆಪ್ತ ಜನರ ಸಹಕಾರ ಅವರಿಗೆ ಇರಬೇಕು! ಎನ್ನುವ ತತ್ವವನ್ನನುಸರಿಸಿ ಕೆಲವು ನಿಯಮಗಳು ನಿಬಂಧಿತವಾಗಿದ್ದವು. ಸದಸ್ಯತ್ವಕ್ಕಾಗಿ ಯಾವ ಧನ ಶುಲ್ಕವನ್ನೂ ಕೊಡಬೇಕಾಗಿರ

ಲಿಲ್ಲ. ಅಭ್ಯರ್ಥಿ ವ್ಯವಸ್ಥಾ ಸಹಸ್ರದ ಲಕ್ಷಣ ಶತಕ ಮತ್ತು ನಾಥ ಸಭಾ ಶತಕ ಹೀಗೆ ಒಟ್ಟು ಇನ್ನೂರು ಶ್ಲೋಕಗಳನ್ನು ಕಂಠಪಾಠ ಮಾಡಿರಬೇಕು. ಎನ್ನುವುದು ಮೊದಲನೆಯ ನಿಯಮ ಪ್ರತಿ ನಾಥ ಸಭಾಸದಸ್ಯನಿಗೂ ನಾಲ್ಕು ಜನ ಸಹಾಯಕ ಸದಸ್ಯರನ್ನು ನೇಮಿಸಿ ಕೊಳ್ಳುವ ಹಕ್ಕು ಇತ್ತು ಮತ್ತು ಚುನಾವಣೆಗೆ ಅಭ್ಯರ್ಥಿಯಾಗಿ ನಿಂತಾಗಲೇ ಅವರ ಹೆಸರುಗಳು ತನ್ನೊಡನೆ ಅವರಿಗಿರುವ ಬಂಧುತ್ವ ಇವನ್ನು ನಮೂದಿಸಬೇಕು. ಅವರಿಗೂ ಲಕ್ಷಣ ಶತಕ ಮತ್ತು ನಾಥ ಸಭಾ ಶತಕ ಪಾಠವಾಗಿರಬೇಕು. ಅಭ್ಯರ್ಥಿ ಚುನಾಯಿತನಾದರೆ ಅವನ ನಾಲ್ವರು ಸಹಾಯಕರೂ ಚುನಾಯಿತರಾದಂತೆ ಭಾವನೆ. ಆದರೆ ಸಭೆ ಸೇರಿದಾಗ ಸಭೆಯಲ್ಲಿ ಮತದಾನದ ಹಕ್ಕು ಸದಸ್ಯನಿಗೆ ಮಾತ್ರ ಇರುತ್ತಿತ್ತು. ಸದಸ್ಯ ಅನಾರೋಗ್ಯದಿಂದೋ ಇನ್ನಾವ ಕಾರಣದಿಂದಲೋ ಸಭೆಗೆ ಬರದಿದ್ದರೆ ಅಧ್ಯಕ್ಷರ ಸಮ್ಮತಿಯಿಂದ ಸಹಾಯಕ ಸದಸ್ಯರಲ್ಲಿ ಮೊದಲನೆಯವರು ಸದಸ್ಯರ ಸ್ಥಾನದಲ್ಲಿ ಕಾರ್ಯ ವಹಿಸಬಹುದು. ಸದಸ್ಯ ನಿಧನರಾದರೂ ಮುಂದಿನ ಪ್ರಜಾಪ್ರಭುದೇವ ಜಾತ್ರೆಯವರೆಗೂ ಇವರು ನಿಧನ ಸದಸ್ಯಸ್ಥಾನದಲ್ಲಿ ಕುಳಿತು ಸಭೆಯಲ್ಲಿ ಭಾಗವಹಿಸಬಹುದು. ಸದಸ್ಯ ಮಂತ್ರಿಯಾಗಿ ನೇಮಕನಾದರೆ ಆತನ ಸಹಾಯಕ ಸದಸ್ಯರು ಈಗ ಆತನ ಸಹಾಯಕ ಮಂತ್ರಿಗಳೆಂದು ಪರಿಗಣಿಸಲ್ಪಡುತ್ತಿದ್ದರು.

ಸಾಮಾನ್ಯವಾಗಿ ಅಭ್ಯರ್ಥಿ ತನ್ನ ಹೆಂಡತಿ, ವಯಸ್ಸಿಗೆ ಬಂದ ಮಕ್ಕಳು ಅಥವಾ ತನ್ನ ಅಣ್ಣ-ತಮ್ಮಂದಿರು ಚಿಕ್ಕಪ್ಪಂದಿರು, ಹೆಂಡತಿಯ ಅಣ್ಣ ತಮ್ಮಂದಿರು, ಹೀಗೆ ಯಾರಾದರೂ, ನಾಲ್ಕು ಜನಗಳನ್ನು ಸಹಾಯಕ ಸದಸ್ಯರನ್ನಾಗಿ ನಿಯಮಿಸಬಹುದಾಗಿತ್ತು. ಇಂತಹ ಅಭ್ಯರ್ಥಿಗೆ ತಾನೆ ಚುನಾವಣೆಯಲ್ಲಿ ಜಯಿಸುವ ಸಂಭವ ಹೆಚ್ಚಾಗಿತ್ತಂತೆ! ಆಗಿನ ಕಾಲದ ಅಭಿಪ್ರಾಯ ಏನೆಂದರೆ ಯಾವಾತನ ಕಾರ್ಯದಲ್ಲಾಗಲಿ ಆಸಕ್ತಿ ವಹಿಸಿ ಆತನ ಸಹಾಯದಲ್ಲಿ ಶಕ್ತಿ ಮೀರಿ ತಮ್ಮಂದಿರು, ಹೀಗೆ ನಿಕಟ ಸಂಬಂಧವಿದ್ದವರು ಮಾತ್ರ ಅಲ್ಲವೇ? ಆದ್ದರಿಂದ ಇಂತಹ ಸಹಾಯ ವಿರುವ ಅಭ್ಯರ್ಥಿಗಳನ್ನೇ ಚುನಾಯಿಸುವುದು ಉತ್ತಮ! ಅಲ್ಲದೆ ಇತರ ಸ್ವಂತ ಕಾರ್ಯಗಳನ್ನೆಲ್ಲಾ ಬಿಟ್ಟುಬಿಟ್ಟು ಸಂಸಾರಕ್ಕೆ ಸಂಸಾರವೇ ದೇಶಸೇವೆಗೆ ನಿಂತಿದೆಯಲ್ಲ ಎಂಬ ಗೌರವ ಬೇರೆ ಅಂತಹವರಲ್ಲಿ. (ಇದನ್ನು ನಾವು ಓದಿದಾಗ ಈಗ, ಕ್ರಿ.ಶ. ೨೦ನೆಯ ಶತಮಾನದಲ್ಲೂ ನಾವು ಇಂತಹ ಪದ್ಧತಿಯನ್ನು ಪೂರ್ಣವಾಗಿ, ಮುಚ್ಚುಮರೆ ಇಲ್ಲದೆ, ಧೈರ್ಯವಾಗಿ ಅನು-ಸರಿಸಬಹುದು ಎಂದು ತೋರುತ್ತದೆ, ಅಲ್ಲವೆ?)

ದ್ವೀಪ ಸಭೆಯ ಸದಸ್ಯತ್ವಕ್ಕೆ ವಯಸ್ಸಿನ ನಿಯಮದ ಬಗ್ಗೆ ಆಗಲೇ ತಿಳಿಸಿದ್ದೇವೆ. ಸದಸ್ಯತ್ವ ಆಜೀವ ಪರ್ಯಂತ ಎಂದೂ ತಿಳಿದಿದ್ದೇವೆ. ಇನ್ನು ಕೆಲವು ನಿಯಮಗಳನ್ನು ಕೇಳಿ. ಅಭ್ಯರ್ಥಿ ಹಿಂದೆ ಯಾವಾಗಲಾದರೂ ಒಂದು ಸಲವಾದರೂ ನಾಥ ಸಭೆಯ ಸದಸ್ಯ ಅಥವಾ ಸಹಾಯಕ ಸದಸ್ಯನಾಗಿದ್ದಿರಬೇಕು, ಅಥವಾ ದ್ವೀಪದ ಆಡಳಿತದ ವ್ಯವಸ್ಥೆಯಲ್ಲಿ ಸಚಿವ, ಸಹಸಚಿವ, ಉಚ್ಚ ಸೇನಾಧಿಕಾರಿ, ಧನಕೋಶದ ಕಾರ್ಯನಿರ್ವಾಹಕ, ನ್ಯಾಯಾಧೀಶ ಇಂಥ ಉನ್ನತ ಜವಾಬ್ದಾರಿಯಿದ್ದ ಕೆಲಸದಲ್ಲಿದ್ದು ವಿಶ್ರಾಂತನಾಗಿದ್ದಿರಬೇಕು. ಈ ನಿಯಮದಿಂದ ದ್ವೀಪದ ವಿಶ್ರಾಂತ ಮೇಧಾವಿ ಜನಗಳ ಯಾವಜ್ಜೀವ ಸದುಪಯೋಗಕ್ಕೆ ಅವಕಾಶವಿತ್ತು. ದ್ವೀಪ ಸಭಾಸದಸ್ಯರು ಕೂಡ ತಮ್ಮ ಸಹಾಯಕ್ಕೆ ಜನಗಳನ್ನು ನಿಯಮಿಸಿಕೊಳ್ಳಬಹುದಾಗಿತ್ತು. ಆದರೆ ಇಂತಹ ಸಹಾಯಕರಿಗೆ ವೃದ್ಧ ಸದಸ್ಯರ ಶುಶ್ರೂ-ಷೆಯೇ ಮುಖ್ಯ ಕಾರ್ಯವಾಗಿರುತ್ತಿದ್ದುದರಿಂದ, ವಿದ್ಯೆ ಕಡಮೆಯಾದ ನಾಥ ಅಥವಾ ಕಾರಿಗ ಪಂಗಡಗಳಿಂದ ಜನಗಳನ್ನು ಆರಿಸಿಕೊಳ್ಳಬಹುದಾಗಿತ್ತು. ಅವರಿಗೆ ಇರಬೇಕಾಗಿದ್ದ ಅರ್ಹತೆಯೊಂದೇ– ಗಟ್ಟಿ ಮುಟ್ಟಾದ ಮೈ ಮತ್ತು ಸದಸ್ಯರ ಕೃಪಾ ಕಟಾಕ್ಷ,

ದ್ವೀಪ ಸಭೆಯಲ್ಲಿ ಒಟ್ಟು ೫೦೦ ಮಂದಿ ಇದ್ದರಂತೆ. ಇವರಲ್ಲಿ ಜಾಗ ಖಾಲಿ ಬಿದ್ದಂತೆಲ್ಲ

ಯರನ್ನಾದರೂ ಚುನಾಯಿಸುತ್ತಿದ್ದರಂತೆ.

ನಾಥ ಸಭಾ ಸದಸ್ಯರಿಗೆ ಪ್ರತಿಯೊಬ್ಬರಿಗೂ ತಿಂಗಳಿಗೆ ೧೦೦ ಬೆಳ್ಳಿ ವರಹಗಳು, ಸಹಾಯಕ ಸದಸ್ಯರಿಗೆ ೫೦ ಬೆಳ್ಳಿ ವರಹಗಳು, ದ್ವೀಪ ಸಭಾ ಸದಸ್ಯರಿಗೆ ೫೦ ಬೆಳ್ಳಿ ವರಹಗಳು, ಅವರ ಸಹಾಯಕರಿಗೆ ೫ ಬೆಳ್ಳಿ ವರಹಗಳು, ಮತ್ತು ೨೫ ಮಾನ ಅಕ್ಕಿ ಹೀಗೆ ವೇತನ ನಿಗದಿಯಾಗಿತ್ತು.

ನಾಥರ ಸೇವೆ ಮಾಡುವುದೇ ಧ್ಯೇಯವಾಗಿಟ್ಟುಕೊಂಡ ಅನೇಕ ಪಕ್ಷಗಳಿದ್ದವಂತೆ. ನಾಥ ಸೇವಾ ಪಕ್ಷ, ನಾಥ ಜನಪಕ್ಷ, ಜನಸೇವಾ ಪಕ್ಷ, ದ್ವೀಪ ಸೇವಾ ಪಕ್ಷ, ನಾಥ ದ್ವೀಪ ಪಕ್ಷ ಎಂಬ ಮೂರು ನಾಲ್ಕು ದೊಡ್ಡ ಪಕ್ಷಗಳೂ ಅಲ್ಲದೆ ಸಣ್ಣಪುಟ್ಟ ಕೆಲ ಕೆಲವು ಪಕ್ಷಗಳೂ ಇದ್ದವು. ಒಂದೊಂದೂ ತಾವು ಮಾತ್ರ ದ್ವೀಪದ ಜನಗಳ ಬಡತನವನ್ನು ನೀಗಿಸಿ ಅವರನ್ನು ಉದ್ಧಾರಮಾಡಬಲ್ಲೆವೆಂದೂ ಇತರ ಪಕ್ಷಗಳಿಗೆ ಆ ಸಾಮರ್ಥ್ಯವಿಲ್ಲವೆಂದೂ ಪಂಚ ವರ್ಷೀಯ ಜಾತ್ರೆಯ ಸಮಯದಲ್ಲಿ ಊರೆಲ್ಲಾ ಡಂಗುರ ಹೊಡೆದು ನಾಥ ಜನಗಳ ಮತ್ತು ಕಾರಿಗರ ಮತವನ್ನು ಸಂಪಾದಿಸುತ್ತಿದ್ದವಂತೆ. ಈ ಜಾತ್ರೆಯಲ್ಲಿ ಒಂದು ಪಕ್ಷಕ್ಕೆ, ಮುಂದಿನ ಜಾತ್ರೆಯಲ್ಲಿ ಇನ್ನೊಂದು ಪಕ್ಷಕ್ಕೆ, ಹೀಗೆ ತಮ್ಮ ಮತಗಳನ್ನು ಬದಲಾಯಿಸಿ ಕೊಡುತ್ತಾ ಶ್ವೇತೀಯರು ಹೊರಟುಹೋದ ಮೂರು ಸಾವಿರ ವರ್ಷಗಳು ಕೂಡ ನಾಥ ಜನರು ಎಲ್ಲರಿಂದಲೂ ಅಮೋಘವಾದ ಸೇವೆ ಪಡೆದಿದ್ದರಂತೆ.

ಶ್ವೇತೀಯರು ಬಿಟ್ಟುಹೋದಂದಿನಿಂದಲೇ ಮುನ್ನಿನ ಸದಸ್ಯರು ತಮ್ಮೊಡನೆ ನಾಥ ಸೇವೆ ಮಾಡಲು ಕೆಲವು ನಾಥರನ್ನೂ ಕಾರಿಗರನ್ನೂ ತರಬೇತು ಮಾಡಿ ಸದಸ್ಯತ್ವ ಕೊಡಿಸಿದರಂತೆ. ಆ ನಾಥ ಸದಸ್ಯರ ವಂಶಗಳು ಪರಂಪರೆಯಾಗಿ ಇದೇ ಸೇವೆಯನ್ನು ಸಲ್ಲಿಸುತ್ತಾ ಮುನ್ನಿನ ವರ್ಗದಲ್ಲಿ ಮಿಳಿತವಾಗಿಹೋಗಿದ್ದರಂತೆ. ಇಂತಹ ಪೂರ್ವನಾಥ ಅರ್ಧ-ಮುನ್ನಿನ ಪರಂಪರೆಗಳನ್ನು ನೋಡಿ ಇತರ ನಾಥರಿಗೆ ತಮಗೂ ಎಂದೋ ಒಂದು ದಿನ ಈ ರೀತಿ ಮೋಕ್ಷ ಬರಬಹುದೆಂಬ ಭಾವನೆಯಾಗುತ್ತಿತ್ತಂತೆ.

ನಾಥ ಸಭಾ ಮತ್ತು ದ್ವೀಪ ಸಭಾ ಗ್ರಂಥಾಲಯದಲ್ಲಿ ಒಂದು ನೂರು ಅಮೂಲಾಗ್ರ ಗ್ರಂಥ ಕಂಠಪಾಠಿಗಳಿದ್ದರು. ಸಭೆಯಲ್ಲಿ ಚರ್ಚೆ ನಡೆಯುವಾಗ ಇವರು ಹಾಜರಿದ್ದು ಸದಸ್ಯರು ಬೇಕೆಂದಾಗ ಆ ಕ್ಷಣ ತಮ್ಮ ಜ್ಞಾಪಕ ಭಂಡಾರವನ್ನು ತಿರುವಿಹಾಕಿ ಸನ್ನಿವೇಶಕ್ಕೆ ಸಂಬಂಧಪಟ್ಟ ಶ್ಲೋಕಗಳನ್ನು ವ್ಯವಸ್ಥಾ ಸಹಸ್ರದಿಂದಲೂ, ಟೀಕಾ ಗ್ರಂಥಗಳಿಂದಲೂ, ಕೌಮುದಿಗಳಿಂದಲೂ ತೆಗೆದು ಉದ್ಧರಿಸುತ್ತಿದ್ದರು. ಅವರ ಅದೇ ಸಮಯದಲ್ಲಿ ಇನ್ನೊಬ್ಬ ಸದಸ್ಯ ಈ ಅಭಿಪ್ರಾಯಕ್ಕೆ ವಿರುದ್ಧವಾದ ಅಭಿಪ್ರಾಯವೂ ಇರುವುದಾಗಿ ತಿಳಿಸಿ ಅದನ್ನು ಕೋರಿದರೆ ಕಂಠಪಾಠಿಗಳು ಅಂತಹ ಶ್ಲೋಕಗಳನ್ನೂ ನಿಷ್ಪಕ್ಷಪಾತವಾಗಿ ಉದ್ಧರಿಸುತ್ತಿದ್ದರು.

ಈಗ ನಾವು ನಾಥ ಸಭೆಯ ಒಂದು ಅಧಿವೇಶನವನ್ನು ನಾಥ ಪೌರಾಣಿಕರ ಕಣ್ಣುಗಳ ಮೂಲಕ ಸಂದರ್ಶಿಸೋಣ. ಈ ಸಂದರ್ಭದಲ್ಲಿ ನಾವು ಒಂದು ವಿಚಾರವನ್ನು ಗಮನದಲ್ಲಿಡಬೇಕಾಗುತ್ತದೆ. ಪುರಾಣದ ಕಾಲದ ವಿದ್ಯಾವಂತ ಜನರ ಮಾತಿನ ವೈಖರಿಯೇ ಬೇರೆ, ಆ ಮಾತುಗಳ ಒಳ ಅರ್ಥವು ಅವರ ಇತರ ವಿದ್ವಜ್ಜನರಿಗೆ ಮಾತ್ರ ತಿಳಿಯುತ್ತಿತ್ತು. ಆ ಮಾತುಗಳನ್ನು ಪೌರಾಣಿಕ ಋಷಿಗಳು ತದ್ವತ್ ಹಾಗೇ ತಮ್ಮ ಕೃತಿಯಲ್ಲಿ ಸೇರಿಸಿ ಅಳವಡಿಸುತ್ತಿದ್ದರು. ಆದರೆ ಅವನ್ನು ಅದೇ ರೀತಿ ಬರೆಯುವುದಕ್ಕೆ ಹೋದರೆ ಇಲ್ಲಿ ಉದಾಹರಣೆಗೆಂದು ನಾಥ ಸಭೆಯ ಒಂದು ಅಧಿವೇಶನದಲ್ಲಿ ಒಬ್ಬ ಸದಸ್ಯರು ಮತ್ತೊಬ್ಬ ಸದಸ್ಯರ ಕಡೆ ತಿರುಗಿ ಹೇಳಿದ್ದನ್ನು ಕೆಳಗೆ ಕೊಟ್ಟಿರುವಂತೆ ತರ್ಜುಮೆ ಮಾಡಬೇಕಾಗುತ್ತದೆ:

"ಎಲೈ ಮಹಾಮಾನ್ಯ ಸದಸ್ಯರ್ಷಿಗಳೇ! ನೀವು ಇದೇ ತುಂಬಿದ ಸಭಾಂಗಣದಲ್ಲಿ ಇದೇ ಹದಿನೈದು ಸಹಸ್ರ ವರ್ಷಗಳ ಹಿಂದೆ ನಿಮ್ಮ ನಾಥ ಸಭಾ ವ್ರತಾರಂಭದಲ್ಲಿ ಆಗ ಮಾಡಿದ ಮಹಾ ಪ್ರತಿಜ್ಞೆಯನ್ನು ಮರೆತಿರಾ? 'ನಮ್ಮ ನಾಥ ಜನರಿಗಿರುವಂತೆ ನನಗೆ ಈ [illegible] ಇದವಲ್ಲಿ ನಿಲ್ಲಲು ಕೆಲಸವ [illegible]

ಇರಲು ನೆರಳು ಕೊಡುವ ತಾಳೆಗರಿಗಳ-ಗುಡಿಸಲು ಸಾಕು, ಉಣ್ಣಲು ದಿನಕ್ಕೆ ಎರಡು ಒಣ ರೊಟ್ಟಿಯ ಒಪ್ಪತ್ತೂಟ ಸಾಕು, ನನ್ನ ಋಷಿ ಪತ್ನಿಯರಿಗೆ ಉಡಲು ಆರು ಮೊಳದ ನಾರು ಮಡಿ ಒಂದು ಸಾಕು' ಎಂದು ತೊಟ್ಟ ವ್ರತ-ವನ್ನೂ ಆಗ ಮಾಡಿದ ಸತ್ಯ ವಾಕ್ಯ ಪ್ರತಿಜ್ಞೆ-ಗಳನ್ನೂ ಮೀರಿ ನಂತರ ಸ್ವಲ್ಪ ಸ್ವಲ್ಪವಾಗಿ ನರಲೋಕದ ಕ್ಷಣಿಕವಾದ ಸುಖ ಸೌಲಭ್ಯಗಳಿಗೆ ಮನಸೋತು, ಒಂದು ಸಲ ನಿಮ್ಮ ಇಷ್ಟ ಶಿಷ್ಯರುಗಳು ಕೊಟ್ಟ ಹತ್ತು ಸಹಸ್ರ ಗ್ರಾಮಗಳನ್ನು ದಾನವಾಗಿ ಸ್ವೀಕರಿಸಿದಿರಿ, ಹಾಗೆಯೇ ನಿಮ್ಮ ಮಕ್ಕಳು ಮರಿಮಕ್ಕಳಿಗೂ ಒಬ್ಬೊಬ್ಬರಿಗೂ ಹತ್ತು ಸಹಸ್ರ ಗ್ರಾಮಗಳನ್ನೂ ದಾನವಾಗಿ ಕೊಡಿಸಿದಿರಿ, ಅರಬಾಶ್ವಗಳಿಂದ ಎಳೆ-ಯಲ್ಪಡುವ ಬೆಳ್ಳಿಯ ರಥವನ್ನೂ ದಾನವಾಗಿ ಸ್ವೀಕರಿಸಿದಿರಿ, ಮಹಾನಗರದ ಸ್ವರ್ಣಸ್ಥ ಮಹಾಶಯರ ಮಹಲುಗಳ ಪಕ್ಕದಲ್ಲಿಯೇ ಅವರಂತೆಯೇ ಪತ್ತಂತಸ್ತಿನ ಮಹಲು ಕಟ್ಟಿಸಿ ಅಲ್ಲೇ ವಾಸವಾಗಿದ್ದೀರಿ, ಮಕ್ಕಳಿಗೂ ಕಟ್ಟಿಸಿ ಕೊಟ್ಟಿದ್ದೀರಿ. ರಜತ ತಾಂಬಾಳಗಳಲ್ಲೇ ದಿನಕ್ಕೆ ಮೂರು ದೊಡ್ಡ ಊಟ ಮತ್ತು ಚಿಕ್ಕ ಮೂರು ಊಟವೆಂದು ಗಂಧರ್ವ ದೇಶಗಳ ಪದ್ಧತಿ ಹಿಡಿದು ದಿನಕ್ಕೆ ಆರು ಬಾರಿ ಊಟ ಮಾಡುತ್ತಿದ್ದೀರಿ, ನಿಮ್ಮ ಪತ್ನಿಯರೂ ಸೊಸೆಯರೂ ಈಗ ಕಾಲಿನಿಂದ ತಲೆ ವರೆಗೂ ರತ್ನಾಭರಣ ಭೂಷಿತೆಯರಾಗಿ ಅಪ್ಸರ ಸ್ತ್ರೀಯರಿಗೆಂದು ಗಂಧರ್ವ ಲೋಕದಲ್ಲುಂಟುಮಾಡಿದ ತುಟಿ-ಗೆಂಪುಬಣ್ಣಗಳನ್ನೂ ಸುಗಂಧ ದ್ರವ್ಯಗಳನ್ನೂ ಅಲ್ಲಿಂದ ತರಿಸಿಕೊಂಡು ಮೈಗೆಲ್ಲಾ ವಿಲೇಪಿಸಿಕೊಂಡು ಹಾವಭಾವ ವಿಲಾಸಿನಿಯರಿಗಾಗಿ ಯೋಜನ ದೂರ ಘಮಘಮಿಸುವ ಪೂರ್ಣ ಸುಗಂಧಿನಿಯರಿಗಾಗಿ ವಿರಾಜಿಸುತ್ತಿದ್ದಾರೆ. ಸಾಕು, ಸಾಕು, ನಿಮ್ಮ ಸ್ವಯಂಕೃತ ಪ್ರತಿಜ್ಞಾಭಂಗ ವ್ರತಭಂಗಗಳ ಗಾನವನ್ನು ದಿನವೆಲ್ಲಾ ಹಾಡುವಷ್ಟು ನನಗೆ ಗೊತ್ತಿದ್ದರೂ ಸಭಾಧ್ಯಕ್ಷರು ಕಾಲಾವಧಿ ಮೀರಿತೆಂದು ಆಗಲೇ ಸೂಚಿಸುತ್ತಿದ್ದಾರಾದ್ದರಿಂದ ಈ ದಿನ ಇಲ್ಲಿಗೇ ಮುಕ್ತಾಯ ಮಾಡುತ್ತೇನೆ"

—ಎನ್ನುವ ಪುರಾಣ ಪ್ರೋಕ್ತವಾದ ಈ ಮಾತುಗಳನ್ನು ನಾವು ಈಗಿನ ಕಾಲದ, ಎಂದರೆ ಇಪ್ಪತ್ತನೆಯ ಶತಮಾನದ ಪಶ್ಚಿಮಾರ್ಧದ, ನಗರ ಬೀದಿಪೋಕರ ಮುಚ್ಚು ಮರೆಯಿಲ್ಲದ, ಕಂಡದ್ದನ್ನು ಕೆಂಡದಂತೆ ಹೇಳುವ ಮತ್ತು ಪ್ರಾಯಶಃ ಸ್ವಲ್ಪ ಮಟ್ಟಿಗೆ ಪೇಳುವವರ ಅಸೂಯೆಯೂ ಕಾಣುವ ಮಾತುಗಳಲ್ಲಿ ಹೇಳಿದರೆ ಮುಂದೆ ಹೇಳುವಂತಾಗುತ್ತದೆ:

"ಸಾಕು, ಸಾಕು ಬಿಡಯ್ಯಾ, ಎಲ್ಲಾ ಕಂಡಿದ್ದೇನೆ. ಮೆಂಬರಂತೆ, ಮಾನ್ಯ ಮೆಂಬರ್, ಅಥವಾ ಮಾನವಿಲ್ಲದ ಮೆಂಬರೋ? ಏನಯ್ಯಾ, ಇವ ಆಗ ತನ್ನ ಮಾತು, ತನ್ನ ಸತ್ಯ, ತನ್ನ ಪ್ರತಿಜ್ಞೆ, ತನ್ನ ಪ್ರಜಾಸೇವೆ ಮೇಲೆ ಇರೋ ಇಚ್ಛೆ, 'ದೇಶದಲ್ಲಿರೋ ಐವತ್ತು ಕೋಟಿ ಬಡವರ ಹಾಗೆ, ನಿಮ್ಮ ಹಾಗೆ, ನಾನೂ ಒಬ್ಬ, ನಾನೂ ನಿಮ್ಮ ಹಾಗೇ ಈಗ ಇದ್ದೇನೆ, ಮುಂದೆಯೂ ಇರ್ತೇನೆ, ನಾನಾಗಲಿ ನನ್ನನೆ-ಯವರಾಗಲಿ ಈ ಮಾತು ತಪ್ಪಿಸಿಕೊಳ್ಳೋದಿಲ್ಲ, ನಿಮ್ಮ ಸೇವೆಗೇ ಟೊಂಕ ಕಟ್ಟಿಕೊಂಡು ನಿಂತಿದ್ದೇನೆ' ಎಂದು ಊರೆಲ್ಲಾ ಡಂಗುರ ಹೊಡೆದು ವೋಟು ತೆಕ್ಕೊಂಡು ಮೆಂಬ್ರಾದ, ಒಂದು ಸಲ ಅಲ್ಲ, ಎರಡು ಸಲ ಅಲ್ಲ, ಮೂರು ಸಲ ಕಣಯ್ಯ, ಆ ಮೇಲೆ ಮಂತ್ರೀನೂ ಆದ. ಈಗ ನೋಡು. ಚುನಾವಣೆಗೆ ನಿಂತಾಗ ಕೈಯ್ಯಗಲ ಜಮೀನಿರಲಿಲ್ಲ. ತಲೆಯ ಮೇಲೆ ನೆರಳಿರಲಿಲ್ಲ. ದಿನದಲ್ಲಿ ಹಗಲು ಊಟ ಸಿಕ್ರೆ ರಾತ್ರಿಗೆ ಇಲ್ಲ, ಹೆಂಡತಿಗೆ ಎಂಟು ಮೊಳ ತೆಕ್ಕೋಡೋದಕ್ಕೆ ಯೋಗ್ಯತೆ ಇರಲಿಲ್ಲ. ಅಂದರೆ ಹಾಗೇ ಇರಬೇಕು ಎಂದು ಹೇಳೋಲ್ಲ.ನಾನ್ಮಾಡೋ ಹಾಗೆ ಪ್ರೈಮರಿ ಸ್ಕೂಲ್ ಮೇಷ್ಟ್ರಾಗ ಬಹುದಾಗಿತ್ತಲ್ಲ. ಅದೂ ದೇಶಸೇವೆ ಅಲ್ಲವೇ? ಮಕ್ಕಳಿಗೆ ಓದು ಬರಹ ಕಲಿಸೋದು? ನಿಜ ಆಗಬಹುದಾಗಿತ್ತು. ಆದರೆ ಅದು ಖಾಲಿ ದೇಶಸೇವೆ. ಕರಿಗಡಬು ಕಜ್ಜಾಯ ಸಿಗದ ಖಾಲಿ ದೇಶಸೇವೆ ಎನ್ನಿ. ಈಗ ನೋಡು. ಒಂದು ಟರ್ಮು ಮಿನಿಸ್ಟರ್ ಆದ- ತನ್ನ ಹೆಸರಿನಲ್ಲಿ

ಕಾವೇರಿ ಕಾಲ್ವೆ ಕೆಳಗೆ ಹತ್ತೆಕ್ರೆ ಗದ್ದೆ ಈ ಊರಿನಲ್ಲಿ ಮೂರುಪ್ಪರಿಗೆ ಮನೆ, ಎರಡನೆ ಟರ್ಮ್ ಮಿನಿಸ್ಟರ್ ಆದ— ಹೆಂಡತಿ ಮಕ್ಕಳ ಹೆಸರಿನಲ್ಲಿ ಗದ್ದೆ, ಮನೆ, ಮೂರನೆಯ ಟರ್ಮ್ ಮಿನಿಸ್ಟರ್ ಆದ–ವಿಲಾಯತಿಯಿಂದ ಬರೋ ಐವತ್ತಡಿ ಉದ್ದದ 'ಮರಿಸಿದ್ದಿ' ಕಾರು ಬಂತು ಮನೆಗೆ. ಈಗ ಹೋಗಿ ನೋಡ್ತೀನಿ, ಆ ದಿನ, ಅವನ ಮನೆಗೆ ಹೋಗಿದ್ದಾಗ ಅದೇನೋ ಟೇಬಲ್ ಊಟ ಪರಂಗಿಯವರ ಹಾಗೆ, ಊಟಕ್ಕೆಲ್ಲಾ ಅದೇನೋ ಟೇಬಲ್ ಸಿಲ್ವರ್ ಅಂತೆ ಅದು. ದಿನಾ ಹಲ್ಲು ತೊಳೆಯೋಕ್ಮುಂಚೆ ಹಾಸಿಗೆ ಕಾಫಿಯಂತೆ, ಆ ಮೇಲೆ ಬೆಳಿಗ್ಗೆ ಬ್ರೇಕ್ ಫಾಸ್ಟಂತೆ, ಆ ಮೇಲೆ ಊಟವಂತೆ, ಆ ಮೇಲೆ ಚಹಾದ ಜೊತೇಲಿ ಸ್ವಲ್ಪ ಅದು ಇದು, ರಾತ್ರಿ ಊಟ, ಮಲಗೋವಾಗ ಮೊಳದೆತ್ತರ ಲೋಟಾ ಬಾದಾಮಿ ಹಾಲು. ದಿನಾಲು ಮೂರು ದೊಡ್ಡೂಟ ಮೂರು ಚಿಕ್ಕೂಟ. ಹೆಸರು ಮಾತ್ರ ಬೇರೆ ಬೇರೆ. ಊಟಕ್ಕೆ ನನ್ನೂ ಕರಿಸಿ ತಾನೂ ಕೂತ್ಕೊಂಡ ಇವ, ಅವು ಯಾರೋ ಮೂರು ನಾಲ್ಕು ಜನ ಲಿಪ್ಸ್ಟಿಕ್ ಹಾಕಿದ್ದ ಫಿಲಂ ಸ್ಟಾರ್‌ಗಳು ಬಂದೇ ಬಿಟ್ರು ಒಳಗಿನಿಂದ. ಅವರ್ಬರೋಕ್ಮುಂಚೆಯೇ ಪರಂಗಿ ಸೆಂಟಿನ ವಾಸನೆ ಹೊಡಕೊಂಡು ಬಂತು, ಆಗಂದ್ಕೊಂಡೆ ಯಾರೋ ಪರಂಗೀಯವರೂ ಊಟಕ್ಕೆ ಬರ್ತಿದಾರೋ ಏನೋ ಅಂತ. ಮುಂದಿರೋ ಆಕೆ ನನ್ಹತ್ತಿರಾನೇ ಬಂದು ನನ್ನೋಡ್ತ ಮೂವತ್ತೆರಡು ಹಲ್ಲೂ ಕಿರಿಕೊಂಡು ನಗ್ತಾ, 'ಏನು ಗುಂಡಣ್ಣೋರೆ ಮರ್ತೇಬಿಟ್ರಾ' ಎಂದು ನನ್ಮಾತಾಡಿಸ್ದಾಗ ನನಗೆ ತಲೇ ಚಕ್ಕರಾಗಿಬಿಟ್ಟು. ನಾನು ಮಿನಿಸ್ಟರ್ ಕಡೆ ನೋಡಿದಾಗ ಆತ, 'ಏನು ಗುಂಡಣ್ಣಾ, ನನ್ನಾಕೆ ಗೌರೀನ ಮರ್ತೇಬಿಟ್ಯಾ, ಏನಿನ್ನೂ, ಐವತ್ತಕ್ಕೇ ಇಷ್ಟು ಮರವೇ?' ಎಂದಾಗ ನಾನು ಆಕೆ ಕಡೆ ತಿರುಗಿ, 'ಇಲ್ಲಮ್ಮ,

ಗೌರೀನ ಮರೆಯೋದುಂಟೇ, ಆದರೆ ಮಿನಿಸ್ಟರ್ ನೋಡೋಕೆ ಯಾರೋ ಫಿಲಂಸ್ಟಾರ್‌ಗಳು ಬಂದಿರಬೇಕು ಮೊದಲು ಭಾವಿಸಿದೆ ಎಂದುಕೊಂಡೆ ತಾಯಿ' ಎಂದು ಹೇಗೋ ಜಾರಿಕೊಂಡು ಬಂದೇ ಅನ್ನಿ, ಆಕೆಗೂ ಬಹಳ ಸಂತೋಷ ಆಯಿತು-ಜೊತೇಲಿ, ತನ್ನನ್ನೂ ತನ್ನ ಮಕ್ಕಳನ್ನೂ ಫಿಲಂ ಸ್ಟಾರ್‌ಮಾಡಿದ್ದಕ್ಕೆ. ಇನ್ನೂ ಎಷ್ಟೋ ಹೇಳಬಲ್ಲೆ ಈತನ ವಿಚಾರ. ಮಿನಿಸ್ಟರ್ ಆಗೋಕೆ ಮುಂಚೆ, ಮಿನಿಸ್ಟರ್ ಆದ ಮೇಲೆ ನಾವವರ ಮನೇಲಿ ಒಂದೆರಡು ದಿನ ಗೆಸ್ಟಾಗಿದ್ದಾಗ ನೋಡಿದ್ದು. ಆದರೆ ಅದೆಲ್ಲಾ ಈಗ ಹೇಳೋಕೆ ಟೈಮಿಲ್ಲ, ಬೇಕಾದ್ರೆ ದಿನವೆಲ್ಲ ಹೇಳ್ತೀನಿ" ಇತ್ಯಾದಿ.

ಆದರೆ ನಾವು ಮಾತ್ರ ನಾಥ ಸಭೆಯ ವಾದ ವಿವಾದಗಳನ್ನು ಈಗಿನ ಓದುಗರ ಮುಂದಿಡುವಾಗ ಈ ಎರಡು ಮಾದರಿ ಭಾಷಾ ವೈಪರೀತ್ಯಗಳಿಗೂ ಎಡೆಗೊಡದೆ ಮಧ್ಯದ ದಾರಿಯನ್ನು ಹಿಡಿಯುತ್ತೇವೆ.

ವಿಸ್ತಾರವಾದ ಸಭಾಂಗಣ. ಎದುರಿಗೆ ಸ್ವಲ್ಪ ಎತ್ತರದ ಆಸನದಲ್ಲಿ ಸಭಾಧ್ಯಕ್ಷರು ಕುಳಿತಿದ್ದಾರೆ. ಅವರ ಎದುರಿನಲ್ಲೇ, ಅವರಿಗಿಂತ ಸ್ವಲ್ಪ ಕಡಿಮೆ ಎತ್ತರದ ಆಸನಗಳಲ್ಲಿ ಒಂದೊಂದು ಕಡೆ ಐದು ಮಂತ್ರಿಗಳು ಒಟ್ಟು ಹತ್ತು ಜನ ಕುಳಿತಿದ್ದಾರೆ. ಇನ್ನುಳಿದ ತೊಂಭತ್ತು ಆಸನಗಳು ಮಂತ್ರಿಗಳ ಆಸನಗಳ ಎದುರಿಗೆ ಅರ್ಧ ಚಂದ್ರಾಕಾರದಲ್ಲಿ ಜೋಡಿಸಿದೆ. ಪ್ರತಿ ಸದಸ್ಯಾಸನದ ಹಿಂದೆಯೂ ನಾಲ್ಕು ಜನ ಕೂಡುವಂತಹ ಸಹ ಸದಸ್ಯಾಸನ ಇದೆ. ಸದಸ್ಯಾಸನಗಳೆಲ್ಲ ಎಲ್ಲೋ ಎಂಟು ಹತ್ತು ಬಿಟ್ಟು ಖಾಲಿ, ಆದರೆ ಸಹಾಯಕ ಸದಸ್ಯಾಸನಗಳಲ್ಲಿ ಯಾರಾದರೂ ಒಬ್ಬರಿದ್ದೇ ಇರುತ್ತಾರೆ. ಸಭಾಂಗಣದ ಮಧ್ಯಭಾಗದಲ್ಲಿ ಸಾಧಾರಣ ಮಣೆಗಳ ಮೇಲೆ ನಾಥ ಸಭಾಸೇವೆಯಲ್ಲಿರುವ ಸುಮಾರು ಇಪ್ಪತ್ತು ಇಪ್ಪತ್ತೆರಡು ಗ್ರಂಥ ಕಂಠಪಾಠಿಗಳು ತಮಗೆ ಬರಬಹುದಾದ ಕರೆಯನ್ನೇ ಕಾದು ಕುಳಿತಿದ್ದಾರೆ. ಈ ದಿನ ಚರ್ಚೆಯ ವಿಷಯ ನಾಥ ಜನರ ನ್ಯಾಯವಾದ ದೈನಂದಿನ ಮಜೂರಿ ದರದ ನಿಷ್ಕರ್ಷೆ.

ಒಬ್ಬ ಮಂತ್ರಿವರ್ಯರು ತಾವು ಕುಳಿತಲ್ಲೇ ತಮ್ಮ ಕೈ ಮೇಲೆತ್ತಿ ತಾವು ಮಾತಾಡಲು ಇಷ್ಟಪಡುವುದನ್ನು ಸೂಚಿಸಿದರು.

"ಮಾನ್ಯ ಸದಸ್ಯರಿಗೆ ಜ್ಞಾಪಕವಿರಬಹುದು; ಈಗ ನೂರು ವರ್ಷಗಳ ಹಿಂದೆ ತಾನೆ ವ್ಯವಸಾಯಿಯ ಸೇವಾ ಕಾರ್ಯಗಳಲ್ಲಿ ನಿರತರಾಗುವ ನಾಥ ಜನರ ದೈನಂದಿನ ವೇತನವನ್ನು ಈ ಸಭೆ ನಿರ್ಧರಿಸಿದ ಮೇಲೆ ದ್ವೀಪದಲ್ಲೆಲ್ಲಾ ಜಾರಿಗೆ ಬರುವಂತೆ ಡಂಗುರ ಹೊಡಿಸಿ ಸಾರಿದ್ದೆವು. ಅದರಂತೆ ಗಂಡು ನಾಥನಿಗೆ ದಿನಕ್ಕೆ ೧೦ ತಾಮ್ರದ ವರಹಗಳು, ಒಂದು ಮಾನ ಅಕ್ಕಿ, ಹೆಣ್ಣು ನಾಥಳಿಗೆ ೬ ತಾಮ್ರ ವರಹಗಳು ಒಂದು ಮಾನ ಅಕ್ಕಿ. ಇದು ಸಾಲದು, ತ್ರಿಗುಣಿಸ ಬೇಕು ಎಂದು ನಾಥ ಜನಗಳು ಅಲ್ಲಲ್ಲೇ ಪಿಸುಗುಟ್ಟುತ್ತಿದ್ದಾರಂತೆ. ಒಂದೆರಡು ಕಡೆ ಫಸಲು ಕಟಾವಿಗೆ ಬಂದಾಗ ಕೆಲಸಕ್ಕೆ ಬರದೆ ಹಿಂದೆ ನಿಂತು ಬಿಟ್ಟರಂತೆ. ಇದರಿಂದ, ಫಸಲೂ ಹಾಳಾಯಿತು. ಅವರಿಗೆ ವೇತನವೂ ಸಿಗಲಿಲ್ಲ, ಹೀಗೆ ಸರ್ವತ್ರ ನಷ್ಟವಾಯಿತು."

"ಆಗ ವಿಧಿಸಿದ ವೇತನ ನ್ಯಾಯವಾಗಿತ್ತೊ? ಒಬ್ಬ ನಾಥನ ಒಂದು ದಿನದ ಕೆಲಸಕ್ಕೆ ಇಷ್ಟೇ ವೇತನ ಸಿಗಬೇಕು ಎನ್ನುವುದಕ್ಕೆ ಎಲ್ಲಾದರೂ, ಧರ್ಮಶಾಸ್ತ್ರದಲ್ಲಿ ನಿರ್ಧಾರವಾಗಿದೆಯೇ ?" ಎನ್ನುತ್ತಾ ಒಬ್ಬ ಸದಸ್ಯರು ಗ್ರಂಥ ಕಂಠಪಾಠಿಗಳ ಕಡೆ ತಿರುಗಿ ನೋಡಿದರು.

ಗ್ರಂಥ ಕಂಠಪಾಠಿಗಳಲ್ಲೊಬ್ಬರು ಕೈ ಮೇಲಕ್ಕೆತ್ತಿ ತಾವು ಇದಕ್ಕೆ ಉತ್ತರ ಕೊಡುವುದಾಗಿ ಸೂಚಿಸಿದರು.

"ನಾಥ ದ್ವೀಪ ವ್ಯವಸಾಯ ದೀಪಿಕೆಯಲ್ಲಿ ಈ ವಿಷಯದಲ್ಲಿ ಹೀಗೆ ಹೇಳಿದೆ: 'ಒಬ್ಬ ನಾಥ ಬೆಳಿಗ್ಗೆಯಿಂದ ಸಂಜೆಯವರೆಗೂ ಮಾಡುವ ಕೆಲಸದಿಂದ ಅವನ ಸಂಸಾರಕ್ಕೆ ಎರಡು ದಿನಕ್ಕೆ ಸಾಕಾಗುವಷ್ಟು ಅನ್ನಾಹಾರ ದೊರಕುವಂತೆ ವೇತನ ನಿಗದಿ ಮಾಡಬೇಕು."

"ಸಂಸಾರ ಎಂದರೆ ಯಾರ್‍ಯಾರು ?"

"'ನಾಥ ದ್ವೀಪ ಸಮಾಜ ಕೌಮುದಿ'ಯಲ್ಲಿ ಸಂಸಾರ ಎಂದರೆ ತಾನು, ತನ್ನ ಹೆಂಡತಿ, ವೃದ್ಧ ಮಾತಾ ಪಿತೃಗಳು, ಹದಿನೆಂಟು ದಾಟದ

ಮೂರು ಮಕ್ಕಳು ಎಂದು ನಮೂದಿಸಿದೆ."

"ಇಷ್ಟು ಜನಕ್ಕೂ ಸೇರಿ ಎರಡು ದಿನದ ಊಟಕ್ಕೆ ಆ ವೇತನದ ದರ ನಿಗದಿಯಾದಾಗ ಎಷ್ಟು ಖರ್ಚಾಗುತ್ತಿತ್ತು? ಯಾರಿಗಾದರೂ ಜ್ಞಾಪಕವಿದೆಯೇ?"

"ಇಪ್ಪತ್ತು ತಾಮ್ರ ವರಹಗಳು", "ಹದಿನೈದು ತಾಮ್ರ ವರಹಗಳು ಮತ್ತು ಐದು ಮಾನ ಅಕ್ಕಿ", "ಇಪ್ಪತ್ತೈದು ತಾಮ್ರ ವರಹಗಳು ಮತ್ತು ಐದು ಮಾನ ಅಕ್ಕಿ", "ಇಪ್ಪತ್ತೈದು ತಾಮ್ರ ವರಹಗಳು" ಎಂದು ಮುಂತಾಗಿ ಅನೇಕ ಸದಸ್ಯರು ಅಭಿಪ್ರಾಯಪಟ್ಟರು.

ನಾಥ ವರ್ಗದಿಂದಲೇ ಬಂದಿದ್ದ ಸದಸ್ಯರೊಬ್ಬರು ಕೈಯೆತ್ತಿ ಸೂಚಿಸಿದರು.

"ನೀವೇ ನೋಡಿ. ಆಗ ವಿಧಿಸುವಾಗಲೇ ನ್ಯಾಯವಾಗಿ ವಿಧಿಸಲಿಲ್ಲ. ಹದಿನೈದು ತಾಮ್ರ ವರಹಗಳು ಮತ್ತು ಐದು ಮಾನ ಅಕ್ಕಿಗೆ ಬದಲಾಗಿ ಹತ್ತು ವರಹಗಳು ಒಂದು ಮಾನ ಅಕ್ಕಿ ವಿಧಿಸಿ ಕೊಡುತ್ತಾ ಬಂದಿರಿ. ಇದು ಅನ್ಯಾಯವಲ್ಲವೇ? ಮನೆಯಲ್ಲಿ ಮಕ್ಕಳನ್ನೂ ವೃದ್ಧ ಮಾತಾಪಿತೃಗಳನ್ನೂ ನೋಡಿಕೊಂಡು ಎಲ್ಲರಿಗೂ ಹೊತ್ತು ಹೊತ್ತಿಗೆ ಅಡಿಗೆ ಮಾಡಿ ಹಾಕಬೇಕಾಗಿದ್ದ ನಾಥ ಸಂಸಾರದ ಹೊಟ್ಟೆ ಪಾಡಿಗೆ ಈಗ ಗಂಡನ ಹಿಂದೆ ಹೆಣ್ಣು ತಾನೂ ಬೆಳಗಿನಿಂದ ಸಂಜೆಯವರೆಗೂ ದುಡಿಯಬೇಕಾಯಿತು. ಇಬ್ಬರ ವೇತನ ಸೇರಿಸಿದರೂ ಸಾಲದ ಹಾಗೆ ಆಗುತ್ತಿತ್ತು. ಈಗಲಾದರೂ ಅವರು ಕೇಳುವ ವೇತನ ನ್ಯಾಯವೆಂದು ಒಪ್ಪೋಣ".

ದ್ವೀಪದ ಆರ್ಥಿಕ ವಿಷಯಗಳಲ್ಲಿ ಬಹಳ ಅನುಭವವಿದ್ದ ಸದಸ್ಯರೊಬ್ಬರು ಈಗ ಮಾತಾಡಲು ಕೈಯೆತ್ತಿದರು.

"ಈ ಸಂದರ್ಭದಲ್ಲಿ ದ್ವೀಪದ ಆರ್ಥಿಕ ಸ್ಥಿತಿಯನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ವ್ಯವಸಾಯ ಜಮೀನಿನ ಕೊಂಡ ಬೆಲೆ, ಉತ್ಪನ್ನದಲ್ಲಿ ವಾರ್ಷಿಕ ವ್ಯವಸಾಯ ಖರ್ಚು, ಜಾತಾ ಹುಟ್ಟುವಳಿ ಇವೆಲ್ಲ ಸೇರಿ ವ್ಯಾವಸಾಯಿಕ ಸಹಾಯಕ ಸಹಾಯ ಜವರ ವೇತನವನ್ನು ನಿಗದಿ ಮಾಡುತ್ತದೆ. ಆದ್ದರಿಂದ ಈ ಪ್ರಶ್ನೆಯನ್ನು ಈಗ ನಿರ್ಧರಿಸುವುದು ಬೇಡ. ನಾವು ನಿರ್ಧರಿಸಿದ ವೇತನವನ್ನು ನೆಲದ ಒಡೆಯರು ನಮ್ಮಲ್ಲಿ ಕೆಲಸಕ್ಕೆ ಬರುವ ನಾಥ ಜನರಿಗೆ ಕೊಡಬೇಕೆಂಬ ಸಲಹೆ ಕೊಡಬಹುದೇ ವಿನಾ ಅದನ್ನು ಕಡ್ಡಾಯ ಮಾಡಲು ನಮಗೆ ಅಧಿಕಾರವಿಲ್ಲ. ಈಗ ಸ್ವಲ್ಪ ನಿಧಾನ ಮಾಡೋಣ."

"ಸ್ವಲ್ಪ ನಿಧಾನ ಮಾಡೋಣ, ಈಗ ಬೇಡ, ನೋಡೋಣ ಎಂದೇ ಕಾಲ ಕಳೆದುಹೋಗುತ್ತಲೇ ಇದೆ. ಆದರೆ ಅಯ್ಯೋ ಪಾಪ, ಬಡ ನಾಥ ವರ್ಗದ ವೇತನದಾರರು ಹಸಿವಿನಿಂದ ನರಳುತ್ತಲೇ ಇದ್ದಾರೆ."

"ಇದ್ದಾರೆ, ನಿಜ. ಈಗೇಕೆ, ಈಗ ನೂರು ವರ್ಷಗಳಿಂದಲೂ ನರಳುತ್ತಿದ್ದಾರೆ. ನೀವು ಈ ಸಭೆಗೆ ಮೊದಲು ಈಗ ಹದಿನೈದು ವರ್ಷಗಳ ಹಿಂದೆ ಚುನಾಯಿತರಾಗಿ ಮಂತ್ರಿಪದವಿಗೆ ಬಂದ ಮೇಲೆಯೂ ನರಳುತ್ತಿದ್ದಾರೆ. ನೀವೇ ಅಲ್ಲವೆ ಹಿಂದೆ ಎರಡು ಮೂರು ಸಲ ಈ ಪ್ರಶ್ನೆ ಬಂದಾಗ ಮುಂದೆ ನಿಧಾನವಾಗಿ ಕೂಲಂಕಷವಾಗಿ ವಿಚಾರ ಮಾಡೋಣ ಎಂದದ್ದು?"

ಇಂತಹ ಒಳ್ಳೆಯ ಸಂದರ್ಭ ದೊರಕಿದ್ದು ನೋಡಿ ಮತ್ತೊಬ್ಬ ಸದಸ್ಯರು ನಾಥ ವರ್ಗದ ಮಾಜಿ ಮಂತ್ರಿ ಈಗ ಖಾಲಿ ಸದಸ್ಯರಾಗಿದ್ದ ಶ್ರೀಯುತರ ಮೇಲೆ ತಮಗೆ ಇದ್ದ ಸೇಡು ತೀರಿಸಿಕೊಂಡರು.

"ಹೌದು, ಇವರೇ ಹಾಗೆ ಅಂದಿದ್ದು. ಈ ಮಾನ್ಯ ಸದಸ್ಯರು ಒಂದಲ್ಲ ಎರಡಲ್ಲ ಮೂರು ಸಲ ಮಂತ್ರಿಗಳಾಗಿದ್ದರು, ಆದರೂ ತಮ್ಮ ಮತದಾರರ ಪರ ಈಗ ತೋರಿಸುವ ಉತ್ಸುಕತೆ ಆಗ ತೋರಿಸಲಿಲ್ಲ. ಎಲ್ಲರಿಗೂ ಜ್ಞಾಪಕವಿದೆ. ಮಾನ್ಯ ಸದಸ್ಯರು ಶ್ರೀ ನಾಥಪುರ ಕ್ಷೇತ್ರದಿಂದ ಮೊದಲ ಸಲ ಪ್ರಜಾಪ್ರಭುವಿನ ಸೇವೆಗೆ ಅಭ್ಯರ್ಥಿಗಳಾಗಿ ನಿಂತಾಗ ನಾಥ ಬಾಂಧವರನ್ನು ಪುಳಕಿತಗೊಳಿಸುವಂತೆ ಮಾಡಿದ ಅಮೋಘವಾದ ಭಾಷಣ ಜ್ಞಾಪಕವಿದೆ: 'ನಾನೂ ನಿಮ್ಮ ಹಾಗೆ ಕಡು ದರಿದ್ರ, ಉಳಲು ನೆಲವಿಲ್ಲ, ಇರಲು ಮನೆಯಿಲ್ಲ, ಒಪ್ಪತ್ತಿಗಿದ್ದರೆ ಇನ್ನೊಪ್ಪತ್ತಿಗೆ ಉಪವಾಸ. ಹಿಂದಿನ ವರ್ಷಕ್ಕೊಂದು

ಹತ್ತು ಮೊಳದ ಸೀರೆ ಕೊಂಡುಕೊಡಲಾರೆ. ಹೀಗೆ ನಿಮ್ಮ ಹಾಗೆಯೇ ನಾನೂ ಒಬ್ಬ ಕಡು ದರಿದ್ರ. ಹಾಗೆಯೇ ಉಳಿದುಕೊಂಡು ನಿಮ್ಮ ಸದಸ್ಯನಾಗಿ ಸೇವೆ ಸಲ್ಲಿಸಿ, ನಿಮ್ಮ ಸ್ಥಿತಿ ಉತ್ತಮವಾದ ಮೇಲೆ ತಾನೇ ನಾನೂ ನಿಮ್ಮೊಡನೆ ಅಭಿವೃದ್ಧಿಗೆ ತರುತ್ತೇನೆ' ಎಂದು ಮುಂತಾಗಿ ಶ್ರೀನಾಥಪುರದಲ್ಲೂ ಅದಕ್ಕೆ ಸೇರಿದ ನಾಲ್ಕು ಗ್ರಾಮಗಳಲ್ಲೂ ಮನೆ ಮನೆಗೂ ಹೋಗಿ ತಮ್ಮ ನಾಥ ವರ್ಗದ ಜನರನ್ನು ಬೇಡಿ ಮತ ಗಳಿಸಿ ಸದಸ್ಯರಾಗಿ ಮಂತ್ರಿವರ್ಯರೂ ಆಗಿ ಬಂದರು. ಆ ಮೇಲೇನಾಯಿತು ಎಲ್ಲರಿಗೂ ಗೊತ್ತು. ಈಗ ಅವರ ಹೆಸರಿನಲ್ಲಿ ಸಾವಿರ ಖಂಡುಗ ಬತ್ತ ಬರುವ ಜಮೀನು, ಅವರ ಮಕ್ಕಳು ಮೊಮ್ಮಕ್ಕಳ ಹೆಸರಿನಲ್ಲಿ ಬೇರೆ. ಆ ಜಮೀನುಗಳಲ್ಲಿ ಕೆಲಸ ಸಲ್ಲಿಸುವ ನಾಥ ವರ್ಗದ ವೇತನದಾರರಿಗೆ ಇವರು ಕೊಡುವ ವೇತನ ಮಿಕ್ಕವರು ಕೊಡುವದಕ್ಕಿಂತ ಬಿಡಿ ತಾಮ್ರ ವರಹವೂ ಜಾಸ್ತಿ ಇಲ್ಲ. ಈ ಮಹಾನಗರದಲ್ಲಿ ಮಾನ್ಯ ಸದಸ್ಯರು ಹೊನ್ನಿಗರ ಕುಬೇರ ನಗರ ಬಡಾವಣೆಯಲ್ಲಿಯೇ ತಮ್ಮ ಮಹಲು ಕಟ್ಟಿಸಿದ್ದಾರೆ. ಅರಬಾಶ್ವಗಳು ಎಳೆಯುವ ಬೆಳ್ಳಿ ತಗಡು ಹೊಡೆದ ರಥ ಇವರಿಗೆ ಯಾರು ಕೊಟ್ಟರು? ಏತಕ್ಕೆ ಕೊಟ್ಟರು? ಅವರಿಗೆ ಮತ ಕೊಟ್ಟ ದರಿದ್ರ ನಾಥ ಜನರು ಇವರು ಮಾಡಿದ ಸೇವೆಗೆ ಕೃತಜ್ಞತೆ ತೋರಿಸಲು ಚಂದಾ ಎತ್ತಿ ಕೊಟ್ಟರೋ? ಇವರ ಮನೆಯಲ್ಲಿ ಈಗ ಹೋಗಿ ನೋಡಿ, ಕೈ ಕಾಲು ತೊಳೆಯಲು ಬೆಳ್ಳಿ ಪಾತ್ರೆಗಳು, ಊಟಕ್ಕೆ ಚಿನ್ನದ ತಟ್ಟೆ, ಅವರ ಸ್ತ್ರೀಯರು ಬಂದರೆ ಗಂಧರ್ವ ಸ್ತ್ರೀಯರು ಬಂದಂತೆ ತೋರುತ್ತದೆ, ಗಾಂಧಾರದಿಂದ ತಂದ ಅವರ ಸುಗಂಧಗಳೇನು, ಕಾಂಭೋಜದಿಂದ ಬಂದ ಪೀತಾಂಬರಗಳೇನು, ಭರೂಚದಿಂದ ಬಂದ ರತ್ನಾಭರಣಗಳೇನು? ಹೀಗೆಲ್ಲಾ ಸಂಪತ್ತು ವೃದ್ಧಿಯಾಗುತ್ತಿರುವಾಗ

ಹಿಂದೆ ತಾವು ಬಡ ನಾಥ ಜನಗಳ ಮುಂದೆ ನಿಂತು ಮಾಡಿದ ಪ್ರತಿಜ್ಞೆಯು ಜ್ಞಾಪಕವೇನಾದರೂ ಬಂತೋ? ಅವರಿಗೆ ಮತ ಕೊಟ್ಟ ದರಿದ್ರ ನಾಥ ಜನರಿಗೆ ಎರಡನೆ ಊಟ ಇನ್ನೂ ಸಿಕ್ಕಿಲ್ಲ ಎಂದು ಈ ದಿನ ತಾನೆ ಜ್ಞಾಪಕಕ್ಕೆ ಬಂತೊ?"

"ಇದೆಲ್ಲಾ ವೈಯಕ್ತಿಕ ವಿಷಯಗಳು, ನೀವು ಇದನ್ನೆಲ್ಲಾ ಸಭೆಯಲ್ಲಿ ಎತ್ತಿ ಈ ಪೂಜ್ಯ ಸಭೆಯನ್ನು ಸಂತೇ ಪೇಟೆಯನ್ನಾಗಿ ಮಾಡುತ್ತಿದ್ದೀರಿ. ಸಭಾಧ್ಯಕ್ಷರೂ ಹೀಗೆ ಮಾತಾಡುತ್ತಿರುವ ಸದಸ್ಯರನ್ನು ಬಾಯಿ ಮುಚ್ಚುವ ಹಾಗೆ ಹೇಳುತ್ತಿಲ್ಲ. ನನ್ನ ಪ್ರತಿಭಟನೆ ತೋರಿಸುವುದಕ್ಕೆ ನಾನು ಸ್ವಲ್ಪ ಕಾಲ ಸಭಾತ್ಯಾಗ ಮಾಡುತ್ತೇನೆ" ಎಂದು ಕಾಲು ಬಡಿದುಕೊಂಡು ಸಪ್ಪಳ ಮಾಡುತ್ತಾ ಶ್ರೀನಾಥಪುರದ ಮಾನ್ಯ ಸದಸ್ಯರು ಸಭಾಂಗಣದ ಹೊರಗೆ ಬಂದುಬಿಟ್ಟರು.

ಒಬ್ಬರ ತಪ್ಪುಗಳನ್ನೂ ಅಕ್ರಮಗಳನ್ನೂ ಇನ್ನೊಬ್ಬರು ಹೊರಗೆಡಹಬಹುದೇ ವಿನಾ ಅವರ ಮಂತ್ರಿ ಪದವಿಗಾಗಲಿ ಸದಸ್ಯತ್ವಕ್ಕಾಗಲಿ ಸಂಚಕಾರ ಬರುವಷ್ಟು ಆಪಾದನೆಗಳನ್ನು ಮುಂದುವರಿಸಕೂಡದೆಂಬ ಪರಸ್ಪರ ಒಡಂಬಡಿಕೆ ನಾಥ ಸಭಾ ಸದಸ್ಯರಲ್ಲಿದ್ದುದರಿಂದ ಆಪಾದಕ ಸದಸ್ಯ ಮಹಾಶಯರು ಅಲ್ಲಿಗೇ ಮುಗಿಸಿದರು. ಕೆಲವಾರು ನಿಮಿಷಗಳ ನಂತರ ಆಪಾದಿತ ಸದಸ್ಯ ಮಹಾಶಯರೂ ಪುನಃ ಸಭಾಂಗಣವನ್ನು ಪ್ರವೇಶಿಸಿ ಸ್ವಸ್ಥಾನದಲ್ಲಿ ಕುಳಿತುಕೊಂಡರು.

ಈಗ ಮುನ್ನಿಗ ವರ್ಗಕ್ಕೆ ಸೇರಿದ್ದರೂ ತನ್ನ ವರ್ಗ ಬಾಂಧವರ ಸದಭಿಪ್ರಾಯವನ್ನು ಗಳಿಸಿದ್ದ ಮಹಾಶಯರೊಬ್ಬರು ಮಾತಾಡಲು ಉದ್ಯುಕ್ತರಾದರು. ಆ ತಕ್ಷಣವೇ ಅಲ್ಲಿದ್ದ ಅನೇಕರು ತಮ್ಮ ಬೇಜಾರನ್ನು ತಮ್ಮ ತಮ್ಮ ಮುಖಭಾವ ವೈಖರಿಯಿಂದ ವ್ಯಕ್ತಪಡಿಸುತ್ತಾ ಎದುರಿನ ಗೋಡೆಯನ್ನೇ ನೋಡುತ್ತಾ ಕುಳಿತರು. ಆದರೂ ಸದಸ್ಯ ಮಹಾಶಯರು ತಾವು ಹೇಳಬೇಕೆಂದಿದ್ದುದನ್ನು ಹೇಳಿಯೇ ಹೇಳಿದರು:

"ಸದಸ್ಯ ಮಹಾಶಯರೇ! ನಾನು ಹಿಂದೆ ಅನೇಕ ಸಲ ಈ ವಿಚಾರ ಪ್ರಸ್ತಾಪಿಸಿದ್ದೇನೆ. ಪಕ್ಷಪಾತ ದೃಷ್ಟಿಯನ್ನು ದೂರಮಾಡಿ ಸತ್ಯದ ಕಡೆ ಗಮನಿಸಿಬಿಟ್ಟು ನೋಡಿದರೆ ನಮ್ಮ ದ್ವೀಪದ ಆರ್ಥಿಕ ರಚನೆ ಸರಿಯಾಗಿಲ್ಲ. ಬೆವರು ಸುರಿಸಿ ಕೆಲಸ ಮಾಡುವ ನಾಥನಿಗೆ ದಿನಕ್ಕೆ ಹತ್ತೋ ಹದಿನೈದೋ ತಾಮ್ರ ವರಹಗಳು, ನೆರಳಿನಲ್ಲಿ ಸುಪ್ಪತ್ತಿಗೆಯ ಮೇಲೆ ಕುಳಿತು ಮಾತಿಗೆ ಮಾತು ಬೆಳೆಸುವ ನಮ್ಮ ಕೆಲಸಕ್ಕೆ ದಿನಕ್ಕೆ ಮುನ್ನೂರ ಮುವ್ವತ್ತು ತಾಮ್ರ ವರಹಗಳು, ಅಂದರೆ ಮೂರು ಬೆಳ್ಳಿ ವರಹಗಳು ಮತ್ತು ಮುವ್ವತ್ತು ತಾಮ್ರದ ವರಹಗಳು. ಹೀಗೆ ನಮ್ಮ ಎರಡು ಸಭೆಗಳ ಸದಸ್ಯರುಗಳು, ಸಹಾಯಕ ಸದಸ್ಯರುಗಳು, ದ್ವೀಪದ ಉನ್ನತ ಸೇವೆಗಳಲ್ಲಿರುವ ಇತರರು, ಹೀಗೆ ಸುಮಾರು ಎಂಟು ಸಹಸ್ರ ಜನರು ಒಟ್ಟು ಸೇರಿ ವರ್ಷಕ್ಕೆ ಲಕ್ಷಾಂತರ ಬೆಳ್ಳಿ ವರಹಗಳನ್ನು ಬೆವರು ಸುರಿಸದ ಸುಲಭ ಕೆಲಸಕ್ಕೆ ಪಡೆಯುತ್ತಿದ್ದೇವೆ. ಇದು ಸಾಲದೆಂದು ಹೊನ್ನಿಗರು ಬೇರೆ ದಳ್ಳಾಳಿ ವ್ಯಾಪಾರದಲ್ಲಿ ಒಬ್ಬೊಬ್ಬರೂ ದಿನ ಒಂದಕ್ಕೆ ನಮಗೂ ನೂರ್ಮಡಿಯಾಗಿ. ಅಂದರೆ ನೂರು ಚಿನ್ನದ ವರಹಗಳಿಗೆ ಕಡಿಮೆ ಇಲ್ಲದೆ ಸಂಪಾದಿಸುತ್ತಾರೆ. ಕುಳಿತಲ್ಲಿ ಕುಳಿತು ಅಗ್ಗದಲ್ಲಿ ಕೊಂಡು ತುಟ್ಟಿಯಲ್ಲಿ ಮಾರಿ ಮನೆಗೆ ಚಿನ್ನದ ಕಲಶ ಹಾಕಿಸಿಕೊಳ್ಳುತ್ತಾರೆ. ನಾವು ಈಗ ಇಂತಹ ಆದಾಯಗಳ ಮೇಲೆಲ್ಲ ನೂರಕ್ಕೆ ಐವತ್ತರಷ್ಟು ತೆರಿಗೆ ಹಾಕೋಣ. ಬಂದ ದುಡ್ಡಿನಲ್ಲಿ ನಾಥರಲ್ಲಿ ಮಕ್ಕಳಿಗೂ ವಯಸ್ಕರಿಗೂ ವಸನಾಶನ ಕೊಟ್ಟು ಅವರ ಬಡತನವನ್ನು ನೀಗಿಸೋಣ. ಜ್ಞಾಪಕವಿಡಿ, ಅವರು ನಾಥರು. ಈಗ ಹೆಸರಿಗೆ ಮಾತ್ರ ನಾಥರು. ನಾಳೆ ನಿಜವಾಗಿ ನಾಥರಾಗಬಹುದು."

ಇದನ್ನೆಲ್ಲಾ ಕೇಳುತ್ತಿದ್ದ ಮಿಕ್ಕ ಸದಸ್ಯರ ಔದಾಸೀನ್ಯ ನೋಡಿದರೆ ಈ ಸದಸ್ಯರ ಇಂತಹ ಸೂಚನೆಯನ್ನು ಎಷ್ಟೋ ಸಲ ಕೇಳಿ ಕೇಳಿ ಬೇಸರಗೊಂಡವರ ಹಾಗಿತ್ತು. ಆರ್ಥಿಕ ಪ್ರವೀಣರು ಸುಮ್ಮನೆ ಕುಳಿತಿರಲಾಗಲಿಲ್ಲ.

"ನಾವಿದನ್ನೆಲ್ಲ ಅನೇಕ ಸಲ ಚರ್ಚಿಸಿದ್ದೇವೆ. ಆಡಳಿತದ ವಿಷಯದಲ್ಲೂ, ಈ ಸಭೆಯ ಕಾರ್ಯಕಲಾಪಗಳಲ್ಲೂ, ಇತರ ಉನ್ನತ ಸೇವೆಗಳಲ್ಲೂ

ನಿರತರಾಗಿ ಕಣ್ಣಿನ ಮೇಲೆ ಕಣ್ಣಿಟ್ಟು ದ್ವೀಪ ಜನ ಹಿತವನ್ನೇ ಧ್ಯೇಯವಾಗಿಟ್ಟುಕೊಂಡು ಕಾರ್ಯ ನಿರತರಾಗಿರುವ ಈ ಜನಗಳ ವೇತನದ ಮೇಲೆ ಹೀಗೆ ತೆರಿಗೆ ಹಾಕಿ ಅವರ ಉತ್ಸಾಹ ಭಂಗವಾದರೆ ಕಾರ್ಯದಕ್ಷತೆಗೆ ಹಾನಿ ಬರುತ್ತದೆ. ಎಷ್ಟೋ ಜನ ನಾಥ ದ್ವೀಪದಲ್ಲಿ ಇನ್ನು ಮುಂದೆ ತಮಗೆ ಏಳಿಗೆ ಯಿಲ್ಲವೆಂದು ಸ್ವದೇಶವನ್ನು ವರ್ಜಿಸಿ ಭಾರತ ವರ್ಷಕ್ಕೆ ಹೋಗಬಹುದು. ಅಲ್ಲಿ ಕೌರವ ರಾಜ್ಯ ದಲ್ಲೂ ಸಿಂಹಳ ರಾಜ್ಯದಲ್ಲೂ ಇಂತಹ ಕಾರ್ಯ ನಿರತರಿಗೆ ವಿಶೇಷವಾದ ಬೇಡಿಕೆ ಇರುವುದಂತೆ. ಇನ್ನು ಹೊನ್ನಿಗರ ವಿಚಾರ ತೆಗೆದುಕೊಳ್ಳಿ. ಮಾತೆ ತ್ತಿದರೆ ಎಲ್ಲರಿಗೂ ಅವರ ಮೇಲೆ ಕಣ್ಣು. ಅವರು ಸಾಮಾನುಗಳನ್ನು ಒಟ್ಟಿನಲ್ಲಿ ಕೊಂಡು ಮಾರುವ ಕೆಲಸ ಒಂದು ತಿಂಗಳು ನಿಲ್ಲಿಸಲಿ, ಆಗ ದ್ವೀಪದ ಆರ್ಥಿಕ ಸ್ಥಿತಿ ಏನಾಗುತ್ತದೆ. ನೀವು ನೋಡುತ್ತೀರಿ. ಅವರು ತಾವು ಸಂಪಾದಿಸುವ ಲಾಭದಲ್ಲಿ ಸ್ವಲ್ಪ ಭಾಗವನ್ನು ತಮ್ಮ ವೈಭೋಗಕ್ಕಾಗಿ ಉಪಯೋಗಿ ಸಿಕೊಳ್ಳಬಹುದು. ಆದರೆ ಅದಕ್ಕೇಕೆ ನಾವು ಹೊಟ್ಟೆ ಕಿಚ್ಚುಪಡಬೇಕು ? ಅವರ ಮನೆಯ ಚಿನ್ನದ ಕಲಶಗಳನ್ನೂ ಅವರು ಕುಳಿತು ಓಡಾಡುವ ಚಿನ್ನದ ಸಾರೋಟುಗಳನ್ನೂ ನೋಡಿದರೆ ನಮ್ಮ ಕಣ್ಣಿಗೆ ಸೂಜಿ ಚುಚ್ಚಿದಂತಾಗುತ್ತದೆಯೇನು ? ಇಂತಹ ಅಸೂಯೆ ಮಾನಸ್ಥರಿಗೆ ಇರಕೂಡದು. ಇನ್ನೊಂದು ವಿಚಾರ ಜ್ಞಾಪಕವಿರಲಿ, ಈ ಹೊನ್ನಿಗರು ತಾನೆ ನಾವು ಪ್ರಜಾಪ್ರಭು ದೇವನ ಜಾತ್ರೆಯನ್ನು ವೈಭವದಿಂದ ಯಾವ ಲೋಪವೂ ಬರದಂತೆ ಐದು ವರ್ಷಕ್ಕೊಮ್ಮೆ ಕೊಂಡಾಡಲು ನಾವು ಕೇಳಿದಷ್ಟು ಕೊಡುತ್ತಿ ದ್ದಾರೆ? ಇವರ ಮೇಲೆ ತೆರಿಗೆ ಹಾಕಿ ಜಾತ್ರೆಗೆ ಅವರು ಒದಗಿಸುವ ಧನ ಸಹಾಯ ಕಳೆದು ಕೊಂಡರೆ ಪ್ರಜಾಪ್ರಭುದೇವನ ಜಾತ್ರೆ ಹೇಗೆ ನಡೆಯುತ್ತದೆ? ಇದು ನಿಂತು ದೇಶ ಅಲ್ಲೋಲವಾಗಿ ಪ್ರಜಾಪ್ರಭುವಿನ ಸ್ಥಳದಲ್ಲಿ ಯಾವುದಾದರೂ ಅಸುರ ಪ್ರಭು ಬಂದು ಕುಳಿತಲ್ಲಿ ನಮ್ಮ ನಿಮ್ಮ ಗತಿ ಏನು? ನಾಥರ ಗತಿ ಏನು? ಆದ್ದರಿಂದ ತೆರಿಗೆ ಮಾತನ್ನು ಇಲ್ಲಿಗೇ ಬಿಡೋಣ. ಬೇರೆ ಏನಾದರೂ ಮಾರ್ಗ ಯಾರಿಗಾ ದರೂ ತೋರಿದರೆ ವಿಚಾರ ಮಾಡೋಣ."

"ಹೀಗೆ ಸುಮ್ಮನೆ ಒಂದು ತೆರೆದ ಧೋರ ಣೆಯಿಂದ ಸಲ ಸಲವೂ ಈ ಸಮಸ್ಯೆಯನ್ನು ಈ ರೀತಿ ಒಂದು ಮೂಲೆಗೆ ಒತ್ತಿಡಬೇಡಿ. ನಾವು, ನಮ್ಮ ನಾಥ ದ್ವೀಪದ ಜನತೆ, ಸಂಸ್ಕೃತಿ, ಇದೆಲ್ಲಾ ಸದ್ಯಕ್ಕೆ ನಿದ್ರಿಸಿರುವ ಜ್ವಾಲಾಮುಖಿಯ ಮೇಲೆ ಕುಳಿತಂತಿದೆ ನಿಜ. ನಮ್ಮ ದ್ವೀಪದಲ್ಲಿ ನೆರೆ ಹೊರೆಯ ಕೆಲವು ದ್ವೀಪಗಳಲ್ಲಿರುವಂತೆ ಎಚ್ಚತ್ತ ಅಥವಾ ಸುಷುಪ್ತ ಭೂಗರ್ಭ ಜ್ವಾಲಾಮುಖಿಗಳಿಲ್ಲ. ಆದರೆ ಬೇರೊಂದು ರೂಪದ ಜ್ವಾಲಾಮುಖಿ ಇದೆ, ನೀವು ನೆನೆಸಿರಲಾರದ ಮತ್ತು ಅನು– ಭವಿಸಲಾರದ ರೂಪದಲ್ಲಿದೆ, ಇದೇ ಹಸಿದ ಜನಗಳ ಜಠರಾಗ್ನಿ. ಇದನ್ನು ನೀವು ಕಂಡಿಲ್ಲ. ಅದು ಒಮ್ಮೆಲೆ ಎಚ್ಚೆತ್ತರೆ ತನ್ನ ಸುತ್ತ ಮುತ್ತ ಇರುವುದನ್ನೆಲ್ಲ ದಹಿಸಿ ತಾನೂ ಭಸ್ಮ ವಾಗುತ್ತದೆ. ಎಚರಿಕೆ."

"ಎಲ್ಲಿಗೆಲ್ಲಿಗೆ ಇಲ್ಲದ ಸಲ್ಲದ ಹೋಲಿಕೆಗ ಳನ್ನು ತಂದು ಹೀಗೆ ಭಯಪಡಿಸುತ್ತಿದ್ದೀರಿ ? ನಮ್ಮ ನಾಥ ವರ್ಗಕ್ಕೆ ಸಹಸ್ರಾವಧಿ ವರ್ಷ ಗಳ ಹಿಂದಿನಿಂದ ಬಂದ ಸಂಸ್ಕೃತಿ ಇದೆ. ಅವರು ಸಹಿಷ್ಣುಗಳು, ರಕ್ತಪಾತದಲ್ಲಿ ನಂಬಿಕೆ ಇಲ್ಲ. ನಾವೇ ಇಲ್ಲದ ಸಲ್ಲದ ಅಭಿಪ್ರಾಯಗಳನ್ನು ಅವರ ಕಿವಿಯಲ್ಲಿ ಮಾಡದೆ ಇರಬೇಕು. ಹೇಗೋ ತಮ್ಮ ಪಾಡಿಗೆ ತಾವು ಇರುವ ಈ ಜನ– ಗಳನ್ನು ಕೆಣಕಿ ದ್ವೀಪದ ಶಾಂತಿಗೆ ಭಂಗ ತರ ಕೂಡದು. ಎಲ್ಲರ ಮೇಲೂ ತೆರಿಗೆಯಲ್ಲದೇ ಬೇರೆ ಉಪಾಯಗಳಿಲ್ಲವೇ?"

ಅರ್ಥಶಾಸ್ತ್ರ ವಿಶಾರದರು ಮಾತಾಡಲು ಅಪೇಕ್ಷಿಸಿದರು.

"ಏಕಿಲ್ಲ ? ನಮ್ಮ ಕಾರಿಗರಿಗೆ ಅದಕ್ಕೆ ಬೇಕಾಗುವ ಅನುಕೂಲತೆಗಳನ್ನು ಒದಗಿಸಿದರೆ ಅವರು ಈಗ ಬೆಳೆಯುತ್ತಿರುವ ಅಕ್ಕಿ, ಗೋಧಿ, ಎಣ್ಣೆ, ತುಪ್ಪ, ಹಣ್ಣು ಹಂಪಲು, ಏಲಕ್ಕಿ, ಮೆಣಸು, ಲವಂಗ, ಶುಂಠಿ ಮುಂತಾದ ಸಂಬಾರ ಪದಾರ್ಥಗಳೂ ಅಲ್ಲದೆ ಹತ್ತಿಬಟ್ಟೆ ಮತ್ತು ರೇಶ್ಮೆ ಬಟ್ಟೆ ನಾಲ್ಕು ಮಡಿಯಾಗಿ

ವೃದ್ಧಿ ಮಾಡಬಲ್ಲರು. ಇವುಗಳನ್ನು ವಿಶೇಷ-ವಾಗಿ ಬೇಡುವ ಸಿಂಹಳ, ಯವ, ಅರಬ, ಶ್ವೇತ ದ್ವೀಪಗಳಿಗೆ ಕಳುಹಿಸಿ ಅವರ ವರಹಗಳನ್ನು ಸಂಪಾದಿಸಿ ಅದನ್ನು ನಾಥರ ಏಳಿಗೆಗಾಗಿಯೇ ಉಪಯೋಗಿಸಬಹುದಲ್ಲವೆ!"

"ಅತ್ಯುತ್ತಮವಾದ ಸೂಚನೆ, ವಿದೇಶಗಳೊಡನೆ ವ್ಯಾಪಾರ ವೃದ್ಧಿಸುವುದರ ಮೂಲಕ ತಾನೆ ನಮ್ಮ ದ್ವೀಪದ ಆರ್ಥಿಕ ಮುಗ್ಗಟ್ಟು ಬಗೆಹರಿಯುತ್ತದೆ, ನಾಥ ಜನರ ಉದ್ಧಾರವಾಗುತ್ತದೆ!"

"ಸ್ವಲ್ಪ ತಡೆಯಿರಿ, ಅವಸರ ಪಡಬೇಡಿ. ಈಗಲೂ ಅವರಿಗೆ ಈ ಸಾಮಾನುಗಳನ್ನು ಮಾರುತ್ತಿದ್ದೀರಿ ಅಲ್ಲವೆ? ಈ ವ್ಯಾಪಾರದಿಂದ ನಿಮಗೆ ಲಭಿಸುವ ವಿದೇಶೀ ವರಹಗಳನ್ನು ಈಗ ಹೇಗೆ ಉಪಯೋಗಿಸುತ್ತಿದ್ದೀರಿ ನೀವೇ ಹೇಳಿ. ಅವರಿಂದ ಕೊಳ್ಳುವ ಸಾಮಾನುಗಳಿಗೇ ಕೊಡುತ್ತಿದ್ದೀರಿ. ಅವರು ನಮಗೆ ಮಾರುವ ಸಾಮಾನುಗಳ ಪಟ್ಟಿ ಕೊಡುತ್ತೇನೆ. ಸ್ವಲ್ಪ ಕೇಳಿ. ಶ್ವೇತ ದ್ವೀಪದಿಂದ ಹೊನ್ನಿಗ ಮುನ್ನಿಗ ಧನಿಕರು ಸವಾರಿ ಮಾಡಲು ಚಿನ್ನದ ಮತ್ತು ಬೆಳ್ಳಿಯ ರಥಗಳು, ಅವರ ಹೆಂಗಸರ ಸ್ವಾಭಾವಿಕ ಸೌಂದರ್ಯವನ್ನು ಕೆಡಿಸಿ ಥಳಥಳಿಸುವ

ಕೃತಕ ಸೌಂದರ್ಯವನ್ನು ಕೊಡುವ ವರ್ಣ, ಭಸ್ಮ ಲೇಪ, ತೈಲ ಸಾಮಗ್ರಿಗಳು, ಅರಬ ದ್ವೀಪದಿಂದ ತಮ್ಮ ರಥಗಳನ್ನೆಳೆಯಲು ಶ್ವೇತಾಶ್ವಗಳು, ಸಿಂಹಳದಿಂದ ಕೆಂಪು, ಗೋಮೇಧಿಕ, ಪುಷ್ಯರಾಗ ಮುಂತಾದ ವಜ್ರಾದಿಗಳು, ಯವದ್ವೀಪದಿಂದ ತಮ್ಮ ಪುರುಷತ್ವವನ್ನು ಹೆಚ್ಚಿಸಲು ಖಡ್ಗಮೃಗದ ಶೃಂಗ ಭಸ್ಮ ಇತ್ಯಾದಿ. ಇದಲ್ಲದೆ ಈ ಆಯಾತ-ನಿರ್ಯಾತ ವ್ಯಾಪಾರಕ್ಕೆ ತೊಡಗಿರುವ ಪೊನ್ನಿಗರಿಗೆ ಹೇರಳವಾದ ಲಾಭ ಸಿಕ್ಕಿ ಅವರ ಧನ್ಯ ಸಂಪತ್ತು ಇನ್ನಷ್ಟು ವೃದ್ಧಿಯಾಗಿ ಅವರ ಬೊಜ್ಜು ಇನ್ನಷ್ಟು ಬೆಳೆಯುತ್ತದೆ. ಇದರಲ್ಲಿ ಸ್ವಲ್ಪ ಭಾಗ ಮುನ್ನಿಗರಿಗೂ ಸಿಗುತ್ತದೆ. ಇದೇ ನಿಮ್ಮ ಆಯಾತ ನಿರ್ಯಾತದ ಫಲ ನಾಥ ಜನಸಮೂಹಕ್ಕೆ."

ತಮ್ಮ ವಾಗ್ಝರಿಯಿಂದ ಸ್ವಲ್ಪ ಮೇಲುಸಿರು ಬಂದ ಸದಸ್ಯರು ಕ್ಷಣಕಾಲ ಸಭಾಭವನದಲ್ಲಿ ಅಲ್ಲಿ ಇಲ್ಲಿ ಚದುರಿ ಕುಳಿತಿದ್ದ ಇತರ ಸದಸ್ಯರನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿ ತೋರು ಬೆರಳನ್ನು ಅವರ ಕಡೆ ತೋರಿಸುತ್ತಾ ಮಾತು ಮುಂದುವರಿಸಿದರು:

"ನೀವು, ಹಸಿವನ್ನು ಎಂದಿಗೂ ಕಾಣದ ನೀವು, ನಮ್ಮಲ್ಲೇ ಬೆಳೆಯುವ ಅಕ್ಕಿ, ಗೋಧಿ, ಬೇಳೆ ಇತರ ಧಾನ್ಯಾದಿಗಳನ್ನೂ ಹಣ್ಣುಕಾಯಿಗಳನ್ನೂ ಬಟ್ಟೆ ಬರೆಗಳನ್ನೂ ನಾಥ ಜನರಿಗೆ ಸುಲಭ ಬೆಲೆಗೆ ಒದಗಿಸದೆ ಅಥವಾ ಸರಿಯಾದ ವೇತನವನ್ನು ಕೊಟ್ಟು ಅವರು ಇವನ್ನು ಕೊಳ್ಳುವಂತೆ ಸಹಾಯ ಮಾಡದೆ ಈ ವಸ್ತುಗಳನ್ನೆಲ್ಲಾ ಇನ್ನೂ ಹೆಚ್ಚು ಹೆಚ್ಚಾಗಿ ವಿದೇಶಗಳಿಗೆ ಮಾರಿ ಅದರಿಂದ ದೊರೆತ ವಿದೇಶೀ ಮುದ್ರೆಗಳಿಂದ ನಾಥ ಜನೋದ್ಧಾರ ಮಾಡುತ್ತೇವೆ ಎನ್ನುತ್ತಿರಲ್ಲಾ? ಇಲ್ಲಾ ನೀವು ಏನೂ ತಿಳಿಯದ ಮೂರ್ಖರಾಗಿರಬೇಕು, ಇಲ್ಲವೇ ಅಕ್ಷಮ್ಯ ದಗಾಕೋರರಿರಬೇಕು." ತಾವು ಹೊದ್ದುಕೊಂಡಿದ್ದ ಧೋತರದ ಅಂಚಿನಿಂದ ಮುಖದ ಬೆವರನ್ನು ಒರೆಸಿಕೊಳ್ಳುತ್ತಾ ಮಾತಾಡಿ ದಣಿದ ಸದಸ್ಯರು ಮುಂದೆ ಏನೂ ಹೇಳದೆ ಒಳ ಮಾಳಿಗೆಯ ಚಿತ್ತಾರದ ಕೆಲಸವನ್ನು ನೋಡುವವರಂತೆ ತಲೆ ಮೇಲಕ್ಕೆ ಮಾಡಿ ಕುಳಿತುಬಿಟ್ಟರು.

"ಯಾರಯ್ಯಾ ಮೂರ್ಖ, ಯಾರಯ್ಯಾ ದಗಾಕೋರ? ನೀನಿರಬೇಕು," "ಇಲ್ಲ, ನಿನ್ನನ್ನು ಹೆತ್ತವರಿರಬೇಕು," "ಮುಟ್ಠಾಳ, ಆರ್ಥಿಕ ಪ್ರಶ್ನೆಗಳಲ್ಲಿ ಸ್ವಲ್ಪವೂ ತಿಳುವಳಿಕೆಯಿಲ್ಲದ ಅಜ್ಞಾನಿ, ದೇಶಕ್ಕೆ ಲಾಭವಾಗುವುದು ನಷ್ಟವಾಗುವುದು ಎಂದು ತಿಳಿಯದ ಮೂರ್ಖ" ಎಂದು ಮುಂತಾದ ಟೀಕೆಗಳಿಗೆ ಅವರು ಗಮನ ಕೊಡಲಿಲ್ಲ. ಪುನಃ ಮುಚ್ಚಿದ ಬಾಯಿ ಬಿಚ್ಚಲಿಲ್ಲ.

ಹೀಗೆ ಆಗಾಗ ಭಿನ್ನಾಭಿಪ್ರಾಯಗಳೂ ಬಿರುಸು ಮಾತುಗಳೂ ಉಂಟಾಗುತ್ತಿದ್ದರೂ ದ್ವೀಪದ ಎರಡು ಸಭೆಗಳೂ ತಾಳ್ಮೆಯಿಂದ ನೂರಾರು ವರ್ಷಗಳ ಕಾಲ ನಾಥ ಜನರ ಸೇವೆಯನ್ನೇ ತಮ್ಮ ಗುರಿಯನ್ನಾಗಿಟ್ಟುಕೊಂಡು ಪ್ರಜಾಪ್ರಭುದೇವ ತೋರಿಸಿದ್ದ ಮಾರ್ಗದಲ್ಲೇ ಮುಂದುವರಿಯುತ್ತಿದ್ದರೆಂದು ನಾಥ ಪೌರಾಣಿಕರು ಬರೆದಿದ್ದಾರೆ.

ನಾಥ ಪೌರಾಣಿಕರು ದ್ವೀಪವನ್ನು ಸಂದರ್ಶಿಸಿದ ಕಾಲದಲ್ಲೇ ನಡೆದ ಪ್ರಜಾಪ್ರಭುದೇವನ ಒಂದು ಪಂಚವರ್ಷೀಯ ಜಾತ್ರೆಯ ಮಹಾಸಮಾರಂಭವನ್ನು ಅವರು ಪೂರ್ಣವಾಗಿ ನೋಡಿಕೊಂಡು ಬಂದರಂತೆ.

ಈ ಮಹಾಜಾತ್ರೆ ಐದು ವರ್ಷಕ್ಕೊಮ್ಮೆ ಫಾಲ್ಗುನ ಶುದ್ಧ ನವಮಿ ದಿನ ಪ್ರಾರಂಭವಾಗಿ ಹುಣ್ಣಿಮೆ ದಿನ ಕೊನೆಗೊಳ್ಳುತ್ತಿತ್ತು. ಶ್ವೇತೀಯರ ಕಾಲದಲ್ಲಿ ಪ್ರಜಾಪ್ರಭುದೇವನ ಜಾತ್ರೆ ಮೊಟ್ಟ ಮೊದಲು ಆಚರಣೆಗೆ ಬಂತು. ಅವರು ಸ್ವದೇಶಕ್ಕೆ ಹೊರಟು ಬಂದ ಮೇಲೆ ಶ್ವೇತೀಯರಿಂದಲೇ ತರಬಿಯತ್ತಾದ ಮುನ್ನಿಗ ಮಹಾಶಯರುಗಳು ಜಾತ್ರೆಯನ್ನು ಬಿಡದೆ ಮುಂದುವರಿಸಿ, ಅದರ ವೈಭವವನ್ನು ಹೆಚ್ಚಿಸಿ, ದೈನಂದಿನ, ಮಾಸಿಕ, ವಾರ್ಷಿಕ ಪೂಜಾಕ್ರಮಗಳಲ್ಲಿ ಆಗಾಗ ಹೊಸ ಮಾರ್ಪಾಡುಗಳನ್ನು ತರುತ್ತಲೇ ಇದ್ದು ನಾಥ ಜನರು ತಮ್ಮ ಐಹಿಕ

ಕಷ್ಟ ಕಾರ್ಪಣ್ಯಗಳನ್ನು ದೇವರ ಜಾತ್ರೆ ಮತ್ತು ಪೂಜಾ ನಮನಗಳಲ್ಲಿ ಆದಷ್ಟು ಮರೆಯುವಂತೆ ಮಹಾಪ್ರಭುವರಲ್ಲಿ ಬಹಳ ಮಟ್ಟಿಗೆ ಯಶಸ್ವಿಗಳಾಗಿದ್ದರು. ದ್ವಾಪರ ಯುಗದ ಕೊನೆಕೊನೇ ದಿನಗಳಲ್ಲಂತೂ ನಾಥ ದ್ವೀಪದ ಪಂಚವಾರ್ಷಿಕ ಜಾತ್ರೆ ನೋಡಲು ಭೂಮಂಡಲದ ನಾನಾ ಮೂಲೆಗಳಲ್ಲಿದ್ದ ದೇಶಗಳ ರಾಜ ಮಹಾರಾಜರುಗಳೂ, ಜನಗಣಾಧ್ಯಕ್ಷರುಗಳೂ ಮಂತ್ರಿ ವರ್ಯರುಗಳೂ ರಾಜಕಾರಣಿಗಳೂ ಬಂದು ನೆರೆದು ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಂಡು ಬೆರಗಾಗುತ್ತಿದ್ದರು. ತಮ್ಮ ದೇಶಗಳಿಗೆ ಹಿಂದಿರುಗಿದ ಮೇಲೆ ಕೊಂಡಾಡುತ್ತಿದ್ದರು.

ನಾಥ ದ್ವೀಪದ ರಾಜಧಾನಿ ಮಹಾನಗರದಲ್ಲಿ ಗಣತಂತ್ರಾಧ್ಯಕ್ಷ ಭವನದ ಎದುರಿಗೆ ವಿಶಾಲವಾದ ಬಯಲಿನಲ್ಲಿ ಪಂಚವಾರ್ಷಿಕ ಜಾತ್ರೆಗೋಸ್ಕರ ತಳಿರು ತೋರಣಗಳಿಂದಲೂ ವಿವಿಧ ಬಣ್ಣಗಳ ಪತಾಕೆಗಳಿಂದಲೂ ಅಲಂಕೃತವಾದ ಸಾವಿರ ಕಂಬಗಳ ಮಂಟಪ ಏಳುತ್ತಿತ್ತು. ಮಂಟಪಕ್ಕೆ ಸೇರಿದಂತೆಯೇ ಸ್ವಲ್ಪ ಹಿಂದುಗಡೆ ಇಪ್ಪತ್ತು ಮೊಳ ಚಚ್ಚೌಕ ಗರ್ಭಗೃಹವೊಂದು ಪ್ರತ್ಯೇಕವಾಗಿರುತ್ತಿತ್ತು. ದ್ವೀಪದ ಶ್ರೇಷ್ಠ ಶಿಲ್ಪಿಗಳನ್ನು ಬರಮಾಡಿಸಿ ಪ್ರಜಾಪ್ರಭುದೇವನ ಕೃಷ್ಣ ಪ್ರತಿಮಾಮೂರ್ತಿಯನ್ನು ನಿರ್ಮಿಸಿ ಸಿಂಗರಿಸಿ ನವಮಿ ದಿನ ಶಾಸ್ತ್ರೋಕ್ತವಾಗಿ ಈ ಗರ್ಭಗೃಹದಲ್ಲಿ ಸ್ಥಾಪಿಸುತ್ತಿದ್ದರು.

ಮೂರ್ತಿ ಸುಮಾರು ಐದು ಮೊಳ ಎತ್ತರವಿದ್ದು ಎರಡು ಮೊಳ ಎತ್ತರದ ವೇದಿಕೆಯ ಮೇಲೆ ನಿಂತಿದ್ದರಿಂದ ದೇವರ ಬೃಹದ್ರೂಪ ನೋಡುತ್ತಾ ಎದುರಿನಲ್ಲಿ ನಿಂತವರಿಗೆ ತಮ್ಮ ಅಲ್ಪ ರೂಪ ಬಡತನವೇ ವ್ಯಕ್ತವಾಗುತ್ತಿತ್ತು. ಪ್ರಜಾಪ್ರಭು ಗಟ್ಟಿಮುಟ್ಟಾದ ಆಳು. ಆತನ ಕಾಲು ಬರಿಗಾಲು ಮೊಣಕಾಲಿನ ಕೆಳಗೆ ಬರದಂತೆ ಇರುವ ನಾಲ್ಕು ಮೊಳದ ಬಿಳಿ ಧೋತರ ನಡುವಿಗೆ ಕಟ್ಟಿದೆ, ಬಿಸಿಲಿನಿಂದ ರಕ್ಷಣೆಗೋ ಎನ್ನುವಂತೆ. ತಲೆಗೆ ಒಂದು ನಾಲ್ಕು ಮೊಳದ ಬಿಳಿ ಚೌಕ ಸುತ್ತಿದೆ. [illegible] ನೇಗಿಲು, ಇದೇ ಪ್ರಜಾಪ್ರಭುವಿನ ವಸ್ತ್ರಾಲಂಕಾರ. ಮಂಡಿಯ ಕೆಳಗೆ ಪಾದದ ವರೆಗೂ ಕಾಣುವ ಬಲವಾದ ಕಾಲು ಕಂಭಗಳು, ನಡುವಿನ ಮೇಲೆ ಕೃಶವಾದ ಹೊಟ್ಟೆ. ವಿಶಾಲವಾದ ಎದೆ, ದೃಢವಾದ ಭುಜ ತೋಳುಗಳು. ಗುಂಡಗೆಯ ಬಲವಾದ ಕತ್ತು. ಹೀಗೆ ಎಲ್ಲೆಲ್ಲೂ ತೆರೆದ ಮೈಮೇಲೆಲ್ಲಾ ಸ್ನಾಯುಗಳು ಜೀವಂತವಾಗಿವೆಯೋ ಏನೋ ಎನ್ನುವ ಹಾಗೆ ಕಟ್ಟು ಕಟ್ಟಾಗಿ ಎದ್ದು ಕಾಣಿಸುತ್ತಿವೆ. ನೇರವಾಗಿ ಎದುರಿಗೆ ದೂರದಲ್ಲಿ ಏನನ್ನೋ ನೋಡುತ್ತಿರುವಂತಹ ಥಳಥಳಿಸುವ ಕಣ್ಣುಗಳು. ಜೊಂಪೆ ಜೊಂಪೆಯಾಗಿ ಇಳಿಬಿದ್ದಿರುವ ಗುಂಗುರು ಕೂದಲುಗಳು, ಪೂರ್ತಿ ಬೆಳೆದ ಮೀಸೆ, ಐದಾರು ದಿನಗಳ ದಾಡಿ– ಇಂತಹ ಪ್ರಜಾಪ್ರಭುವಿನ ಭವ್ಯ ಮೂರ್ತಿಯ ಎದುರಿಗೆ ನಿಂತರೆ ಆತನ ಹಿರಿಮೆಯೂ ನೋಡುವ ಭಕ್ತನ ಕಿರಿಮೆಯೂ ಅನುಭವವಾಗುತ್ತಿತ್ತೆನ್ನುವುದು ನಿಜ.

ಮಹಾನಗರದಲ್ಲಿ ಮಾತ್ರವಲ್ಲದೆ ದ್ವೀಪದ ಇತರ ಊರುಗಳಲ್ಲಿಯೂ ಪಂಚವರ್ಷೀಯ ಜಾತ್ರಾಕ್ಷೇತ್ರಗಳಲ್ಲಿ ಅಲ್ಲಿಯ ಸ್ಥಿತಿಗತಿಗನುಸಾರವಾಗಿ ಮಂಟಪ ಕಟ್ಟಿ ಪ್ರಜಾಪ್ರಭುದೇವನನ್ನು ಸ್ಥಾಪಿಸುತ್ತಿದ್ದರು.

ಪ್ರಜಾಪ್ರಭುದೇವ ಅವತರಿಸಿದಾಗ ಹೊನ್ನಿಗರ ರೂಪ ತಾಳಲಿಲ್ಲ, ಮುನ್ನಿಗರ ರೂಪ ತಾಳಲಿಲ್ಲ ಅಥವಾ ಕಾರಿಗರ ರೂಪವನ್ನೂ ತಾಳಲಿಲ್ಲ. ಆದರೆ ಬಡ ನಾಥ ಜನರ ರೂಪ ತಾಳಿದನಲ್ಲ, ಆ ರೂಪವನ್ನೇ ದೇಶವಾದ್ಯಂತ ಜನ ಈ ಜಾತ್ರೆಯಲ್ಲಿ ಕೊಂಡಾಡುತ್ತಿದ್ದಾರಲ್ಲಾ, ಇಡೀ ವಿಶ್ವವೇ ಹೊಗಳುತ್ತಿದೆಯಲ್ಲಾ ಎಂಬ ಒಂದು ತರಹ ಹೆಮ್ಮೆ ನಾಥ ಜನರ ಹಸಿವನ್ನು ಅರ್ಧ ಇಂಗಿಸಿತ್ತು. ಜಾತ್ರೆಯಲ್ಲಿ ಸದಸ್ಯರಾಗಬೇಕೆಂದು ಬರುವ ಅಭ್ಯರ್ಥಿಗಳೆಲ್ಲ ಅವರು ಬೆಳ್ಳಿಯ ರಥದಲ್ಲಿ ಬರುವ ಮುನ್ನಿಗರಾಗಲಿ, ಇತರರಾಗಲಿ, ತಮ್ಮ ಮುರುಕಲು ಗುಡಿಸಲುಗಳಿಗೆ ಬಂದು ತಮ್ಮ ಕಾಲು ಹಿಡಿದು ಗೋಗರೆದು ಮತವನ್ನು ಬೇಡುತ್ತಾರಲ್ಲ ಎಂಬ ಹೆಮ್ಮೆ ಇನ್ನರ್ಧ ಹಸಿವನ್ನು ಇಂಗಿಸುತ್ತಿತ್ತು. ಮುಂದೆ ಎಂದೋ ಒಂದು ದಿನ ಪ್ರಜಾಪ್ರಭು

ದೇವರ ಪೂಜೆಯ ಫಲವಾಗಿ ಹೊಟ್ಟೆಗೆ ಸಾಕಷ್ಟು ತಿನಿಸು ಸಿಕ್ಕಿ ಹಾಲಿ ತನ್ನ ಎಲುಬಿನ ಪಂಜರದ ಗೊಂಬೆಯಂತಹ ರೂಪ ತೊರೆದು ತಾನು ಸ್ನಾಯುಭರಿತವಾದ ಮೈ, ಥಳಥಳಿಸುವ ಕಣ್ಣುಗಳು, ನಿಂಬೆ ಹಣ್ಣಿನ ಭಾರವನ್ನು ಹೊರುವಂತೆ ಎದ್ದು ನಿಲ್ಲುವ ಮೀಸೆ ಮುಂತಾದ ಉಚ್ಚ ಮಾನವ ಲಕ್ಷಣಗಳುಳ್ಳವನಾದಾಗ ತನ್ನ ರೂಪವೂ ಎದುರಿಗೆ ಕಾಣುವ ಪ್ರಜಾಪ್ರಭುದೇವನ ರೂಪವಂತೆಯೇ ಆಗಬಹುದೋ ಏನೋ ಎಂಬ ಆಸೆಯೂ ಉಂಟಾಗುತ್ತಿತ್ತು.

ಫಾಲ್ಗುನ ಶುದ್ಧ ಪಾಡ್ಯದಿಂದಲೇ ಮಹಾನಗರದಲ್ಲಿ ದ್ವೀಪದ ಮುಖ್ಯ ಜಾತ್ರಾಧಿಕಾರಿಗಳು ಸದಸ್ಯತ್ವಕ್ಕೆ ನಿಂತಿರುವ ಎಲ್ಲಾ ಅಭ್ಯರ್ಥಿಗಳನ್ನೂ ಅವರ ಸಹಾಯಕರನ್ನೂ ಕ್ರಮವಾಗಿ ಬರಮಾಡಿಸಿಕೊಂಡು ಅವರಿಗೆ ನಿಯಮದ ಪ್ರಕಾರ ಸೂಚಿಸಿರುವ ಅರ್ಹತೆ ಇದೆಯೇ—ಎಂದರೆ ಅವರಿಗೆ ವ್ಯವಸ್ಥಾ ಸಹಸ್ರದ ಗೊತ್ತಾದ ಭಾಗಗಳು ಕಂಠಪಾಠವಾಗಿದೆಯೇ ಎನ್ನುವುದನ್ನು ಪರೀಕ್ಷಿಸಿ ಇಲ್ಲದವರನ್ನು ತಿರಸ್ಕರಿಸುತ್ತಿದ್ದರು.

ಶ್ವೇತೀಯರ ಕಾಲದಲ್ಲಿ ಅವರು ತಮ್ಮ ಶ್ವೇತದ್ವೀಪದ ರಾಜಕೀಯ ಕ್ರೀಡಾಂಗಣದಲ್ಲಿ ಬಹಳ ಮುಂದುವರಿಸಿದ್ದ ಪಕ್ಷ- ಪ್ರತಿಪಕ್ಷ ಸಿದ್ಧಾಂತವನ್ನು ಸ್ಥಾಪಿಸಿ ನಾಥದ್ವೀಪೀಯ ರಾಜಕಾರಣಿಗಳಲ್ಲಿ ಈ ಸಿದ್ಧಾಂತದ ಮೂಲ ತತ್ವದ ಬಗ್ಗೆಯೂ ಅದನ್ನು ಕಾರ್ಯರೂಪಕ್ಕೆ ತರಲು ಬೇಕಾದ ವಿವರಗಳಲ್ಲೂ ವಿಶೇಷವಾದ ಅಭಿರುಚಿ ಹುಟ್ಟಿಸಿದ್ದರು. ಪಕ್ಷಗಳು ನಾ ಮುಂದು ತಾ ಮುಂದು ಎಂದು ಮೇಲೆ ಬಿದ್ದು ಜನಸೇವೆ ನಡೆಸುತ್ತವೆ ಎನ್ನುವುದು ಮೂಲ ಸಿದ್ಧಾಂತ. ಒಂದೊಂದು ಪಕ್ಷಕ್ಕೂ ಒಂದು ಗುರುತು. ಸಂಕೇತ ಇರಬೇಕು. ಈ ಗುರುತನ್ನು ದ್ವೀಪ ಸರ್ಕಾರ ಒಪ್ಪಿರಬೇಕು. ಅಭ್ಯರ್ಥಿಗಳು ಇಂತಹ ಒಂದಲ್ಲ ಒಂದು ಪಕ್ಷಕ್ಕೆ ಸೇರಿರಬೇಕು ಇವೇ ಮುಂತಾ

ದುವು ಕೆಲವು ವಿವರಗಳು. ನಾಥ ಪೌರಾಣಿಕರು ದ್ವೀಪವನ್ನು ಸಂದರ್ಶಿಸಿದಾಗ ಅವರು ಕಂಡ ಪಕ್ಷಗಳೂ ಅವುಗಳ ಗುರುತುಗಳೂ (ಕಂಸಗಳಲ್ಲಿ ಕೊಟ್ಟಿರುವಂತೆ) ಹೀಗಿದ್ದವಂತೆ: ನಾಥ ಸೇವಾ ಪಕ್ಷ (ತೆಂಗಿನ ಮರ), ನಾಥ ಜನ ಪಕ್ಷ (ಈಚಲ ಮರ) ಎಂಬ ಎರಡು ದೊಡ್ಡ ಪಕ್ಷಗಳು, ನಾಥ ದ್ವೀಪ ಪಕ್ಷ, (ಬೆಕ್ಕು), ದ್ವೀಪ ಸೇವಾ ಪಕ್ಷ (ಹುಲಿ) ಎಂಬ ಎರಡು ಮಧ್ಯಗಾತ್ರದ ಪಕ್ಷಗಳು, ಸರ್ವಸಾಮಾನ್ಯ ಸೇವಾ ಪಕ್ಷ( ನಾಯಿ), ದರಿದ್ರ ನಾರಾಯಣ ಸೇವಾ ಪಕ್ಷ (ಆಡು), ಕಾರ್ಮಿಕ ಸೇವಾ ಪಕ್ಷ (ಖರ) ಎಂಬುವು ಸಣ್ಣ ಪಕ್ಷಗಳು.

"ನಮ್ಮ ಪಕ್ಷವೇ ನಾಥ ದ್ವೀಪದ ಸಮಸ್ಯೆಗಳನ್ನೆಲ್ಲಾ ಎದುರಿಸಬಲ್ಲದು, ನಿಮ್ಮ ಜೀವನದಲ್ಲಿ ಇದುವರಿವಿಗೂ ಕಂಡುಬಾರದ ಸುಧಾರಣೆಗಳನ್ನು ತರಬಲ್ಲದು," "ನಾನು ತಾನೆ ನಿಮ್ಮ ಆಪ್ತ ಮಿತ್ರ, ಸ್ವಾಮಿಭಕ್ತ ಸೇವಕನಂತೆ ಸೇವೆ ಸಲ್ಲಿಸಬಲ್ಲೆ. ನಿಮ್ಮ ಮತ್ತು ನಿಮಗೆ ಸೇರಿದವರ ಮತದಾನದ ಬಿಲ್ಲೆಗಳನ್ನು ನನ್ನ ಅಂಕಿತವಿರುವ ಪಾತ್ರದಲ್ಲಿ ಹಾಕಿ, "ಜ್ಞಾಪಕವಿರಲಿ ನನ್ನ ಅಂಕಿತ ನಿಮ್ಮ ಪ್ರಿಯವಾದ ಈಚಲ ಮರ (ಅಥವಾ ತೆಂಗಿನ ಮರ)" "ಮರೆಯಬೇಡಿರಿ ನಿಮ್ಮ ನಾಯಿ ನಿಮಗೆ ಭಕ್ತಿಯಿಂದ ಸೇವೆ ಸಲ್ಲಿಸುವಂತೆ ನಾನು ಸಲ್ಲಿಸುತ್ತೇನೆ, ನನ್ನ ಅಂಕಿತ ನಾಯಿಯೇ" ಹೀಗೆ ಅಭ್ಯರ್ಥಿಗಳು ನಾಥರನ್ನು ಬೇಡಿಕೊಳ್ಳುತ್ತಿದ್ದರು. ಅವರಲ್ಲಿ ವಯಸ್ಸಾದವರ ಕಾಲನ್ನು ಮುಟ್ಟಿ ತಮ್ಮ ಕಣ್ಣಿಗೊತ್ತಿಕೊಂಡು ತಮ್ಮ ಗೌರವವನ್ನೂ ತೋರಿಸುತ್ತಿದ್ದರು.

ಎಲ್ಲಾ ಅಭ್ಯರ್ಥಿಗಳೂ ತಮ್ಮ ಭಾಷಣವಾದ ಮೇಲೆ ಅಲ್ಲಿ ಸೇರಿದ್ದವರಿಗೆ ಲಡ್ಡು, ಮೋದಕ, ಇತ್ಯಾದಿಗಳನ್ನು ಹಂಚುತ್ತಿದ್ದರು. ಇನ್ನೂ ಶ್ರೀಮಂತರಾಗಿದ್ದ ಮತಯಾಚಕರು ಪೂರಿ–ಪಾಯಸದ ಊಟ ಹಾಕಿಸುತ್ತಿದ್ದರಂತೆ. ಇದು ಯಾವುದೂ ಅಂದಿನ ಜಾತ್ರಾ ನಿಯಮಗಳ ಪ್ರಕಾರ ನಿಷಿದ್ಧವಾಗಿರಲಿಲ್ಲವಂತೆ. ನಿಜವಾಗಿಯೂ ಅಂದಿನ ಮತದಾರರು ಭಾಗ್ಯಶಾಲಿಗಳು.

ಮತಯಾಚನೆಗೆ ನವಮಿಯಿಂದ ಮೂರು ದಿನಗಳ ಕಾಲ ಗೊತ್ತಾಗಿತ್ತು. ನಾಲ್ಕನೆಯ ದಿನ, ಎಂದರೆ ದ್ವಾದಶಿ ದಿನ, ವಿರಾಮ, ಲಡ್ಡು– ಮೋದಕ ಪೂರಿ– ಪಾಯಸವನ್ನೆಲ್ಲಾ ಜೀರ್ಣಿಸಿಕೊಳ್ಳುವುದಕ್ಕೆ ಇರಬಹುದು. ಐದನೆಯ (ತ್ರಯೋದಶಿ) ದಿನ ಜಾತ್ರೆಯ ಸಂಭ್ರಮದ ದಿನ, ಮಹಾಪೂಜೆಯ ದಿನ.

ಆ ದಿನ ಬೆಳಿಗ್ಗೆ ಎಂಟು ಗಂಟೆಯಿಂದಲೇ ಮಂಗಳಾರತಿಯಿಂದ ಪೂಜಾರಂಭ. ಗಂಟೆಗೊಂದು ಮಂಗಳಾರತಿಯಂತೆ ಸಾಯಂಕಾಲ ಆರು ಗಂಟೆಯ ಆರತಿಯವರೆಗೂ ಜನಗಳು ಅವರವರಿಗೆ ಅನುಕೂಲವಾದ ಹೊತ್ತಿನ ತಂಡದಲ್ಲಿ ಸೇರಿ ಮಂಗಳಾರತಿ ಮಾಡಿಸಿ, ತಮ್ಮ ಮತವನ್ನು ಮತಪಾತ್ರೆಯಲ್ಲಿ ಹಾಕಿ ಹೋಗುತ್ತಿದ್ದರು.

ಎಂಟು ಗಂಟೆಗೆ ಮೊದಲೇ ಜನ ಸೇರುತ್ತಿದ್ದರು. ನಾಥ ಜನಗಳಲ್ಲಿ ಅರ್ಧ ಅಥವಾ ಇನ್ನೂ ಹೆಚ್ಚು ಮಂದಿ ದೇವರು ಕೊಟ್ಟಂತಹ ತಮ್ಮ ತಮ್ಮ ಸ್ವಂತ ಕಾಲು ವಾಹನಗಳನ್ನೇ ಆಶ್ರಯಿಸಿ ಪ್ರಜಾಪ್ರಭುದೇವನ ಮಂಟಪಕ್ಕೆ ಬಂದು ಸೇರುತ್ತಿದ್ದರು. ಉಳಿದವರು ತಮ್ಮ ತಮ್ಮ ಅಂತಸ್ತಿಗೆ ಸರಿಯಾದ ಇತರ ವಾಹನಗಳಲ್ಲಿ ಬರುತ್ತಿದ್ದರು. ಈ ವಾಹನಗಳೆಲ್ಲಾ ಮಂಟಪದ ಮುಂದೆ ಇದ್ದ ವಿಶಾಲವಾದ ಬಯಲಿನಲ್ಲಿ ಬಿಟ್ಟಿದ್ದ ಕ್ರಮ ನೋಡುವುದೇ ಒಂದು ಸ್ವಾರಸ್ಯವಾದ ನೋಟವಾಗಿತ್ತಂತೆ. ನಾಥ ಜನರ ನಾಡುಕತ್ತೆ, ಕಟ್ಟಿದ ಬಿದಿರು ಬಂಡಿಗಳು ಮಂಟಪಕ್ಕೆ ಐನೂರು ಗಜ ದೂರದಲ್ಲಿ ಬಿಟ್ಟಿರುತ್ತಿದ್ದವು. ಅಲ್ಲಿಂದ ಸ್ವಲ್ಪ ಮುಂದಕ್ಕೆ ಬಂದರೆ ಕಾರಿಗರ ಮರದ ಬಂಡಿಗಳು ಬಿಟ್ಟಿದ್ದು, ಇವುಗಳನ್ನು ಎಳೆಯುವ ಸಿಂಧೂ ಪ್ರಾಂತ್ಯದ ಖರ (ಹೇಸರಗತ್ತೆ)ಗಳೂ ಹತ್ತಿರದಲ್ಲೇ ಕಟ್ಟಿರುತ್ತಿದ್ದವು. ಇವುಗಳ ಸಂಪರ್ಕವಿಲ್ಲದಂತೆ, ಮಂಟಪಕ್ಕೆ ಅನತಿ ದೂರದಲ್ಲಿ ಮನುಷ್ಯರ

ಹಿಮಾಲಯದ ಘೋಟ (ನಾಡು ಕುದುರೆ) ಕಟ್ಟಿದ ಗಂಧದ ಮರದ ರಥಗಳೂ ಮತ್ತು ಧನಿಕ ಮುನ್ನಿಗರ ಬೆಳ್ಳಿಯ ರಥಗಳೂ ಅವುಗಳಿಗೆ ಕಟ್ಟಿದ ಅರಬಾಶ್ವಗಳೂ ಬಿಟ್ಟಿರುತ್ತಿದ್ದವು. ಇನ್ನೂ ಸ್ವಲ್ಪ ಮುಂದೆ, ರಥದಿಂದಿಳಿಯುವ ಮಹಾಶಯರು ಹೆಚ್ಚು ನಡೆಯದೆ ಇರಲೆಂದು, ಮಂಟಪದ ಮಹಾದ್ವಾರಕ್ಕೆ ಕೇವಲ ಮುವ್ವತ್ತು ನಲವತ್ತು ಗಜಗಳ ದೂರದಲ್ಲಿ ಸ್ವರ್ಣಸ್ಥರ ಚಿನ್ನದ ರಥಗಳು ನಿಂತಿರುತ್ತಿದ್ದವು. ಒಂದೊಂದು ರಥದ ಮುಂದೆಯೂ ಚಿನ್ನದ ಜರತಾರಿ ಪೋಷಾಕು ಧರಿಸಿದ ಸಾರಥಿ ನಿಂತಿರುತ್ತಿದ್ದ. ಈ ರಥಗಳಿದ್ದ ಜಾಗದ ಪಕ್ಕದಲ್ಲಿಯೇ ಒಂದು ಸಣ್ಣ ಮಂಟಪದಲ್ಲಿ ಅವುಗಳನ್ನು ಎಳೆಯುವ ಹಾಲು-ಬಿಳಿ ಅರಬಾಶ್ವಗಳನ್ನು ಕಟ್ಟಿರುತ್ತಿದ್ದರು. ಒಂದೊಂದು ಅಶ್ವವನ್ನು ನೋಡಿಕೊಳ್ಳುವುದಕ್ಕೆ ಇಬ್ಬರು ಅಶ್ವಸೇವಕರು. ಒಬ್ಬ ಅದರ ಮೈಯನ್ನು ತಿಕ್ಕಿ ಸೇವೆ ಮಾಡುತ್ತಿರುವಾಗಲೇ ಇನ್ನೊಬ್ಬ ಅದರ ಮುಂದುಗಡೆಯೇ ನಿಂತು ತನ್ನ ಕೈಯಲ್ಲಿದ್ದ ಬೆಳ್ಳಿಯ ತಾಂಬಾಳದಿಂದ ಮಸಾಲಾ ಸೊಪ್ಪು, ಕೊಬ್ಬರಿ–ಬೆಲ್ಲ, ಕಡಲೆ ಬೇಳೆ, ಬೆಲ್ಲದ ಉಂಡೆ ಮುಂತಾದುವನ್ನು ತೆಗೆದುಕೊಂಡು ಕಾದಿದ್ದು, ಅದು ಬಾಯಿ ತೆಗೆದಾಗ ಸ್ವಲ್ಪ ಸ್ವಲ್ಪವಾಗಿ ಅಕ್ಕರೆಯಿಂದ ತಿನ್ನಿಸುತ್ತಿದ್ದ.

ಮಂಟಪದ ಮಹಾದ್ವಾರದೊಳಗೆ ಪ್ರವೇಶಿಸುವಾಗ ಕಂಡ ಈ ದೃಶ್ಯವನ್ನು ನೋಡಿದ ಅನೇಕ ನಾಥ ಜನರಿಗೆ ತಮ್ಮ ಮನೆಮಾತಿನಲ್ಲಿ ಬಳಕೆಯಲ್ಲಿದ್ದ, "ನಾಥರ ಮನೇಲಿ ಕೂಸಾಗಿ ಹುಟ್ಟೋಕಿಂತ ಹೊನ್ನಿಗರ ಮನೇಲಿ ಕುದುರೆಯಾಗಿ ಹುಟ್ಟೋದು ಲೇಸು" ಎಂಬ ಗಾದೆಯ ಅರ್ಥ ಉಂಟಾಗುತ್ತಿತ್ತು.

ಬೆಳಿಗ್ಗೆ ಪ್ರಜಾಪ್ರಭುದೇವನಿಗೆ ಮೊದಲನೆಯ ಮಂಗಳಾರತಿ ಆಗುವುದಕ್ಕೆ ಅರ್ಧ ಗಂಟೆ ಮುಂಚಿತವಾಗಿಯೇ ಭಕ್ತರ ಸಂದಣಿ ಸೇರಿರುತ್ತಿತ್ತು. ನಾಥರ ಉದ್ದವಾದ ಸಾಲು, ಕಾರಿಗರ ಚಿಕ್ಕ ಸಾಲು, ಇಪ್ಪತ್ತು ಮುವ್ವತ್ತು ಜನಗಳಿಗಿಂತ ಹೆಚ್ಚಿರದ ಮುನ್ನಿಗ ಹೊನ್ನಿಗರ ಪುಟ್ಟ ಜಂಟಿ ಸಾಲು. ಹೀಗೆ ಭಕ್ತರು ಮೂರು ಸಾಲುಗಳಲ್ಲಿ ನಿಂತುಕೊಳ್ಳುತ್ತಿದ್ದರು. ಮಂಗಳಾರತಿ ಪ್ರಾರಂಭವಾಗುವವರೆಗೂ ಮುನ್ನಿಗರೂ ಹೊನ್ನಿಗರೂ ಘನವಾದ ರಾಜಕೀಯ ಆರ್ಥಿಕ ಸಮಸ್ಯೆಗಳ ಬಗ್ಗೆ ಒಬ್ಬರೊಡನೊಬ್ಬರು ಮಾತಿನಲ್ಲಿ ಮಗ್ನರಾಗಿದ್ದರೆ ಕಾರಿಗರು ಆ ವರ್ಷದ ಫಸಲು ಬೆಲೆವಾಸಿಗಳು ಮುಂತಾದ ವಿಚಾರಗಳನ್ನು ಚರ್ಚೆ ಮಾಡುತ್ತಿದ್ದರು. ನಾಥರೂ ಹೊತ್ತು ಹೋಗಲು ಅದೂ ಇದೂ ಮಾತಾಡುತ್ತಿದ್ದುದನ್ನು ನಾಥ ಪೌರಾಣಿಕರು ಅಂದಿನ ಸಂಸ್ಕೃತದಲ್ಲಿ ಹೇಳಿರುವುದನ್ನು ನಮ್ಮ ಇಂದಿನ ಕನ್ನಡದಲ್ಲಿ ಸುಮಾರು ಇಂದಿನ ಪರಿಸ್ಥಿತಿಗೆ ಹೊಂದಿಕೊಳ್ಳುವ ಹಾಗೆ ಹೇಳಿದರೆ ಹೀಗೆ ಇರುತ್ತದೆ.

"ಏನು ಸಂಗಣ್ಣ, ಈ ಸಲ ಯಾರಿಗೆ ಕೊಡ್ತೀ ನಿನ್ನ ಮತಾನ ?"

---

"ಈ ಸಲ ತೆಂಗಿನ ಮರದ ಧನಂಜಯರಾಜನಿಗೆ ಹಾಕೋಣ ಅಂತಿದ್ದೀನಿ. ಈ ಸಲ ಆತನು ಕೊಟ್ಟ ಭಾಷಣ ಕೇಳಿದ ಮೇಲೆ ಆತನಿಗೇ ಕೊಡಬೇಕು ಅಂತ ಮನಸ್ಸು ಬಂತು."

"ಹೋದ ಸಲ ನೀನು ಈಚಲ ಮರದ ಕುಬೇರಯ್ಯನಿಗೆ ಕೊಟ್ಟಿದ್ದೆಯಲ್ಲಾ. ಆತ ಕೂಡ ಈ ಸಲ ಭಾಳ ಚೆನ್ನಾಗಿ ಭಾಷಣ ಮಾಡಿದ. ಈ ಸಲ ಯಾಕೆ ನಿನ್ನ ಮತ ಹೀಗೆ ಬದಲಾಯಿಸ್ತೀ?"

"ಹೌದು ಇಬ್ಬರ ಭಾಷಣಾನೂ ಚೆನ್ನಾಗಿತ್ತು ಅನ್ನು. ಇಬ್ಬರೂ ನಮಗೆ ಬೇಕಾದ್ದೆಲ್ಲ ಮಾಡ್ತೀವಿ, ನಿಮ್ಮ ಮನೆಗಳಿಗೆ ಕಲಶ ಕಟ್ಟಿಸ್ತೀವಿ ಅಂತೆಲ್ಲಾ ಹೇಳಿದರು, ಆದರೆ..."

"ಆದರೆ?"

"ಆದರೆ ಒಂದು ಗುರುತಿಗೇ ಒಂದು ಆಸಾಮಿಗೆ ಸಲ ಸಲಾನೂ ಕೊಡಬೇಕು ಅಂತ ಏನಾದರೂ ಕಟ್ಟಳೆ ಇದೆಯೋ? ನಮಗಂತೂ ಬೇರೆ ಏನೂ ಇಲ್ಲ, ನೆನ್ನೆ ಹಾಗೆ ಈವತ್ತು, ಈವತ್ತಿರೋ ಹಾಗೆ ನಾಳೆ, ಒಂದೇ ಗತಿ. ಆದರೆ ನಮ್ಮ ಮತದಿಂದಲಾದರೂ ಒಬ್ಬ ಬದುಕಲಿ, ಒಬ್ಬನ ಬಾರಿ ಆದ ಮೇಲೆ ಇನ್ನೊಬ್ಬ ಬರಲಿ, ಒಬ್ಬ ಉಪ್ಪರಿಗೆ ಮನೆ ಕಟ್ಕೊಂಡು ಬೆಳ್ಳಿ ರಥದಲ್ಲಿ ಹೋಗ್ತಾ ಬರ್ತಾ ಇರೋ ಹಾಗೆ ಮಾಡಿದ್ಮೇಲೆ ಈಗ ಇನ್ನೊಬ್ಬರಿಗೆ ಸಹಾಯ ಮಾಡೋಣ ಅಂತ. ಕವಡೆಶಾಸ್ತ್ರ ನೋಡಿದೆ, ಅದರಲ್ಲೂ ತೆಂಗಿನ ಮರಕ್ಕೇ ಹಾಕು ಎಂದು ಹೇಳಿತು. ನೀನೇನ್ಮಾಡ್ತೀ?"

"ಸುಮ್ಮನೆ ಕೇಳಿದೆ ಅಷ್ಟೇ. ನಾ ಮಾಡೋದೂ ಹಾಗೇ. ಹೋದ ಸಲ ಧನಂಜಯ್ಯನ ಪಾತ್ರೇಲಿ ಹಾಕ್ದೆ ನನ್ನ ಮತಾನ, ಅದ್ಕಂದ ಈ ಸಲ ಕುಬೇರಯ್ಯನ ಪಾತ್ರೇಲಿ ಹಾಕ್ತೀನಿ."

"ನೀ ಹೇಳಿದ್ದ ಸರೀನ್ನು. ಆದರೆ ನೀನೂ ಯಾತಕ್ಕೆ ನಿಂತ್ಕೊ ಕೂಡದು ಒಂದು ಸಲ ಅಂತ ಕೇಳ್ತೀನಿ. ನೀನು ಬರ್ಸ ಪತ್ತಯ್ಯನ ಮನೇಲಿ ಚಿಕ್ಕಂದಿನಿಂದ ಕೆಲಸಕ್ಕಿದ್ದಾಗ ಅವರ್ರ ನಿನಗೆ ಅವರು ಹೇಳಿಕೊಟ್ಟ ವಿದ್ಯಾಕ್ಷರಕ್ಕ, ಮಂತ್ರ ಎಲ್ಲಾ ನಿನ್ಗೆ ಬಾಯಿಗ್ಬಂದಿದೆ ಅಂತೀ"

"ಸರಿ, ನನಗೇನೋ ಬರುತ್ತೆ. ಆದರೆ ನನ್ನೊತೇಲಿ ನಮ್ಮ ಮನೆ ನಾಲ್ಕು ಮಂದಿ ಹೆಸರು ಕೊಟ್ಟರ ತಾನೆ; ಜನ ಈತನ ಮನೇವ್ರು ಈತನ ಕೆಲಸದಲ್ಲಿ ನೆರವಾಗ್ತಾರೆ ಅಂತ ತಮ್ಮ ಮತ ನನಗೆ ಕೊಡ್ತಾರೆ? ಅವರ್ಗೆ ಯಾವ ಶತ್ಕಾನೂ ಬರೋಲ್ಲ, ದಶ್ಕಾನೂ ಬರೊಲ್ಲ. ನನ್ನ ಯಾವ ಪಕ್ಷದವರು ನಿಲ್ಲಿಸ್ತಾರೆ? ಕಡೇಗೆ ಆಡಿನ ಪಕ್ಷದವರೂ ನಿಲ್ಲಿಸೋಲ್ಲ. ನನ್ನ ಹೆಸರ್ಗೆ ಯಾರು ಕುಮ್ಮಕ್ಕು ಕೊಡ್ತಾರೆ? ಯಾರೂ ಇಲ್ಲ. ಸದಸ್ರಾಗೋಕೆ ನಿಲ್ಲೋವ್ರೆಲ್ಲ ಒಬ್ಬರಿಗೊಬ್ಬರು ಚೆನ್ನಾಗಿ ಪರಿಚೆ ಇರೋ ಜನಗಳು. ಈ ಸಲ ನಾನು, ಮುಂದಿನ ಸಲ ನೀನು ಎಂದು ಬದಲಾಯಿಸ್ಕೊಂಡು ಬರ್ತಾರೆ. ಅಲ್ದೆ ನನ್ನಂಥಾವ್ರು ನಿನ್ನಂಥಾವ್ರು, ಬೆಳಗ್ಗೆ ಊಟಕ್ಕಿದ್ರೆ ರಾತ್ರಿಗಿಲ್ಲ ಅನ್ನೋವ್ರು, ಊರಿನ ಮಂದಿಗೆಲ್ಲ ಜಾತ್ರೇಲಿ ಊಟ ಹಾಕಿ ಲಡ್ಡು ಮೋದಕ ಹಂಚೋಕೆ ನೂರು ಬೆಳ್ಳಿ–ವರಹ ಬೇಕಲ್ಲ ಯಾರು ಕೊಡ್ತಾರೆ ? ಒಳ್ಳೇ ಭಾಷಣ ಮಾಡಿ ಮಂದಿ ಎಲ್ಲ ಚಪ್ಪಾಳೆ ಹೊಡೆಯೋ ಹಾಗೆ ಇಲ್ಲದ್ದು ಸಲ್ಲದು ಎಲ್ಲಾ ಊದ್ಬೇಕಲ್ಲ ಆ ಪಾಟಿ ನಾಲಿಗೆ ಎಲ್ಲಿದೆ ನಿನ್ಗಾಗಲಿ ನನ್ಗಾಗಲಿ. ಆದಕ್ಕೇನೆ ನೋಡು ಬಡವ ನಿನ್ನ ಮರ್ಗಧಾಂಗಿರು ಎಂದು ಹೇಳೋದು ದೊಡ್ಡವರು. ಆಗಲಿ, ಆಗಲಿ, ನಮ್ಮ ಮೊಮ್ಮಕ್ಳೋ ಮರಿಮಕ್ಳೋ ಬರ್ತಾರೆ ಸದಸ್ರಾಗಿ, ಇವರ್ಗಿಂತೇನೆ ಅಥವಾ ಇನ್ನೂ ಮೀರ್ಸಿ ಮಾಡ್ತಾರೆ ಪರ್ಜಾ ಪರ್ಭುಗ ಪೂಜೆ, ಬಿಡೋಲ್ಲ. ಅದುವರೆಗೂ ಹೇಗೋ ಗಂಜಿ ಅಂಬಲಿ ಕುಡಕೊಂಡು ಇರೋಣ...ನೋಡು ಮಂಗಳಾರ್ತಿಗೆ ಎಲ್ಲಾ ಅಣಿಯಾಗಿದ್ದಾರೆ...ಓ ಪ್ರಭೂ, ಮಾದೇವಾ..."

ಮಂಗಳಾರತಿ ಆದ ಮೇಲೆ ನಾಥರ ಸಾಲಿನಲ್ಲಿ ಮೊದಲು ನಿಂತಿದ್ದ ಒಂದು ಸಂಸಾರದವರು, ತಂದೆ, ತಾಯಿ, ವೃದ್ಧ ಮಾತಾಪಿತೃಗಳು, ಮೂರು ಚಿಕ್ಕ ಮಕ್ಕಳು, ಒಟ್ಟು ಏಳು ಮಂದಿ ಮುಂದೆ ಹೋದರು. ಗರ್ಭಗೃಹದ ಬಾಗಿಲಿನಲ್ಲಿ ಕುಳಿತಿದ್ದ ಒಬ್ಬ ಅಧಿಕಾರಿ ಒಬ್ಬೊಬ್ಬರ ಹಣೆ ಮೇಲೂ ಒಂದು ಕೆಂಪು ಬಣ್ಣದ ಬೊಟ್ಟು ಇಟ್ಟ. ಇದು ಸಾಕ್ಷಾತ್ ಪ್ರಸಾದ ವಿಗ್ರಹಕ್ಕೆ ಹಿಂದಿನ ದಿನ ಅಲಂಕಾರ ಮಾಡಿದ್ದ ಗುಲಾಬಿ ಬಣ್ಣ. ಇದು ದೇವರ ಪ್ರಸಾದವಾದ್ದರಿಂದ

ಭಕ್ತಿಯಿಂದ ತಲೆ ಬಾಗಿ ಹಣೆಗೆ ಹಚ್ಚಿಸಿಕೊಳ್ಳು- ತ್ತಿದ್ದರು. ಇದರ ಇನ್ನೊಂದು ಐತಿಹ್ಯವೇ ನೆಂದರೆ ಇದು ಎಷ್ಟು ತೊಳೆದುಕೊಂಡರೂ ಮೂರು ನಾಲ್ಕು ದಿನ ಅಳಿಸುತ್ತಿರಲಿಲ್ಲ. ನಿಜ ವಾದ ಭಕ್ತಿ ಇದ್ದವರಿಗೆ ಒಂದು ವಾರ ಪೂರಾ ಬಾಡದೆ ನಿಂತಿರುತ್ತಿತ್ತು. ಜಾತ್ರೆಗೆ ಹೋಗಿದ್ದ ಎಂದು ದೂರದಿಂದಲೇ ತೋರಿಸುತ್ತಿತ್ತು.

ಬೊಟ್ಟಿಡುವ ಅಧಿಕಾರಿ ಪಕ್ಕದಲ್ಲೇ ಬಿಲ್ಲೆ ಕೊಡುವ ಅಧಿಕಾರಿ ಕಾದು ನಿಂತಿರುತ್ತಿದ್ದ. ಬೊಟ್ಟು ಹಾಕಿಸಿಕೊಂಡು ತನ್ನ ಮುಂದೆ ಹೋಗುವ ಸಂಸಾರದ ಮನೆ ಮಂದಿ ಎಣಿಸಿ ತಲೆಗೊಂದು ಬಿಲ್ಲೆಯಂತೆ– ವಯಸ್ಸಿನ ನಿಯಮವೇನೂ ನಾಥ ದ್ವೀಪದಲ್ಲಿರಲಿಲ್ಲ. ಈ ವಿಚಾರದಲ್ಲಿ ಆಧುನಿಕ ಕಾಲದ ನಿಯಮಗಳಿಗಿಂತ ತೀರ ಮುಂದುವರಿ ದಿತ್ತು. ಅಷ್ಟು ಹಿತ್ತಾಳೆ ತಗಡಿನ ಬಿಲ್ಲೆ ಗಳನ್ನು ಸಂಸಾರದ ಮುಖ್ಯಸ್ಥನ ಕೈಗೆ ಒಪ್ಪಿ- ಸುತ್ತಿದ್ದ. ಬಿಲ್ಲೆಯ ಮೇಲೆ ಒಂದು ಕಡೆ ನಾಥ ದ್ವೀಪ ಸರಕಾರದ ಗುರುತು ನಾಥರ ಬಂಡಿಯ ಚಕ್ರ ಮತ್ತು ಇನ್ನೊಂದು ಕಡೆ ನಾಥ ಜನರ ಜೀವನೋಪಾಯದ ಮುಖ್ಯ ಉಪಕರಣ ನೇಗಿಲು, ಇವುಗಳ ಮುದ್ರೆ ಹಾಕಿರುತ್ತಿತ್ತು.

ಬಿಲ್ಲೆಗಳನ್ನು ತೆಗೆದುಕೊಂಡು ನಾಥ ತನ್ನ ಮನೆ ಮಂದಿಯವರೊಡನೆ ಗರ್ಭಗೃಹದೊಳಗೆ ಪ್ರವೇಶಮಾಡಿದ ಮೇಲೆ ಎಲ್ಲರೂ ಎದುರಿ ಗಿದ್ದ ಆಜಾನುಬಾಹುವಾದ ತಮ್ಮ ಕುಲದೇವರ ದರ್ಶನ ಮಾಡುತ್ತಾ ಒಂದು ಕ್ಷಣ ಕಾಲ ನಿಂತಿರುತ್ತಿದ್ದರು. ಆ ಮೇಲೆ ನಾಥ ತನ್ನ ಮನೆ ಮಂದಿಗೆಲ್ಲ ಒಂದೊಂದು ಬಿಲ್ಲೆ ಹಂಚಿ ತಾನೂ ಒಂದನ್ನು ಕೈಯಲ್ಲಿಟ್ಟುಕೊಂಡು ಸ್ವಲ್ಪ ಮುಂದೆ ಹೋಗಿ ದೇವರ ಚರಣ ಕಮಲಗಳಡಿ ಯಲ್ಲಿಟ್ಟಿದ್ದ ಆರೇಳು ಮುಚ್ಚಿದ್ದ ಗೋಲಕ ಪಾತ್ರಗಳಲ್ಲಿ ಯಾವುದರ ಮೇಲೆ ತನಗಿಷ್ಟ ವಾದ ಚಿಹ್ನ (ತೆಂಗಿನ ಮರ, ಈಚಲ ಮರ, ನಾಯಿ, ಬೆಕ್ಕು, ಇತ್ಯಾದಿ) ಚಿತ್ರಿತವಾಗಿತ್ತೋ

ಆ ಪಾತ್ರದ ಮುಚ್ಚಳದಲ್ಲಿದ್ದ ಕಂಡಿಯ ಮೂಲಕ ತನ್ನ ಬಿಲ್ಲೆಯನ್ನು ಒಳಗೆ ಸೇರಿಸುತ್ತಿದ್ದ ಅಪ-ನಾದ ನಂತರ ಅವನ ಮನೆ ಮಂದಿಯೆಲ್ಲ, ಅದೇ ಪಾತ್ರೆಯೊಳಗೆ ತಮ್ಮ ಬಿಲ್ಲೆಗಳನ್ನು ಹಾಕುತ್ತಿದ್ದರು. ಗರ್ಭಗೃಹದಿಂದ ಒಂದು ಪಕ್ಕದಲ್ಲಿದ್ದ ಚಿಕ್ಕ ಬಾಗಿಲಿನ ಮೂಲಕ ಹೊರ ಬೀಳುವಾಗ ಅಲ್ಲೇ ಕುಳಿತಿದ್ದ ಒಬ್ಬ ಅಧಿಕಾರಿ ಒಬ್ಬೊಬ್ಬರ ಕೈಯಲ್ಲೂ ಒಂದೊಂದು ದೊಡ್ಡ ಲಡ್ಡು ಪ್ರಸಾದವನ್ನು ಹಾಕುತ್ತಿದ್ದ. ಆ ಸಲದ ಜಾತ್ರೆಯ ಕಟ್ಟ ಕಡೆ ಲಡ್ಡು ಅದು, ದ್ವೀಪ ಸರ್ಕಾರ ಭಕ್ತರಿಗೆ ಹಂಚುವ ಮಾಮೂಲು ಲಡ್ಡು.

ಇಲ್ಲಿಗೆ ನಾಥ ಜನಗಳ ಮಟ್ಟಿಗೆ ಪಂಚ ವರ್ಷೀಯ ಜಾತ್ರೆ ಕೆಲಸ ಮುಗಿಯಿತು ಎಂದು ಹೇಳಬಹುದು.

ಮಾರನೆ ದಿನ ಮಹಾನಗರದ ಪ್ರಜಾಪ್ರಭು ದೇವನ ಮುಂದೆಯೇ ದ್ವೀಪದ ಮುಖ್ಯ ನ್ಯಾಯಾಧಿಕಾರಿಗಳ ಸಮ್ಮುಖದಲ್ಲಿ ಅಭ್ಯರ್ಥಿಗಳ ಮತ ಪಾತ್ರದ ಮೊಹರನ್ನು ಒಡೆದು ಒಳಗಿರುವ ಬಿಲ್ಲೆಗಳನ್ನು ಎಣ್ಣಿಸಿ ಗೆದ್ದವರ ಹೆಸರನ್ನು ಅಧಿಕೃತವಾಗಿ ಸಾರುತ್ತಿದ್ದರು.

ಫಾಲ್ಗುನ ಶುದ್ಧ ಪುಣ್ಣಿಮೆ ದಿನ ಸಂಜೆ ಏಳು ಗಂಟೆಗೆ ವಿಜೇತ ಅಭ್ಯರ್ಥಿಗಳು ಮಹಾನಗರದ ಪ್ರಜಾಪ್ರಭುದೇವನ ಮುಂದೆ ದ್ವೀಪಾಧ್ಯಕ್ಷ, ಶ್ರೇಷ್ಠ ನ್ಯಾಯಾಧೀಶ ಇವರುಗಳ ಸಮ್ಮುಖದಲ್ಲಿ ನಿಂತು ಮುಂದಿನ ಐದು ವರ್ಷಗಳ ಕಾಲ ತಾವು ತಮ್ಮ ಸ್ವಂತ ಹಿತಕ್ಕಿಂತ ಮೊದಲು ನಾಥ ಜನರ ಹಿತವನ್ನು ಎಂತಹ ಕಷ್ಟನಿಷ್ಠುರಗಳು ಬಂದರೂ ಅನುಭವಿಸಿ ನಾಥ ಜನರ ಸೇವೆ ಸಲ್ಲಿಸುತ್ತೇವೆಂದು ಶಪಥ ಗ್ರಹಿಸಿದ ಮೇಲೆ ಮಂಗಳಾರತಿ ನಡೆಯುತ್ತಿತ್ತು.

ಫಾಲ್ಗುನ ಬಹುಳ ಪಾಡ್ಯದ ದಿನ ಪ್ರಾತಃ ಕಾಲ ನೂತನ ನಾಥ ಸಭಾ ಸದಸ್ಯರು ಪ್ರಜಾಪ್ರಭುವಿನ ಭವ್ಯ ಕೃಷ್ಣ ಮೃತ್ತಿಕಾಮೂರ್ತಿಯನ್ನು ಸಕಲ ವೈಭವದೊಡನೆ ಮಹಾನಗರಕ್ಕೆ ಸ್ವಲ್ಪ ದೂರದಲ್ಲೇ ಹರಿಯುತ್ತಿದ್ದ ನಾಥಗಂಗಾ ನದೀ ತೀರಕ್ಕೆ ಉತ್ಸವದಲ್ಲಿ ಬಿಜಯ ಮಾಡಿಸಿಕೊಂಡು ಹೋಗಿ ನಾವೇ ಹತ್ತಿ ಪ್ರವಾಹದ ಮಧ್ಯದಲ್ಲಿ ವರ್ಜಿಸಿ ಹಿಂದಿರುಗುತ್ತಿದ್ದರು.

ಪ್ರಜಾಪ್ರಭುವಿನ ಭೌತಿಕ ಮೂರ್ತಿ ನೀರಿನಲ್ಲಿ ಲೀನವಾಗಿ ಕಣ್ಮರೆಯಾದರೂ ಅಂದಿನಿಂದ ಮುಂದಿನ ಐದು ವರ್ಷಗಳ ಕಾಲವೂ ಆತನ ಅಂತರ್ಮೂರ್ತಿ ಮಾತ್ರ ನೂತನ ನಾಥ ಸಭಾಸದಸ್ಯರ ಹೃದಯದಲ್ಲೇ ನೆಲಸಿ ನಾಥ ಜನರ ಉದ್ಧಾರಕ್ಕೆ ಅವರನ್ನು ಸದಾ ಪ್ರಚೋದಿಸುತ್ತಿತ್ತು ಎಂದು ನಾಥ ಪೌರಾಣಿಕರು ಬರೆದಿದ್ದಾರೆ.

ನಮಗೆ ಸಿಕ್ಕಿದ ತಾಡಪತ್ರ ಪ್ರತಿಗಳಲ್ಲಿ ಪುರಾಣ ಇಲ್ಲಿಗೆ ಮುಕ್ತಾಯವಾಗಿದೆ. ✿

---

**ನಿಮ್ಮ ಮಗುವನ್ನು ನಿಮ್ಮೊಡನೆ ವಾಯುಸೇವನೆಗೆಂದೋ ತಿರುಗಾಡಲೆಂದೋ ಕರೆದೊಯ್ಯುವುದರ ಬದಲು ನೀವು ಮಗುವಿನೊಡನೆ ತಿರುಗಾಡಿ ನೋಡಿ. ಜಗತ್ತನ್ನು ಆತನ ದೃಷ್ಟಿಯ ಮೂಲಕ ನೋಡಲು ಪ್ರಯತ್ನಿಸಿ – ಹೊಸತನ ಕಾಣುತ್ತದೆ. ಮಗುವಾಗಿರಬೇಕು ಅನಿಸುತ್ತದೆ ಮಗುವಿನೊಂದಿಗೆ ಮಗುವಾಗಿರುವ ಸಮಾಧಾನ ನಿಮ್ಮ ಪಾಲಿಗಾದರೆ ಸಂಗಾತಿತನದ ಸಮಾಧಾನ ನಿಮ್ಮ ಮಗುವಿಗಾಗುತ್ತದೆ.**

**—ಲಾರೆನ್ಸ್ ಕೆ. ಫ್ರ್ಯಾಂಕ್ಲಿನ**

---

Printed & published by G. Vamadev, Charity Commissioner, Belgaum, Receiver for movable property of Loka Shikshana Trust, at Samyukta Karnataka Press, Koppikar Road, Hubli-580 020. Rept : Bombay : V. Satyamurthy Phone: 522412; Calcutta : H. Majumdar 46-4233; Madras : K. A. Subramanian Phone : 842201; New Delhi : P. R. Chopra Phone : 714130.

KASTURI PRICE: 2-00 Regd. No. KRNG 43
*Registered with the Registrar of Newspapers for India under No. 3533/57*

# ನಾವು ಬಿಸ್ಕತ್‌ಗಳನ್ನು ಹೆಚ್ಚು ಪುಷ್ಟಿದಾಯಕ ಹಾಗೂ ರುಚಿಕರವಾಗಿ ತಯಾರಿಸುತ್ತೇವೆ.

## ಅದು ನಮ್ಮ ಅನುಭವದ ಸಿದ್ಧಿ.




ಬಿಸ್ಕತ್ ತಯಾರಿಕೆಯಲ್ಲಿ ಒಂದು ದಶಕದಿಂದ ಪರಿಣತೆಯನ್ನು ಸಾಧಿಸಿದ್ದೇವೆ. ಅತ್ಯುತ್ತಮ ಬಿಸ್ಕತ್‌ಗಳನ್ನು ಒದಗಿಸಬೇಕೆಂಬುದೇ ನಮ್ಮ ದೃಢ ನಿರ್ಧಾರ. ಇದು ಸಾಧ್ಯವಾಗಿರುವುದು ಅತ್ಯುತ್ತಮ ಹಾಗೂ ನವೀನ ಯಂತ್ರೋಪಕರಣದ ಬಳಸುವಿಕೆಯಿಂದ ಮತ್ತು ಬಿಸ್ಕತ್ ತಯಾರಿಕೆಯಲ್ಲಿ ನಾವು ಹೊಂದಿರುವ ನಿಪುಣತೆಯಿಂದ.

ಬಿಸ್ಕತ್ ತಯಾರಿಕೆಯಲ್ಲಿ ನೂರು ವರ್ಷಗಳಿಂದಲೂ ಹೆಚ್ಚಿಗೆ ಪ್ರಾವೀಣ್ಯತೆಯನ್ನು ಹೊಂದಿರುವ "ಲೀಗಾ ಬಿಸ್ಕತ್" ಕಂಪನಿಯೊಂದಿಗೆ ನಾವು ಬೆಳೆಸಿಕೊಂಡಿದ್ದು ಪ್ರೀತಿ, ವಿಶ್ವಾಸ ಹಾಗೂ ಮೈತ್ರಿ. ನಮ್ಮ ಅಂತಿಮ ಗುರಿ ನಿಮಗೆ ರುಚಿಕರ, ಪುಷ್ಟಿದಾಯಕ ಹಾಗೂ ಗರಿಗರಿ ಬಿಸ್ಕತ್‌ಗಳನ್ನು ಒದಗಿಸಬೇಕೆಂಬುವುದು. ಏಕೆಂದರೆ ನಿಮಗೆ ಅತ್ಯುತ್ತಮ ಬಿಸ್ಕತ್‌ಗಳನ್ನು ಪಡೆಯುವ ಹಕ್ಕು ಇದೆ.

ಕ್ವಾಲಿಟಿ ಗ್ಲೂಕೋಸ್ ಹಾಗೂ ಮಾರಿ ಬಿಸ್ಕತ್‌ಗಳು.







ಕ್ವಾಲಿಟಿ
ಫುಡ್ ಪ್ರಾಡಕ್ಟ್ಸ್

# ಕ್ವಾಲಿಟೀಸ್